# ಕರ್ನಾಟಕ ಜನಜೀವನ


ಬರೆದವರು :

**ಬೆಟಗೇರಿ ಕೃಷ್ಣಶರ್ಮ**



ಕರ್ನಾಟಕ ವಿದ್ಯಾವರ್ಧಕ ಸಂಘದ
ಸುವರ್ಣಮಹೋತ್ಸವದ
ಪ್ರಕಟನೆ

೧೯೩೯

ಸಾದಾ ಪ್ರತಿಗೆ ೧-೮-೦ ] [ ಕ್ಯಾಲಿಕೊ ಪ್ರತಿಗೆ ೨-೦-೦

# ಮುಡಿಪು

ತನ್ನ ಸದಾಚಾರಯುಕ್ತ ವಿದ್ಯಾರ್ಥಿಜೀವನದಿಂದಲೂ,
ಸದಭಿರುಚಿಗೆ ತಕ್ಕುದಾದ ಸಾಹಿತ್ಯರಸಿಕತೆಯಿಂದಲೂ,
ಅನುಭವವೃದ್ಧರಂತಹ ಮುಂಗಂಡ ನಡೆ-ನುಡಿಯಿಂದಲೂ,
ಹರಿತವಾದ ಅಲಗಿನಂತಹ ಬುದ್ಧಿಯ ಮೊನೆಯಿಂದಲೂ,
ನನ್ನ ಬಾಳಿನ ಮೇಲೆ ಬೆಳಕನ್ನು ಚೆಲ್ಲಿದ-
ನಮ್ಮ ಮನೆತನಕ್ಕೊಂದು ಅಲಂಕಾರವಾಗಿದ್ದ-
ಕನ್ನಡನಾಡಿಗೂ ಆವಶ್ಯಕವೆನಿಸಬಹುದಾಗಿದ್ದ-

**ನನ್ನ ತಮ್ಮ**

## ದಿವಂಗತ ವಿಜಯೇಂದ್ರನ ದಿವ್ಯಜೀವನಕ್ಕೆ

**ಇದೊಂದು ಚಿಕ್ಕ ಮುಡಿಪು ಸಲ್ಲಲಿ!**

—ಬರೆಹಗಾರ

# ಇದೇ ಲೇಖಕರ ಬೇರೆ ಗ್ರಂಥಗಳು

## ಅಚ್ಚಾದುವು

ಮುದ್ದನ ಮಾತು ( ಕವನ ಸಂಗ್ರಹ )
ಅರುಣೋದಯ ( ,, )
ವಿರಹಿಣಿ ( ಗೀತಕವನ ಸಂಗ್ರಹ )
ಬಡತನದ ಬಾಳು ( ಕಥಾ ಸಂಗ್ರಹ )
ಸಂಸಾರಚಿತ್ರ ( ,, )
ನಮ್ಮ ಬದುಕು ( ,, )
ಸುದರ್ಶನ ( ಸಾಮಾಜಿಕ ಕಾದಂಬರಿ )
ರಾಜಯೋಗಿ ( ಐತಿಹಾಸಿಕ ಕಾದಂಬರಿ )
ಅಶಾಂತಿಪರ್ವ ( ,, )
ಹಳ್ಳಿಗರ ಹಾಡು ( ಜನಪದ ಸಾಹಿತ್ಯ ವಿಮರ್ಶೆ )
ಶ್ರೀಬಸವಣ್ಣನವರು ( ಮಕ್ಕಳಿಗಾಗಿ ಚರಿತ್ರೆ )
ಭಾವಗೀತ ( ಹರಿದಾಸ-ಶಿವಶರಣರ ಗೀತ ಸಂಗ್ರಹ )

## ಬೇಗನೆ ಅಚ್ಚಾಗಬೇಕಾದುವು

ಒಡನಾಡಿ ( ಕವನ ಸಂಗ್ರಹ )
ಕಾರಹುಣ್ಣಿವೆ ! ( ,, )
ಹಾಳುಹಳ್ಳಿ ( ಸಾಮಾಜಿಕ ಕಾದಂಬರಿ )

# ಮೊದಲ ಮಾತು

ಮುಂಬಯಿ ಸರಕಾರದವರಿಂದ ಏರ್ಪಡಿಸಲಾದ ಕನ್ನಡ ಸಂಶೋಧನ-ಸಂಸ್ಥೆಯ ಪ್ರಕಟನೆ ಎಂದು ಶ್ರೀ. ಕವಿಭೂಷಣ ಬೆಟಗೇರಿಯವರ ಈ ಪ್ರಸ್ತುತ ಗ್ರಂಥವು ಹೊರಬೀಳುವುದರಿಂದ 'ಸಂಶೋಧನೆ' ಎಂಬುದರ ವಿಷಯವಾಗಿಯೆ ನನಗೆ ತೋರಿದ ನಾಲ್ಕು ಮಾತುಗಳನ್ನು ಇಲ್ಲಿ ಹೇಳಲು ಬಯಸುತ್ತೇನೆ. ಅದಲ್ಲವಾದರೆ ಈ ಸಂದರ್ಭದಲ್ಲಿ ನಾನು ಹೇಳಬೇಕಾದ ಮಾತುಗಳಾದರೂ ಯಾವುವು; ಅಥವಾ ನನ್ನಂತಹನು ಹೇಳಬೇಕೆಂಬ ಅಗತ್ಯವಾದರೂ ಏನಿದೆ? ನನ್ನ ಅಭ್ಯಾಸವಿಷಯ ಸಂಸ್ಕೃತಸಾಹಿತ್ಯ; ಕವಿಭೂಷಣರು ನಾನು ವಿದ್ಯಾರ್ಥಿದಶೆಯಲ್ಲಿದ್ದಾಗಿನಿಂದಲೆ ತಮ್ಮ ಪ್ರತಿಭೆ-ಪರಿಶ್ರಮಗಳಿಂದ ಕರ್ನಾಟಕಕ್ಕೆ ಪ್ರಿಯರು, ಪರಿಚಿತರು. ಆದ್ದರಿಂದ ಪ್ರಾಸಂಗಿಕವಾದ ಸಾಮಾನ್ಯಮಾತುಗಳನ್ನು ಹೇಳುವುದೆ ನನಗೆ ಅಪರಿಹಾರ್ಯವಾಗಿದೆ.

'ಸಂಶೋಧನೆ'ಯ ವಿಷಯವಾಗಿಯೆ ಹೇಳಬೇಕೆಂಬ ನನ್ನ ಹಟಕ್ಕೆ ಇನ್ನೊಂದು ಕಾರಣವಿದೆ. ಇಂದಿನ ಕರ್ನಾಟಕದಲ್ಲಿ ಈ ವಿಷಯದ ಸ್ವರೂಪ, ಮಹತ್ತ್ವ, ಆವಶ್ಯಕತೆ ಇವುಗಳ ಜ್ಞಾನ ಕಡಮೆ. ಸಂಶೋಧನ ಮಂದಿರಗಳಾಗಲಿ, ಮಂಡಳಗಳಾಗಲಿ ಊರಿಗೊಂದು ಹನುಮಪ್ಪನಂತೆ ನಿಂತಿರಬಹುದು. ಆದರೆ ಹನುಮಪ್ಪನಂತೆ ಅವು ಊರ ಹೊರಗಾಗಲಿ, ಮುಖ್ಯ ವಿಷಯದಿಂದ ಮುಖ ತಿರುಗಿಸಿಯಾಗಲಿ ನಿಂತಿವೆ. ಇದುವರೆಗೆ ಕಲ್ಪನೆಯ ಪುಂಡಾಟಿಕೆಯೆ 'ಸಂಶೋಧನೆ'ಯ ಸೋಗು ಹಾಕಿಕೊಂಡು ಮೆರೆಯುತ್ತಿದ್ದಿತು; ಈಗಲಾದರೂ ವಿಮರ್ಶೆಯಾವುದು, ಸಂಶೋಧನೆಯಾವುದು ಎಂಬುದು ಅನೇಕ ಪಂಡಿತರೆನಿಸಿಕೊಳ್ಳುವವರಿಗೆ ಕೂಡ ಸ್ಫುಟವಾದಂತಿಲ್ಲ. ಮುಂಬಯಿ ಸರಕಾರದವರು ನಿಯಮಿಸಿದ ಮೊದಲ ಕನ್ನಡ ಸಂಶೋಧನಾ ಸಮಿತಿಯ ಸದಸ್ಯ ನಾನಾಗಿದ್ದೆ. ಆಗ ನಮ್ಮೆದುರು ಬಂದ 'ಸಂಶೋಧನ' ಗ್ರಂಥಗಳನ್ನು ನಾವು ಕಂಡಿದ್ದೇವೆ, ಪ್ರೋತ್ಸಾಹಬುದ್ಧಿಯಿಂದ ಕೊಂಡಾಡಿದ್ದೇವೆ. ಆ ಅನುಭವದಿಂದ ಎಚ್ಚರುಗೊಂಡೇ ಈಗ ಕೆಲವು ಮಾತುಗಳನ್ನು ಹೇಳಬೇಕಾಗಿದೆ.

ಸಂಶೋಧಕನಲ್ಲಿ ಇರಬೇಕಾಗಿದ್ದ ಮುಖ್ಯ ಎರಡು ಗುಣಗಳೆಂದರೆ ಒಂದು ಐತಿಹಾಸಿಕ ಪ್ರಾಮಾಣಿಕತೆ, ಇನ್ನೊಂದು ಸಮಗ್ರದೃಷ್ಟಿ. ಮರೆತು ಬಿಟ್ಟ ಕೊಡೆಯನ್ನು ಹುಡುವುದು ಸಂಶೋಧನೆಯಲ್ಲ, ಕಸದಲ್ಲಿ ಕಳೆದ ಸೂಜಿಯನ್ನು ಹುಡುಕುವುದು ಸಂಶೋಧನೆಯಲ್ಲ; ನಿಜವಾದ ಸಂಶೋಧಕ ನಿಗೆ ಹುಡುಕುವ ಬುದ್ಧಿಯೆ ಇರುವುದಿಲ್ಲ. ಇದ್ದಲ್ಲಿ ಎಲ್ಲವನ್ನೂ ಕಾಣ ಬೇಕೆನ್ನುವ ಸೂಕ್ಷ್ಮ ಕುತೂಹಲ ಅವನದು. ಇಲ್ಲದ್ದನ್ನು ಹುಡುಕಿ ಹೋಗಿ ಗೆಳೆಯಬೇಕೆಂಬ ಕಲ್ಪನಾತ್ಮಕ ಹಂಬಲ ಅವನದಲ್ಲ. ಅದಕಾಗಿಯೆ ಅವನಲ್ಲಿ ಸಮಗ್ರದೃಷ್ಟಿ ಇರುವುದೆಂದು ಹೇಳಿದ್ದು. ಅಲ್ಲೊಂದು ಇಲ್ಲೊಂದು ವಸ್ತುವನ್ನು ಕಂಡುಹಿಡಿದ ಮಾತ್ರಕ್ಕೆ ಅವನಿಗೆ ಸಮಾಧಾನವಿಲ್ಲ. ಆ ವಸ್ತು ವಿಗೆ ಸಂಬಂಧಿಸಿದ ಇಡಿಯ ವಿಷಯವನ್ನೆ ತಿಳಿದುಕೊಳ್ಳುವ ಚಪಲ ಅವನಿಗೆ. ಎಲ್ಲಿಯೊ ಒಂದೆರಡು ಮಾತು ಹೊಂದದಿದ್ದರೆ ಅವುಗಳನ್ನು ಅವನು ಕಲ್ಪಿಸುವು ದಿಲ್ಲ; ಹೊಂದಿಕೆಯಾದ ಮೇಲೆ ಅದು ತನಗೆ ಸರಿಬೀಳದ್ದೆನಿಸಿದರೆ ಅದನ್ನು ಬಚ್ಚಿಡುವುದಿಲ್ಲ. ಇದೇ ಐತಿಹಾಸಿಕ ಪ್ರಾಮಾಣಿಕತೆ; ಈ ಪ್ರಾಮಾಣಿಕತೆ ಯಿಂದ ಸಿದ್ಧಗೊಂಡುದೇ ಸಂಶೋಧನ.

ಹೀಗೆ ಬರೆಯುತ್ತ ಹೋದರೆ ಬೇರೊಂದು ಪ್ರಬಂಧವನ್ನು ನಡೆಯಿಸುವ ಅಧಿಕಪ್ರಸಂಗಕ್ಕೆ ಒಳಗಾಗಬೇಕಾದೀತು. ಅದಕಾಗಿ ಪ್ರಸ್ತುತವಾದ ಒಂದೆರಡು ದೃಷ್ಟಾಂತಗಳಿಂದ ನಮ್ಮಲ್ಲಿ ರೂಢವಾದ ಅಸಂಬದ್ಧ ಸಂಶೋ- ಧನೆಯ ಸ್ವರೂಪವನ್ನು ತೋರಿಸಿಕೊಡುವೆ. ಸದ್ಯಕ್ಕೆ ಕರ್ನಾಟಕದ ರಾಜಕೀಯ ಜೀವನದಲ್ಲಿ ಒಂದು ಜಾತೀಯದೃಷ್ಟಿ ಬಂದಿದೆ, ಪ್ರಾಂತಿಕ ಜೀವನದಲ್ಲಿ ಒಂದು ಭಾವನಾತ್ಮಕ ದೃಷ್ಟಿ ಬಂದಿದೆ. ಈ ಎರಡು ದೃಷ್ಟಿಗಳೂ ನಮ್ಮ ಸತ್ಯಸಂಶೋಧನಾ ಮಾರ್ಗದಲ್ಲಿ ಮುಸುಕನ್ನು ಕೆಡಹಿವೆ. ಪ್ರತಿ ಯೊಂದು ಸಂಗತಿಯನ್ನು ತಮ್ಮ ಜಾತಿಗೆ ಅನ್ವಯಿಸಿ ತೋರಿಸುವುದು ಇಲ್ಲವೆ ತಮ್ಮ ಪ್ರಾಂತಕ್ಕೆ ಅನ್ವಯಿಸಿ ತೋರಿಸುವುದು ; ಇಂತಹ ಬುದ್ಧಿಯ ಅಪ್ರಾಮಾಣಿಕತೆಯು ನಮಗೆ ಮಾರ್ಗದರ್ಶಕವಾಗಿದೆ. ನನ್ನ ಜಾತಿಯು ವೈಭವವನ್ನು ಎಲ್ಲೆಡೆಯಲ್ಲೂ ಹುಡುಕುವ, ನನ್ನ ಕರ್ನಾಟಕದ ಸಾಮ್ರಾಜ್ಯ ವನ್ನೆ ದಶದಿಕ್ಕುಗಳಲ್ಲಿ ಕಾಣುವ ಆತ್ಮವಂಚನೆಯ, ಸಂಕುಚಿತ ದೃಷ್ಟಿಯ ಬುದ್ಧಿಯ ಡೊಂಬರಾಟವು ನನ್ನ ಸಂಶೋಧನಾಸಾಮರ್ಥ್ಯವೆನಿಸುವುದು. ಸಂಶೋಧನೆಯು ಕುತೂಹಲದಲ್ಲಿ ಹುಟ್ಟಿ, ಜ್ಞಾನದಲ್ಲಿ ಪರ್ಯವಸಾನ ಹೊಂದುವ ನೈಸರ್ಗಿಕ-ಅರ್ಥಾತ್ ಪ್ರಾಮಾಣಿಕ-ಪ್ರವೃತ್ತಿ ಎಂಬುದನ್ನು ನಾವು ಮರೆವಂತಿಲ್ಲ.

ಸ್ವಜಾತೀಯ ಸಾಹಿತ್ಯ, ಸ್ವಧರ್ಮ, ಸ್ವದೇಶ ಇವುಗಳಿಗಾಗಿ ಸಂಶೋಧನೆ ಮಾಡುವುದೆ ತಪ್ಪು ಎಂದು ನಾನು ಹೇಳುವುದರ ಅರ್ಥವಲ್ಲ; ಸಂಶೋಧಕನ ಬುದ್ಧಿ ಪ್ರಾಮಾಣಿಕವಾಗಿರಲೇ ಬೇಕು ಎಂಬುದನ್ನು ಒತ್ತಿ ಹೇಳುವುದು ನನ್ನ ಉದ್ದೇಶವಾಗಿದೆ. ಪ್ರಕೃತ ಗ್ರಂಥದ ಪುಟ ೧೮೬ ರಲ್ಲಿ ಹೇಳಿದ 'ವೀರಕಾವ್ಯಗಳಿಲ್ಲದುದರ ಕಾರಣಮೀಮಾಂಸೆ' ಎಂಬ ಮಾತು ಇಂದಿನ ಕನ್ನಡಾಭಿಮಾನಿಗಳಿಗೆ ಎಷ್ಟು ರುಚಿಸಬಹುದೊ! ಇಷ್ಟೇಕೆ— 'ಕರ್ನಾಟಕವೂ ಕನ್ನಡವೂ ಎಂದಿನಿಂದಲೂ ಸರ್ವಾಂಗಪರಿಪೂರ್ಣ' ಎಂದು ಶ್ರೀ. ಬೆಟಗೇರಿಯವರೆ ಹೇಳುವುದನ್ನು ಎಷ್ಟು ಜನ ನಾವು ಚಿಕ್ಕವರು ಕೇಳಿ ಚಪ್ಪಾಳೆ ತಟ್ಟಿಲ್ಲ? ಹೀಗಿದ್ದರೂ ಸಂಶೋಧಕವೃತ್ತಿಯಿಂದ ನಡೆದ ಕೃಷ್ಣ-ಶರ್ಮರು, ಈ ಪ್ರಸಂಗದಲ್ಲಿ ಆ ಅಭಿಮಾನ-ಅಹಂಕಾರಗಳನ್ನು ಬಿಟ್ಟುಕೊಟ್ಟಿದ್ದಾರೆ. ಕನ್ನಡದಲ್ಲಿ ವೀರಕಾವ್ಯಗಳಿಲ್ಲವಲ್ಲ ಎಂದು ದುಃಖಾಶ್ರುಗಳನ್ನು ಸುರಿಸಬೇಕಾಗಿಲ್ಲ ಇಲ್ಲಿ. 'ಕನ್ನಡದಲ್ಲಿ ವೀರಕಾವ್ಯಗಳೆ ಇಲ್ಲ. ಯಾಕೆ? ಇಷ್ಟರಲ್ಲಿ ೧೭ನೆಯ ಶತಮಾನದಲ್ಲಿ ಮೊದಲಿನದೆನಿಸಬಹುದಾದ ವೀರಕಾವ್ಯ ಒಂದಿದೆ. ಯಾಕೆ? ..?..?' ಹೀಗೆ ಇದ್ದ ಸಂಗತಿಗಳನ್ನೆಲ್ಲ ಒಪ್ಪಿಕೊಂಡು, 'ಯಾಕೆ-ಯಾಕೆ?' ಎಂದು ಅವುಗಳ ಗುಟ್ಟನ್ನರಿತುಕೊಂಡು, ಒಂದೇ ಜನಾಂಗದಲ್ಲಿ ಹೀಗೆ ಪರಿಸ್ಥಿತಿ ಬದಲಾಯಿಸಿತು, ಅದರ ಕ್ರಮವೇನು-ಎಂದು ಕೇಳಿ, ಏಕಸೂತ್ರಬದ್ಧವಾಗಿ ಆ ವಿಷಯದ ಜ್ಞಾನವನ್ನು ಮಾಡಿಕೊಳ್ಳುವುದು ಇಲ್ಲಿ ಉದ್ದೇಶವಾಗಿದೆ. ಈ ಧೋರಣೆಯನ್ನನುಸರಿಸಿದಾಗ, ಅಲ್ಲೊಂದು ಇಲ್ಲೊಂದು ಗೊತ್ತಾದ ಸಂಗತಿಗಳನ್ನು ಪೋಣಿಸುವಾಗ-ಸಂಶೋಧಕರು **ಚಾರಣಕವಿ ಗೋವಿಂದವೈದ್ಯ**ನ ಕಾಲದ ಕರ್ನಾಟಕದ ಮತ್ತು ಕನ್ನಡರ ಜೀವನದ ಒಂದು ಸಮಗ್ರಚಿತ್ರವನ್ನು ಚಿತ್ರಿಸಿದ್ದಾರೆ. ಇದುವರೆಗೆ ನಮ್ಮ ಇತಿಹಾಸದಲ್ಲಿ ದೊರೆಯದ, ಆದರೆ ಐತಿಹಾಸಿಕ ಜ್ಞಾನಕ್ಕೆ ಅಗತ್ಯವಾದ ಕೆಲವು ಸಂಗತಿಗಳನ್ನು ಕಂಡು ಹಿಡಿದಿದ್ದಾರೆ. ಪ್ರತಿ ಶಬ್ದಕ್ಕೆ ತಲೆ ತೂಗುವ ವಿಮರ್ಶೆ ಬೇರೆ, ಪ್ರತಿಯೊಂದು ಶಬ್ದವನ್ನೆ ತೂಗುವ ಸಂಶೋಧನೆ ಬೇರೆ.

ಕೇವಲ ಇದುವರೆಗೆ ಯಾರೂ ಅರಿಯದ ಸಂಗತಿಗಳನ್ನು ಕಾಣಿಸಿದ ಮಾತ್ರಕ್ಕೆ ಸಂಶೋಧನೆ ಎನಿಸುವುದಿಲ್ಲ; ಕಾಣಿಸಿದ ಸಂಗತಿಗಳು ಕಾರಣ-ಯುಕ್ತವಾಗಿರಬೇಕು. ಇಲ್ಲವಾದರೆ ಪರಮಾತ್ಮನನ್ನು ಶೋಧಿಸುವ ಭಕ್ತನ ಅನುಭವದಂತೆ ಈ ಸಂಶೋಧನೆ ಪರರಿಗಾಗಿ ಪ್ರಕಟಿಸಲು ಯೋಗ್ಯವೆನಿಸುವುದಿಲ್ಲ. ಶ್ರೀಮಾನ್ ಬೆಟಗೇರಿಯವರು ಎರಡನೆಯ ಪ್ರಬಂಧದಲ್ಲಿ ಕಾಣಿಸಿದ

ಕನಕದಾಸರ ಮೋಹನತರಂಗಿಣಿಯ ಚರ್ಚೆ (ಪು. ೮೦) ಈ ಮಾತಿಗೆ ದೃಷ್ಟಾಂತವಾಗಿದೆ. ಸಂಪ್ರದಾಯ–ಧರ್ಮಾಭಿಮಾನ ಪಂಥಪಕ್ಷಪಾತ–ಕಾವ್ಯಲಕ್ಷಣ ಇವುಗಳ ವಿರೋಧಪರ್ವತಗಳನ್ನು ದಾಟಿ 'ತರಂಗಿಣಿ'ಯ ಉಗಮವನ್ನು ಕಂಡು ಹಿಡಿಯುವ ಸತ್ಯಾನ್ವೇಷಣ ಬುದ್ಧಿ ಇಲ್ಲಿದೆ. ಆ ಬುದ್ಧಿಯಿಂದಲೆ ಎಲ್ಲ ಲಕ್ಷಣಕಾವ್ಯಗಳಲ್ಲೂ ಇರಬೇಕಾಗಿದ್ದ ನಗರವರ್ಣನೆಯಲ್ಲಿ ಇಲ್ಲಿ ಬೇರೊಂದು ಮಹತ್ತ್ವವನ್ನು ಕಂಡುಹಿಡಿಯಲಾಗಿದೆ. ಗ್ರಂಥಕರ್ತರ ಸಂಶೋಧನೆಯಿಂದ ಆಗಿನ ಕಾಲದ ಸಾಮಾನ್ಯಜನರ ಜೀವನದ ತದ್ರೂಪ ಪರಿಚಯ ನಮಗಾಗುವುದು. ಇದು ಐತಿಹಾಸಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಎಷ್ಟು ಮಹತ್ವದ್ದೆಂದು ಬೇರೆ ಹೇಳಬೇಕಾಗಿಲ್ಲ.

ಸಂಶೋಧನಾಭ್ಯಾಸ ದೃಷ್ಟಿಯಿಂದ ಎಲ್ಲಕ್ಕಿಂತಲೂ ಮಹತ್ತ್ವದ್ದೆಂದರೆ '**ಕನ್ನಡಿಗರ ಕೋಟೆಗಾಳಗ**'ಎಂಬ ಮೊದಲನೆಯ ಪ್ರಬಂಧ. ಇಲ್ಲಿ ಕಾಣಿಸಿದ ವಿಷಯವು ಪ್ರಾಚೀನಕಾಲದ ವಾಸ್ತು–ರಾಜ್ಯಪದ್ಧತಿ–ಯುದ್ಧನೀತಿ ಇವುಗಳಿಗೆ ಸಂಬಂಧಿಸಿದೆ. ಗ್ರಂಥಕರ್ತರು ಕನ್ನಡಕಾವ್ಯಗಳಿಂದ ಆಯ್ದು ತೋರಿಸಿದ ಕೋಟೆಯ ಪರಿಚಯವು ಸಂಸ್ಕೃತಸಾಹಿತ್ಯಾಭ್ಯಾಸಿಗಳಿಗೂ ಒಂದು ಕಾರಣದಿಂದ ಮಹತ್ತ್ವದ್ದೆನಿಸುವುದು. ಕೌಟಿಲ್ಯನ ಅರ್ಥಶಾಸ್ತ್ರ ಎಂಬ ಗ್ರಂಥದಲ್ಲಿ '**ದುರ್ಗವಿಧಾನ**' ಎಂಬುದೊಂದು ಪ್ರಕರಣವಿದೆ. ಅಲ್ಲಿ ಕಾಣಿಸಿದ ಸಂಗತಿಗಳೂ ಸೂಕ್ಷ್ಮವಿವರಗಳೂ ಈ ಕನ್ನಡ ಕಾವ್ಯಗಳ ವರ್ಣನೆಯಲ್ಲಿ ಕಂಡುಬರುವುವು. ಕೌಟಿಲ್ಯನ ಗ್ರಂಥಕ್ಕೆ ಆರ್ಯಸಂಸ್ಕೃತಿಯಲ್ಲಿ ಸನ್ಮಾನವಿಲ್ಲ. ಮನು–ಕಾಮಂದಕ ಮೊದಲಾದವರು ಹಾಕಿಕೊಟ್ಟ ರಾಜನೀತಿಯೆ ವೈದಿಕಕ್ಷತ್ರಿಯರಲ್ಲಿ ಹೆಚ್ಚು ರೂಢವಾಗಿದ್ದಿತು. ಸಂಸ್ಕೃತ ಗ್ರಂಥಗಳಲ್ಲಾಗಲಿ, ಸಂಸ್ಕೃತ ಕಾವ್ಯಗಳ ಯುದ್ಧವರ್ಣನೆಯಲ್ಲಾಗಲಿ ಕೌಟಿಲ್ಯಶಾಸ್ತ್ರದ ಸಂಬಂಧವೆ ಕಂಡು ಬರುವುದಿಲ್ಲ. ವೈದಿಕಸಂಸ್ಕೃತಿಯಲ್ಲಿ ಕೌಟಿಲ್ಯಶಾಸ್ತ್ರಕ್ಕೆ ಸನ್ಮಾನ ದೊರೆಯದಿರುವ ಕಾರಣವೇನು? ಕನ್ನಡ ಕಾವ್ಯಗಳಿಗೆ ಕೌಟಿಲ್ಯ ಗ್ರಂಥದ ನಿಕಟ ಪರಿಚಯವಿದ್ದ ಸಂಗತಿ ಇತಿಹಾಸದ ದೃಷ್ಟಿಯಿಂದ ಮಹತ್ತ್ವದ್ದಿದೆಯೆ? ಉಳಿದ ಎಲ್ಲ ವಿವರಗಳಲ್ಲೂ ಸಂಸ್ಕೃತ-ಕಾವ್ಯಗಳನ್ನೆ ಮಾದರಿಯಾಗಿಟ್ಟುಕೊಂಡರೂ, ಯುದ್ಧವರ್ಣನೆಯಲ್ಲಿಯೆ ಇಂತಹ ವೈಶಿಷ್ಟ್ಯ ಕನ್ನಡ ಕಾವ್ಯಗಳಲ್ಲಿ ಕಂಡುಬರುವುದೇಕೆ? ಕೋಟೆಗಳಾಗಲಿ, ಕೋಟೆಗಾಳಗಗಳಾಗಲಿ ವೈದಿಕ ಸಂಸ್ಕೃತಿಗೆ ಗೊತ್ತಿರಲಿಲ್ಲವೆ? ಕೌಟಿಲ್ಯಶಾಸ್ತ್ರದ ಕಾಲ ಮತ್ತು ಗ್ರಂಥಕರ್ತರಿಗೂ ದ್ರಾವಿಡಸಂಸ್ಕೃತಿಗೂ ನಿಕಟವಾದ, ಸಹಜವಾದ ಸಂಬಂಧವಿದೆಯೆ? ಇಂತಹ ಅನೇಕ ಪ್ರಶ್ನೆಗಳನ್ನು

ಮೊದಲನೆಯ ಪ್ರಬಂಧವು ಹೊಡೆದೆಬ್ಬಿಸುವುದು. ಸಾಂಸ್ಕೃತಿಕ ಇತಿಹಾಸದ ದೃಷ್ಟಿಯಿಂದ ಮಹತ್ತ್ವವುಳ್ಳ ಒಂದು ಸಂಗತಿಯನ್ನು ನಮ್ಮ ಲಕ್ಷ್ಯಕ್ಕೆ ತಂದುಕೊಡಲು ಸಾಕಷ್ಟು ಪ್ರಚೋದಕವಾದ ವಿವರಗಳಿವೆ ಇಲ್ಲಿ.

ಬರೆಯುವ ಭರದಲ್ಲಿ ನಾನು ಪ್ರಸ್ತುತ ಗ್ರಂಥದ ವಿಮರ್ಶೆಗೆ ಬಂದು ಮುಟ್ಟಿದ್ದೆನಾದರೆ ವಿಮರ್ಶಕರು ನನ್ನನ್ನು ಕ್ಷಮಿಸಬೇಕು. ಗ್ರಂಥದ ಬೆಲೆ ಕಟ್ಟುವ ಉದ್ದೇಶ ನನಗಿಲ್ಲ; ವಿಷಯದ ಸ್ವರೂಪ-ಮಹತ್ತ್ವಗಳನ್ನು ತೋರಿಸಿಕೊಡುವುದು. ಸಂಶೋಧನೆಯಲ್ಲಿ ನನಗೆ ಅಭ್ಯಾಸ ಹೆಚ್ಚಿಲ್ಲ, ಅಧಿಕಾರ ಪ್ರಾಪ್ತವಾಗಿಲ್ಲ; ಆದರೂ ವಿದ್ಯಾರ್ಥಿ ಎಂದು ಕೆಲವು ಮಾತು ಗಳನ್ನು ಕಂಡಿರುವೆ. ಅವುಗಳನ್ನು ಹೇಳಲು ಇದೊಂದು ಅವಕಾಶವನ್ನು ಕಲ್ಪಿಸಿಕೊಟ್ಟುದಕ್ಕೆ ಶ್ರೀಮಾನ್ ಬೆಟಗೇರಿ ಕೃಷ್ಣಶರ್ಮರಿಗೆ ನಾನು ಕೃತಜ್ಞನಾಗಿದ್ದೇನೆ. ವಾಚಕರು ನನ್ನ ಅಭಿಪ್ರಾಯವನ್ನು ತಪ್ಪು ತಿಳಿದು ಕೊಳ್ಳಬಾರದೆಂದೇ 'ಮೊದಲ ಮಾತು' ಎಂದು ಮೇಲೆ ಬರೆದಿದ್ದೇನೆ.

ತಾ. ೩೦-೭-೩೯<br>ಕರ್ನಾಟಕ ಕಾಲೇಜ್,<br>ಧಾರವಾಡ.

ಆರ್. ವ್ಹಿ. ಜಾಗಿರದಾರ

# ಮೊದಲಿಗೆ ಮೊದಲು

ಇನ್ನು ಮುಂದೆ ಜಗತ್ತು ಹೀಗೆ ಹೀಗೆ ಇರಬೇಕೆಂದು ಹೇಳಲು ಹೊರಟ ಗ್ರಂಥವಿದಲ್ಲ; ಕನ್ನಡಿಗರ ಜೀವನ ಹಿಂದಿನ ಕಾಲದಿಂದ ಹೇಗೆ ಹೇಗೆ ಹರಿಯುತ್ತ ಬಂದಿದೆಯೆಂಬುದನ್ನು ಪರಿಚಯ ಮಾಡಿಕೊಡಲು ಹೊರಟುದು. ಹೊಸಕಾಲದ ಜೀವನದ ಬೆಳೆಗೆ ಉಪಯುಕ್ತವಾದ ಯಾವುವಾದರೂ ಹಳೆಯ ಬೀಜಗಳು ಈ ಸಂಸ್ಕೃತಿಯ ರಾಶಿಯಲ್ಲಿ ದೊರೆತರೆ ಅವುಗಳನ್ನು ಉಪಯೋಗ ಮಾಡಿಕೊಂಡು ಫಲಗಳನ್ನೂ ಪಡೆಯಬಹುದಾಗಿದೆ.

ನಿಜವಾಗಿ ನೋಡಿದರೆ ಈ ಗ್ರಂಥದಲ್ಲಿ ಈಗಿದ್ದ ಮೂರು ಪ್ರಬಂಧ ಗಳಲ್ಲದೆ ಇನ್ನೂ ನಾಲ್ಕೈದು ಪ್ರಬಂಧಗಳು ಪ್ರಕಟವಾಗಬೇಕಾಗಿದ್ದುವು. ಆದರೆ ಈ ಮೂರು ಪ್ರಬಂಧಗಳೆ ಇದ್ದ ಅವಕಾಶವನ್ನೆಲ್ಲ ಆಕ್ರಮಿಸಿದುದ ರಿಂದ—ಅನುಕೂಲತೆ ದೊರೆತಾಗ—ಮಿಕ್ಕ ಪ್ರಬಂಧಗಳದೊಂದು ಸಂಗ್ರಹ ವನ್ನೂ ಪ್ರಕಟಿಸಬೇಕೆಂಬ ಅಪೇಕ್ಷೆಯಿಟ್ಟುಕೊಂಡಿದ್ದೇನೆ.

ಇಂತಹ ಗ್ರಂಥಗಳನ್ನು ಬರೆಯುವ ಹುಚ್ಚು ಕನ್ನಡನಾಡಿನಲ್ಲಿಯ ಕೆಲವು ಜನರಿಗೆ ಇದೆಯಾದರೂ, ಓದಬೇಕೆಂಬ ಹಂಬಲವು ಮಾತ್ರ ಇನ್ನೂ ಇಲ್ಲಿ ಬಳೆದುಬಂದಿಲ್ಲ. ಎಂತಲೆ ಕನ್ನಡ ಲೇಖಕರು, ಸಂಸ್ಕೃತಿ ಸಂಶೋಧಕ ಗ್ರಂಥಗಳನ್ನು ಬರೆದರೂ, ಅವುಗಳನ್ನು ಪ್ರಕಟಿಸುವಂತಹ ಧೈರ್ಯ ಇಲ್ಲದವ ರಾಗಿರುವರು. ಇಂತಹ ಗ್ರಂಥಗಳ ಪ್ರಕಟನೆಗೆ ಹಾಕಿದ ದುಡ್ಡು ಮರಳಿ ದೊರೆತೀತೆಂಬ ನಂಬುಗೆಯಿರದುದರಿಂದ, ಪ್ರಕಾಶಕರೂ ಇವುಗಳನ್ನು ಪ್ರಕಟಿ ಸಲು ಸಮ್ಮತಿಸರು. ಇಂತಹ ಕಾಲದಲ್ಲಿ ಮುಂಬಯಿ ಸರಕಾರವು 'ಕನ್ನಡ ಸಂಸ್ಕೃತಿ ಸಂಶೋಧನ ಸಮಿತಿ' ಯ ಪರವಾಗಿ ತನ್ನ ತುಂಬುಗೈಯ ನೆರವನ್ನು ಕೊಡಲು ಸಿದ್ಧವಾಗಿ ಮುಂದೆಬಂದುದು ತುಂಬ ಆನಂದದ ಸಂಗತಿ. ಮುಂಬಯಿ ಸರಕಾರದ ಸಂಪೂರ್ಣ ಸಹಾಯ ಸಿಕ್ಕದೆ ಇದ್ದರೆ, ಇಷ್ಟು ದಿನ ಬಿದ್ದಂತೆ ಈ ಪ್ರಬಂಧಗಳು ಇನ್ನು ಮುಂದೆಯೂ ಕತ್ತಲುಕೋಣೆಯಲ್ಲಿಯೆ ಬಿದ್ದುಕೊಂಡಿರಬೇಕಾಗುತ್ತಿದ್ದಿತು. ನನ್ನ ಈ ಬಗೆಯ ಕಾರ್ಯದ ಮಾದರಿ ಯೊಂದನ್ನು ಕನ್ನಡಿಗರ ಮುಂದೆ ಇರಿಸಲು ಅನುಕೂಲ ಮಾಡಿಕೊಟ್ಟು- ದಕ್ಕಾಗಿ 'ಕನ್ನಡ ಸಂಸ್ಕೃತಿ ಸಂಶೋಧಕ ಸಮಿತಿ' ಯ ಉಪಕಾರವನ್ನು

ಸ್ಮರಿಸಬೇಕಾದುದು ನನ್ನ ಕರ್ತವ್ಯವಾಗಿದೆ, ಅಲ್ಲದೆ ಧಾರವಾಡದ ಕ. ವಿ. ವ. ಸಂಘವು ನನ್ನ ಪುಸ್ತಕವು ಪ್ರಕಟನೆಗೆ ಅರ್ಹವಾಗಿದೆಯೆಂದು ಅಭಿಪ್ರಾಯಪಟ್ಟು ನೆರವಿತ್ತುದಕ್ಕಾಗಿ, ಆ ಸಂಘಕ್ಕೂ ನನ್ನ ಕೃತಜ್ಞತೆಯನ್ನು ಸಲ್ಲಿಸಬೇಕಾಗಿದೆ.

'**ಮೊದಲಮಾತು**' ಬರೆದುಕೊಟ್ಟು ನನ್ನ ಕೃತಿಯ ಕಳೆಯನ್ನು ಹೆಚ್ಚಿಸಿ, ಪ್ರೊ. ಆರ್. ವ್ಹಿ. ಜಾಗಿರದಾರ್ ಎಂ. ಎ. (ಲಂಡನ್) ಅವರು ನನ್ನ ಮೇಲೆ ಹೆಚ್ಚಿನ ಪ್ರೀತಿಯನ್ನು ತೋರಿಸಿದ್ದಾರೆ. ಪ್ರೀತಿಯನ್ನು ಉಪಕಾರವೆಂದು ಹೇಳುವುದು ಅದಕ್ಕೆ ಅಪಮಾನ ಮಾಡಿದಂತೆ; ಎಂತಲೆ ಪ್ರೊ. ಜಾಗಿರದಾರರಿಗೆ ನನ್ನ ಪ್ರೀತಿಯನ್ನೆ ಪ್ರತಿಯಾಗಿ ಸಲ್ಲಿಸುತ್ತೇನೆ.

ಕೊನೆಯದಾಗಿ ಒಂದು ಮಾತು: ಗೆ. ಜೋಶಿ ಶಂಕರರಾಯರ ಒಲವಿನ ಒತ್ತಾಯವಿಲ್ಲದಿದ್ದರೆ ಈ ಗ್ರಂಥಪ್ರಕಟನೆಯ ಕಾರ್ಯ ಈಗ ನಡೆಯುತ್ತಿರಲೆ ಇಲ್ಲ. ನನ್ನಿಂದ ಏನನಾದರೂ ಕಾರ್ಯಮಾಡಿಸಿ ಅದನ್ನು ಸೋದರಭಾವದ ಮಮತೆಯ ಹೃದಯದಿಂದ ನೋಡುತ್ತಿರುವುದು ಅವರಿಗೊಂದು ಅಭಿಮಾನದ ವಿಷಯವಾಗಿದೆ ಈ ಗ್ರಂಥದಿಂದ ಕನ್ನಡ ಲೋಕಕ್ಕೆ ಏನಾದರೂ ಪ್ರಯೋಜನ ಉಂಟೆಂದು ಎನಿಸಿದರೆ, ಆ ಶ್ರೇಯಸ್ಸಿಗೆ ನನಗಿಂತ ಶ್ರೀ. ಶಂಕರರಾಯರೆ ಹೆಚ್ಚಾಗಿ ಪಾತ್ರರೆಂಬುದನ್ನು ನಾನು ಹೇಳದೆ ಇರಲಾರೆ.

ಸ್ವಲ್ಪ ಸಮಯದಲ್ಲಿಯೆ ಈ ಪುಸ್ತಕವನ್ನು ಇಷ್ಟೊಂದು ಅಂದವಾಗಿ ಅಚ್ಚುಹಾಕಿಕೊಟ್ಟ ಕ. ಪ್ರಿಂ. ವರ್ಕ್ಸಿನ ಸಂಚಾಲಕರ ಉಪಕಾರವನ್ನು ಸ್ಮರಿಸುವುದೂ ಅತ್ಯಗತ್ಯ ವಿಷಯವಾಗಿದೆ.

ಅಧಿಕಶ್ರಾವಣದ ಹುಣ್ಣಿವೆ
ಶಾ. ವಾ. ಶ. ೧೮೬೧
(ತಾ. ೩೧-೬-೩೯ ಇಸ್ವಿ)

**ಬೆಟಗೇರಿ ಕೃಷ್ಣಶರ್ಮ**

*

# ಪ ರಿ ವಿ ಡಿ

## ಕನ್ನಡಿಗರ ಕೋಟೆಗಾಳೆಗ ( ೧ ರಿಂದ ೫೯ ಪುಟ )

## ೬. ಕೋಟೆಗಾಳಿಗ

ಕ್ರಿ. ಶ. ೧೨ನೆಯ ಶತಮಾನ ( ಅಗ್ಗಳಕವಿಯ ವಿವರಣೆ ); ಕ್ರಿ. ಶ. ೧೩ನೆಯ ಶತಮಾನ ( ಜನ್ನಕವಿಯ ವಿವರಣೆ ) ; ೨ನೆಯ ಗುಣವರ್ಮನೂ ಹೇಳಿದ್ದಾನೆ ; ಕ್ರಿ. ಶ. ೧೫ನೆಯ ಶತಮಾನ ( ಮೂರನೆಯ ಮಂಗರಸನ ವಿಶೇಷವಿವರಣೆ ); ಕ್ರಿ. ಶ. ೧೬ನೆಯ ಶತಮಾನ (ವಿರೂಪಾಕ್ಷ ಪಂಡಿತನ ಪ್ರತ್ಯಕ್ಷ ದರ್ಶನವರ್ಣನೆ); ಕ್ರಿ. ಶ. ೧೭ನೆಯ ಶತಮಾನ ( ಗೋವಿಂದವೈದ್ಯನ ವಿಶದ ವರ್ಣನೆ ). ಪುಟ ೩೧—೫೧

## ೭. ಪರಿಭಾಷಾ ಸ್ಪಷ್ಟೀಕರಣ

ಹುಲಿಮೊಗ; ಅಂಬುಗಂಡಿ; ಕುದುರೆಗಂಡಿ; ಚೋರಗಂಡಿ; ಡೆಂಕಣಿ; ಮರುಳ್ಗೈ; ಶತಘ್ನಿ; ಪೆಟಲು; ಲಾಳಿ; ಈಟಿ; ಕತ್ತಿ; ಪಂದಿದಲೆ; ಹಾವಿನಹೇಳಿಗೆ; ತಳಿ-ಮುಳುವೇಲಿ; ಸಾರ-ನಡೆಸಾರ-ಸಾರಮಾರಿ; ಅಗಳನ್ನು ದಾಟುವ ಬೇರೆ ಸಾಧನಗಳು ; ಶತ್ರುಗಳ ಮೈಮೇಲೆ ಉಗ್ಗುವ ಪದಾರ್ಥಗಳು; ಹಗ್ಗದಿಂದ ಮಾಡಿದ ಆಯುಧ; ಮರದ ಆಯುಧ; ಕಲ್ಲುಗಳ ಉಪಯೋಗ; ಬೇರೆ ಆಯುಧಗಳು; ಬದ್ದರದ ವಿಶೇಷವಿಚಾರ ; ಸಂರಕ್ಷಕ ಸಾಧನಗಳು ; ಬೆಳಕಿನ ಸಾಧನಗಳು ; ರಣವಾದ್ಯಗಳು; ಸನ್ನಾಹವಾಚಕ ಶಬ್ದ; ನಡೆಗೋಂಟೆ-ಪಡಿಗೋಂಟೆ; ಪಡಿಯಟ್ಟಣೆ-ಮೇರುವೆ; ಕೊನೆಯಮಾತು. ಪುಟ ೫೧—೫೯

# ಕನಕದಾಸರು ಕಂಡ ವಿಜಯನಗರ ( ೬೧ ರಿಂದ ೯೮ ಪುಟ )



೧. ಕನಕದಾಸರ ಸಾಹಿತ್ಯದ ವೈಶಿಷ್ಟ್ಯ; ೨. ಕನಕದಾಸರ ಜೀವನದ ವೈಶಿಷ್ಟ್ಯ ( ಇವರು ಶ್ರೀವ್ಯಾಸರಾಯ ಶ್ರೀವಾದಿರಾಜರ ಶಿಷ್ಯರೆ ? ); ೩. ಮಾಧ್ವ ದಾಸಪರಂಪರೆಯಲ್ಲಿ ಕನಕದಾಸರಿಗಿರುವ ಸ್ಥಾನ ; ೪. ಕನಕದಾಸರು ರಾ ಮಾ ನು ಜ ಮತಾನುಯಾಯಿಗಳೇ ? ೫. ಕನಕದಾಸರಿಗೆ ಓದು-ಬರೆಹ ಬರುತ್ತಿರಲಿಲ್ಲವೇ? ಪುಟ ೬೧–೬೮



೬. ಕನಕದಾಸರಿಗೂ ವಿಜಯನಗರಕ್ಕೂ ಬಂದ ಸಂಬಂಧ ; ೭. ಕನಕದಾಸರ ಕಾವ್ಯಗಳು; ೮. ಮೋಹನತರಂಗಿಣಿ ಕಾವ್ಯ-ವಿಚಾರ ; ೯. ಕನಕದಾಸರು ಬದುಕಿ ಬಾಳಿದ ಕಾಲ; ವಿಜಯನಗರ

# ಚಾರಣಕವಿ ಗೋವಿಂದವೈದ್ಯ ( ೧೦೧ ರಿಂದ ೧೫೯ ಪುಟ )

---

# ಕರ್ಣಾಟಕ ಜನಜೀವನ

೧

## ಕನ್ನಡಿಗರ ಕೋಟೆಗಾಳೆಗ

" ಕವಿದಿಸುವಂಬು, ಪಾರ್ದಿಸುವ ಕಕ್ಕಡೆ, ಕುತ್ತುವ ಕೊಂತವಿಕ್ಕುವೊ-
ಳ್ಗವಣೆಯ ಗುಂಡು, ತೂಳ್ದಿಡುವ ಡೆಂಕಣಿ, ಪೊಯ್ಯುರಿಯೆಣ್ಣೆ, ಕಾಸಿ ಸೂ-
ಸುವ ಮುಟಿಲೆಂಬಿವೆತ್ತಲುಮುಗುರ್ವಿಸೆ, ಪೋಗದೆ ಪತ್ತಿ ಲಗ್ಗೆಮಾ-
ಡುವ ಭಟಕೋಟಿ ಕೋಟಲೆಯನಾಳ್ದಿರೆ ನೀಳ್ದುದು ಕೋಂಟೆಗಾಳೆಗಂ "

ಗುಣವರ್ಮ (ಪು. ದಂ. ಪು.)

# ಸಂದರ್ಭಗ್ರಂಥಗಳು


ಚಂದ್ರಪ್ರಭ ಪುರಾಣಂ (ಅಗ್ಗಳಕವಿ ವಿರಚಿತ)

ಅನಂತನಾಥ ಪುರಾಣಂ (ಜನ್ನಕವಿ ವಿರಚಿತ)

ಪುಷ್ಪದಂತ ಪುರಾಣಂ (ಗುಣವರ್ಮ ವಿರಚಿತ)

ಕನ್ನಡ ಮಹಾಭಾರತ (ಕುಮಾರವ್ಯಾಸ ಕೃತ)

ಸಮ್ಯಕ್ತ್ವಕೌಮುದಿ (ಮಂಗರಸ ನಿರ್ಮಿತ)

ಚೆನ್ನಬಸವ ಪುರಾಣ (ವಿರೂಪಾಕ್ಷಪಂಡಿತ ಕೃತ)

ಕಂಠೀರವ ನರಸರಾಜವಿಜಯ (ಗೋವಿಂದವೈದ್ಯ ಕೃತ)

ಕರ್ಣಾಟಕ ಕವಿಚರಿತೆ ಭಾಗ ೧ (ಪ್ರಾ. ವಿ. ವಿ., ರಾ. ಬ.
,, ಭಾಗ ೨ ಆರ್. ನರಸಿಂಹಾಚಾರ್ಯ ಕೃತ)

ಕನ್ನಡ ಇಂಗ್ಲಿಷ್ ಡಿಕ್ಶನರಿ (ರೆ. ಕಿಟ್ಟೆಲ್ ಕೃತ)

# ೧ ಮುನ್ನುಡಿ

ಕನ್ನಡನಾಡಿನ ಐತಿಹಾಸಿಕ ಪಟ್ಟಣಗಳನ್ನು ನೋಡಿದರೆ, ಕೋಟೆಯಿಲ್ಲದಿರುವ ಪಟ್ಟಣವು ಒಂದೂ ಕಣ್ಣಿಗೆ ಬೀಳದು. ಪಟ್ಟಣವಷ್ಟೇ ಹೀಗೆಂದಲ್ಲ, ಹಳೆಯ ಕಾಲದ ಹಲವು ಗ್ರಾಮ-ಹಳ್ಳಿಗಳಿಗೂ ಕೋಟೆಗಳಿರುವುವು. ಚಿಕ್ಕಪುಟ್ಟ ಖೇಡ-ಪಟ್ಟಿಗಳಿಗೆ ಕೂಡ ಎತ್ತರವಾದ ಸುತ್ತುಗೋಡೆಗಳೂ, ಒಂದೊ ಎರಡೊ ಅಗಸೆಬಾಗಿಲುಗಳೂ ಇರುತ್ತಿದ್ದುವು. ಭರತ-ಖಂಡದಲ್ಲಿಯ ವರ್ತಮಾನ ರಾಜಕೀಯ ವ್ಯವಸ್ಥೆಗೆ ಕೋಟೆ-ಕೊತ್ತಳಗಳ ಆವಶ್ಯಕತೆಯು ಇಲ್ಲ; ಆದುದರಿಂದಲೆ ಇದ್ದ ಕೋಟೆಗಳು ಬಿದ್ದುಹೋಗಲು ತೊಡಗಿವೆ. ತಾವಾಗಿಯೆ ಬೀಳದಿದ್ದ ಕೋಟೆಗಳನ್ನು ಇಂದಿನ ಸರಕಾರದವರು ಬೇಕಾಗಿಯೆ ಕೆಡಹಿ, ಅವುಗಳ ಸ್ಥಳ-ಮಣ್ಣು-ಕಲ್ಲುಗಳನ್ನು ಬೇರೆಯ ಕೆಲಸಗಳಿಗೆ ಉಪಯೋಗಿಸಲಾರಂಭಿಸಿದ್ದಾರೆ. ಇನ್ನೂ ಕೆಡಹಲಿಕ್ಕಾಗಿಲ್ಲವೆಂದೊ, ಕೆಡಹುವುದು ಅಸಾಧ್ಯವೆಂದೊ, ಅನಾವಶ್ಯಕವೆಂದೊ—ತಾವಾಗಿಯೆ ಬೀಳದ— ಕೆಲವು ಕೋಟೆಗಳು, ಇತಿಹಾಸಕಾಲದ ಕುರುಹುಗಳಾಗಿ ಇದುವರೆಗೂ ನಿಂತುಕೊಂಡಿವೆ. ಹಳ್ಳಿ-ಹಟ್ಟಿ-ಖೇಡಗಳನ್ನು ಬಳಸಿಕೊಂಡಿದ್ದ ಸುತ್ತುಗೋಡೆಗಳೂ, ಅಗಸೆ-ನೀರಗಸೆಬಾಗಿಲುಗಳೂ ಸಂಪೂರ್ಣ ನಷ್ಟವಾಗಿ ಹೋಗಿದ್ದು, ಈಗ ಅವುಗಳ ಗುರುತು ಕೂಡ ಉಳಿದಿಲ್ಲ. ಎಲ್ಲಿಯಾದರೂ ಅಪ್ಪಿ ತಪ್ಪಿ ಉಳಿದ ಹಾಳುಹೂಡೆಯ (ಕೊತ್ತಳ)ಗಳು, ದೆವ್ವ-ಭೂತಗಳ ಆವಾಸದ ಕತೆಯನ್ನು ಹಣೆಗೆ ಕಟ್ಟಿಕೊಂಡು ಜನರ ಹೆದರಿಕೆಗೆ ಪಾತ್ರವಾಗಿ ನಿಂತಿವೆ.

ಹಿಂದಿನ ಕಾಲದ ನಮ್ಮ ರಾಜಕೀಯ ವ್ಯವಸ್ಥೆಗೆ, ಆ ಆ ನಗರ-ಗ್ರಾಮ-ಪಳ್ಳಿ-ಪಟ್ಟಣಗಳ ಸಂರಕ್ಷಕ ಸಾಧನಗಳಾಗಿದ್ದ ಕೋಟೆ, ಸುತ್ತು-ಗೋಡೆಗಳು ತುಂಬ ಆವಶ್ಯಕವೆನಿಸುತ್ತಿದ್ದುವು; ಏಕೆಂದರೆ ಪ್ರತಿಯೊಂದು ಪಟ್ಟಣವೂ ಗ್ರಾಮವೂ ತನ್ನ ತನ್ನ ಮಟ್ಟಿಗೆ ಆಡಳಿತದ ಸ್ವಾತಂತ್ರ್ಯವನ್ನು ಪಡೆದಿದ್ದಿತಾದುದರಿಂದ, ಹೊರಗಿನ ಶತ್ರುಗಳಿಂದ ಅಪಾಯವಾಗಬಾರದೆಂದು ಪ್ರತಿಯೊಬ್ಬ ಗ್ರಾಮಾಧಿಪತಿಯೂ, ಪಟ್ಟಣಾಧಿಪತಿಯೂ ತಮ್ಮ ತಮ್ಮ ಗ್ರಾಮ-ಪಟ್ಟಣಗಳನ್ನು ಕಣ್ಣಿಟ್ಟು ನೋಡಿಕೊಳ್ಳುತ್ತಿದ್ದರು. ಅದಕ್ಕಾಗಿ

ಅನೇಕ ಸಂರಕ್ಷಕಸಾಧನೆಗಳನ್ನು ಕಲ್ಪಿಸಿ ನಿರ್ಮಿಸಿ, ಯಾವಾಗಲೂ ಜಾಗೃತವಾದ ಸಿದ್ಧತೆಯಲ್ಲಿ ಇರುತ್ತಿದ್ದರು. ಅಂತಹ ಸಂರಕ್ಷಕ ಸಾಧನೆಗಳಲ್ಲಿ ಮುಖ್ಯವಾದುವೆಂದರೆ ಪಟ್ಟಣ-ಪುರಗಳಿಗೆ ಕೋಟೆ-ಕೊತ್ತಳ, ಗ್ರಾಮ-ಖೇಡ-ಪಳ್ಳಿಗಳಿಗೆ ಸುತ್ತುಗೋಡೆ.

ಹಳಗನ್ನಡದಲ್ಲಿ ಕೋಟೆಗೆ '**ಕೋಂಟೆ**' ಎಂಬ ಮೂಲರೂಪವಿದೆ. ಸಂಸ್ಕೃತಭಾಷೆಯಲ್ಲಿ ಕೋಟೆಯನ್ನು '**ದುರ್ಗ**' ಎಂದು ಹೇಳುವರು. ಪರಂಪರೆಯ ಹೇಳಿಕೆಯಂತೆ ದುರ್ಗಗಳು ಮೂರು ಬಗೆಯವಿರುವುವು; **ಗಿರಿದುರ್ಗ, ಜಲದುರ್ಗ, ವನದುರ್ಗ** ಅಥವಾ ಭೂದುರ್ಗ. ಕನ್ನಡ ಸಾಹಿತ್ಯಪರಂಪರೆಯಲ್ಲಿ ಇವೇ ಮೂರು ಶಬ್ದಗಳನ್ನು ಬಳಸಲಾಗಿದ್ದರೂ, ಅಚ್ಚಗನ್ನಡದಲ್ಲಿಯೆ ಹೇಳಬೇಕೆನ್ನುವವರು ಈ 'ದುರ್ಗತ್ರಯ'ವನ್ನು 'ಬೆಟ್ಟಗೋಂಟೆ' 'ಕಡಲ್‌ಗೋಂಟೆ' 'ಪಳುಗೋಂಟೆ' ಅಥವಾ 'ನೆಲಕೋಟೆ' ಎಂದು ಹೇಳುವರು. ಸದ್ಯ ಬದುಕಿಕೊಂಡಿರುವ ಕೋಟೆಗಳಲ್ಲಿ '**ಬೆಟ್ಟಗೋಂಟೆ**'ಗೆ ಉದಾಹರಣೆಯೆಂದು ರಾಯಚೂರು-ಬಳ್ಳಾರಿಗಳನ್ನು ಹೇಳಲಿಕ್ಕಾಗುವುದು. '**ಕಡಲ್‌ಗೋಂಟೆ**'ಗೆ ಉದಾಹರಣೆಯೆಂದು ಪಶ್ಚಿಮ ಸಮುದ್ರತೀರದಲ್ಲಿ '**ಸದಾಶಿವಗಡ**' '**ವಿಜಯದುರ್ಗ**'ಗಳ ಹೆಸರನ್ನು ಹೇಳಬಹುದು. '**ಪಳುಗೋಂಟೆ**'ಗೆ ಉದಾಹರಣೆಯಾಗಿ ಕನ್ನಡನಾಡಿನಲ್ಲಿ ಅಲ್ಲಲ್ಲಿ ತುಂಬ ಕೋಟೆಗಳಿವೆ; ಬೆಳಗಾಂವಿ, ಧಾರವಾಡ, ಬೆಂಗಳೂರು, ತೊರಗಲ್ಲು, ವಿಜಯನಗರ ಇವೆಲ್ಲ ಪಳುಗೋಂಟೆಗಳೆ; ಆದರೆ ಇದ್ದ ಪಳುವೆಲ್ಲ ಹಾಳಾಗಿಹೋದುದರಿಂದ, ಅವು ಬಯಲುಗೋಟೆಗಳಾಗಿ ಬರಿಯ 'ನೆಲಕೋಟೆ' ಎಂಬ ಹೆಸರನ್ನು ಪಡೆದಿವೆ.

ಕೋಟೆಯೆಂದೊಡನೆ ಇಂದಿನ ಬಹುಜನರ ಕಣ್ಣೆದುರು ಬಂದುನಿಲ್ಲುವುವೆಂದರೆ ಕೋಟೆಯ ಸುತ್ತುಗೋಡೆ, ಅಗಸೆ, ಕೊತ್ತಳ (ಹೂಡೆಯ, ಬುರುಜು), ತೆನೆ, ಅಗಳ, ಬಹಳವಾದರೆ ನೆಲಮಾರ್ಗ ಇವಿಷ್ಟೆ. ಕೋಟೆಯ ಅಂಗಾಂಗಗಳ ಪರಿಚಯವೂ ಅವುಗಳ ವಿಶಿಷ್ಟವಾದ ಉಪಯೋಗವೂ ಗೊತ್ತಿದ್ದವರು ನಮ್ಮಲ್ಲಿ ತೀರ ಕಡಮೆ ಜನರು.

ಐತಿಹಾಸಿಕವಸ್ತುಗಳನ್ನವಲಂಬಿಸಿ ಹೊರಟ ಸಾಹಿತ್ಯವು, ನಮ್ಮಲ್ಲಿ ವಿವಿಧಮುಖಗಳಿಂದ ನಿರ್ಮಿತವಾಗಬೇಕಾಗಿದೆ. ಅಂತಹ ಸಾಹಿತ್ಯನಿರ್ಮಿತಿಗೆ ಬೇರೆ ಬೇರೆ ಐತಿಹಾಸಿಕಕಾಲದ ಎಲ್ಲ ಬಗೆಯ ಸಂಸ್ಕೃತಿಪರಂಪರೆ ಚೆನ್ನಾಗಿ

ಗೊತ್ತಿರಬೇಕಾಗುವುದು. ಆದುದರಿಂದಲೆ ಹಿಂದಿನ ಕಾಲದ ರಾಜಕೀಯ ಜೀವನದ ಒಂದು ಪ್ರಧಾನಾಂಗವಾಗಿದ್ದ ಈ ಕೋಟೆಗಳ ರಚನಾರಹಸ್ಯವೂ, ಕೋಟೆಗಾಳಿಗದ ರೀತಿ-ನೀತಿಗಳೂ ತಿಳಿದಿರಬೇಕಾದುದು ತುಂಬ ಆವಶ್ಯಕ. ಐತಿಹಾಸಿಕ ಕಾದಂಬರಿಯನ್ನೆ ಬರೆಯಲಿ, ನಾಟಕವನ್ನೆ ಬರೆಯಲಿ, ಚಲಚ್ಚಿತ್ರ-ಕಥೆಗಳನ್ನೇ ಬರೆಯಲಿ— ಅವುಗಳಲ್ಲಿ— ಕೋಟೆಗಾಳಿಗದ ಸಂನಿವೇಶಗಳು ಬರುತ್ತಿರುವುದು ಅನಿವಾರ್ಯ. ಅಂತಹ ಸಂದರ್ಭಗಳಲ್ಲಿ ಕೇವಲ ಕಲ್ಪನೆ ಯಿಂದ ಏನನೊ ಹೊಡೆದಾಟ-ಬಡಿದಾಟಗಳನ್ನು ಬರೆದು ಮುಗಿಸಿಬಿಟ್ಟರೆ, ವಿಷಯ ಗೊತ್ತಿದ್ದವರಿಗೆ ಅದು ಆಭಾಸವಾಗಿ ಕಂಡುಬಿಡುವುದು. ಕೋಟೆ-ಗಾಳಿಗದ ವಿಚಾರದಲ್ಲಿ ನಮ್ಮಲ್ಲಿಯ ಬಹುಜನರಿಗೆ ಗೊತ್ತಿರುವ ಸಂಗತಿ ಯೆಂದರೆ **ಉಡು**ವಿನ ಸಹಾಯದಿಂದ ಕೋಟೆಯ ಮೇಲೆ ಹತ್ತಿಹೋಗು ವುದು. ಪರಂಪರೆ ಗೊತ್ತಿಲ್ಲದೆ ಬರೆದ ಕೆಲವು ಮರ್ರಾಟಿ ಕಾದಂಬರಿಗಳ ಮೂಲಕ, ಈ ಮಾತು ಒಂದು ನಮ್ಮ ಸಾಹಿತ್ಯದಲ್ಲಿಯೂ ನುಸುಳಿಕೊಂಡಿದೆ. ಕೋಟೆಯೊಳಗಿನವರು ಅಜಾಗರೂಕರಾಗಿರುವಾಗ— ಕಳ್ಳತನದಿಂದ ಒಬ್ಬಿ ಬ್ಬರು ಮಾತ್ರ— ಹತ್ತಿಹೋಗಲಿಕ್ಕೆ ಸಾಧನವಾಗಿರಬಹುದಾದ ಉಡುವೇ, ಕೋಟೆಗಾಳಿಗದ ಮುಖ್ಯ ಉಪಕರಣವಾಗಿ ನಮ್ಮ ಹಲವು ಜನ ಸಾಹಿತ್ಯಿಕರ ಮನದಲ್ಲಿ ಮನೆಮಾಡಿದೆ. ಆದರೆ ಹಗಲಿರುಳುಗಳಲ್ಲಿಯೂ ಕಣ್ಣಲ್ಲಿ ಎಣ್ಣೆಹಾಕಿಕೊಂಡು ಕಾಯುವ ಕೋಟೆಗಾಪಿನ ಬಂಟರು ಇರುವಲ್ಲಿ, ಈ ಉಡುವು ಏನುಮಾಡೀತು ! ಮೇಲೆ ಏರಿಬಂದ ಈ ಬಡಪ್ರಾಣಿಯು ಪಾಪ ಕಾಪಿನಬಂಟರ ಕೈಗತ್ತಿಗೆ ಬಲಿಯಾದೀತು ಇಷ್ಟೇ! ಇನ್ನು 'ಉಡುವು ಚಿಕ್ಕದು, ಎಷ್ಟೋ ಸಲ ಅದು ಕಾವಲುಗಾರರ ಕಣ್ಣಿಗೆ ಬೀಳದಿರ ಬಹುದು' ಎನ್ನೋಣ; ಆದರೆ ಅದರ ಹೊಟ್ಟೆಗೆ ಬಿಗಿದಿದ್ದ ಹಗ್ಗ ಮೇಲಿನ ವರಿಗೆ ಕಾಣದೇ ? ಅದನ್ನು ಹಿಡಿದುಕೊಂಡು ಮೇಲೆ ಹತ್ತಿಬರುವವರೇನು ಅದೃಶ್ಯಾಂಜನ ಹಚ್ಚಿಕೊಂಡಿರುವರೆ ? ಜಾಗೃತವಾದ ಕೋಟೆಯನ್ನು ಸಾವಿರಾರು ಜನರು ಒಮ್ಮೆಲೆ ಹತ್ತುವುದಕ್ಕೆ ಉಡುವೊಂದೇ ಸಾಧನ ವೆನಿಸದು; ಅದಕ್ಕಾಗಿ ಅನೇಕ ಸಾಧನೆ-ಸಲಕರಣೆಗಳಿರುವುವು. ಅದರಂತೆಯೆ ಲಗ್ಗೆಬಿದ್ದ ಕೋಟೆಯ ಒಳಗಿನ ಜನರಿಗೂ— ಹೊರಗಿನವರನ್ನು ತೊಂದರೆ ಗಿಡುಮಾಡುವುದಕ್ಕೆ— ಅನೇಕ ತರದ ಸಾಧನ-ಸಲಕರಣೆಗಳಿರುವುವು. ಐತಿಹಾಸಿಕ ಸಾಹಿತ್ಯನಿರ್ಮಾಪಕನಿಗೆ ಇವೆಲ್ಲ ಗೊತ್ತಿರಬೇಕಾದುದು ಅಗತ್ಯ. ಎಂತಲೆ ಕನ್ನಡ ಸಾಹಿತ್ಯಾಭ್ಯಾಸದಲ್ಲಿ ಅಲ್ಲಲ್ಲಿ ಕಂಡುಬಂದ ಕೋಟೆಯ ರಚನೆಯ ವಿಷಯಕವಾದ ಬಣ್ಣನೆಗಳನ್ನೂ, ಕೋಟೆಗಾಳಿಗದ ಸಂಗತಿ ಗಳನ್ನೂ ಕುರಿತು ಇಲ್ಲಿ ವಿವರಿಸಬೇಕೆಂದಿರುವೆನು.

# ೨ ವಸ್ತುಕ-ವರ್ಣಕಗಳಲ್ಲಿಯ ವಾಸ್ತವತೆ

ಕನ್ನಡದ ಸಾಂಪ್ರದಾಯಿಕ ಕಾವ್ಯಗಳಲ್ಲಿ **'ವಸ್ತುಕ'** ಎಂದೂ **'ವರ್ಣಕ'** ಎಂದೂ ಲಾಕ್ಷಣಿಕರು ಎರಡು ಜಾತಿಗಳನ್ನು ಮಾಡಿರುವರು. ಯಾವುದೇ ಜಾತಿಯ ಕಾವ್ಯವಿರಲಿ, ಅದು ಮಹಾಕಾವ್ಯಗಳ ಪಙ್ಕ್ತಿಯಲ್ಲಿ ಸ್ಥಾನವನ್ನು ಪಡೆಯಬೇಕಾದರೆ 'ಅಷ್ಟಾದಶವರ್ಣನೆ'ಗೆ ಅದರಲ್ಲಿ ಸ್ಥಾನ ದೊರೆತಿರಲೆ ಬೇಕು. ವಸ್ತುಕ ಕೃತಿಕಾರರಲ್ಲಿಯ ನಾಲ್ಕಾರು ಜನರನ್ನು ಬಿಟ್ಟರೆ, ಮಿಕ್ಕವರ ಕೃತಿಗಳು ಕಥಾವಸ್ತುವನ್ನು ವಿವರಿಸುವುದಕ್ಕೆ ಇವೆಯೊ, ಕೇವಲ ಅಷ್ಟಾದಶವರ್ಣನೆಯ ಪ್ರದರ್ಶನಕ್ಕಾಗಿ ಇವೆಯೊ ತಿಳಿಯದಂತಿರುವುವು. ಈ ಅಷ್ಟಾದಶವರ್ಣನೆಗಳಲ್ಲಿ ಪುರವರ್ಣನೆಗೆ ಉಪಾಂಗವಾಗಿ ಕೋಟೆಯ ಅಂಗಾಂಗಗಳ ವರ್ಣನೆಯೂ, ಯುದ್ಧವರ್ಣನೆಗೆ ಉಪಾಂಗವಾಗಿ 'ಕೋಂಟೆಗಾಳೆಗ'ದ ವರ್ಣನೆಯೂ ಬಂದಿರುವುವು. ವರ್ಣಕಕವಿಗಳಲ್ಲಿಯೂ ಬಹುಜನರು ಈ ಅಷ್ಟಾದಶವರ್ಣನೆಗಳಿಗೆ ಅವಕಾಶವನ್ನು ಕೊಟ್ಟಿರುವರು. ಆದರೆ ಅವರ ಕೃತಿಗಳಲ್ಲಿ ಕಥಾವಸ್ತುವಿನ ಮುಂಬರಿತಕ್ಕೆ ಪ್ರಧಾನಸ್ಥಾನವಲ್ಲದೆ, ಸಾಂಪ್ರದಾಯಿಕ ವರ್ಣನೆಗಳಿಗಿರುವುದಿಲ್ಲ. ಇವರೂ ಕೋಟೆ, ಕೋಟೆಗಾಳೆಗಗಳನ್ನು ಬಣ್ಣಿಸಿರುವರು. ಆದರೆ ಇವರ ಆ ಬಣ್ಣನೆಗಳು ಬರಿಯೆ ಉಪಮೆ-ಉತ್ಪ್ರೇಕ್ಷೆ-ರೂಪಕ-ದೀಪಕಗಳಲ್ಲಿ ಹೂತುಹೋಗಿಲ್ಲ; ಕಥಾಪರಿಪುಷ್ಟಿಗೆ ತುಂಬ ಸಹಾಯನೀಡುತ್ತವೆ. ವಸ್ತುಕಕಾವ್ಯಗಳ ಕಥಾವಸ್ತುಗಳು ಪೌರಾಣಿಕಕಾಲದುವಾದುದರಿಂದ, ಅವುಗಳಲ್ಲಿ ಕಲ್ಪನೆ-ಕೃತ್ರಿಮತೆ-ಕವಿಸಂಕೇತಗಳಿಗೆಯೆ ಅವಕಾಶ ಹೆಚ್ಚು. ಆದುದರಿಂದಲೆ ಕನ್ನಡಿಗರ ದೈನಂದಿನ ಜೀವನಚಿತ್ರವು ಅವುಗಳಲ್ಲಿ ಅಸ್ಫುಟವಾಗಿ ಮೂಡಿರುವುದು. ವರ್ಣಕ ಕವಿಗಳ ಪದ್ಧತಿಹಾಗಲ್ಲ; ಅವರು ಸ್ವೀಕರಿಸಿದ ಕಥಾವಸ್ತುಗಳು ಪೌರಾಣಿಕ ಕಾಲದುವೆ ಆಗಿದ್ದರೂ, ಅವುಗಳಲ್ಲಿ ಬಂದುಹೋಗುವ ಪಾತ್ರಗಳೆಲ್ಲ ಕನ್ನಡನಾಡಿನವೆ ಆಗಿರುವುವು. ಅವು ತಮ್ಮ ಕೃತಿಕಾರನ ಕಾಲದ ಕನ್ನಡ ಜನಜೀವನ, ಜಾನಪದಜೀವನಗಳಿಗೆ ಪ್ರತಿನಿಧಿಗಳಾಗಿರುವುವು. ಎಂತಲೆ ವರ್ಣಕಕೃತಿಗಳಲ್ಲಿ ಕನ್ನಡಿಗರ ರೀತಿ-ನೀತಿ-ಸಂಪ್ರದಾಯಗಳೂ ಜೀವನಸಂಸ್ಕಾರವೂ ಸ್ಫುಟವಾಗಿ ಮೂಡಿರುವುವು. ಈ ಮಾತಿನ ಸತ್ಯತೆಯನ್ನು, ಶತಮಾನಾನುಸಾರವಾಗಿ ಇಲ್ಲಿ ವಿವರಿಸಿರುವ ಕೋಟೆಯ ವರ್ಣನೆಗಳೂ, ಕೋಟೆಗಾಳೆಗದ ವಿವರಣೆಗಳೂ ಸಿದ್ಧಮಾಡದೆ ಇರಲಾರವೆಂದು ನನ್ನ ನಂಬುಗೆ. ಸಾಮಾನ್ಯವಾಗಿ 'ಮಹಾಕಾವ್ಯ' ವೆನಿಸಿಕೊಳಬಹುದಾದ

ಪ್ರತಿಯೊಂದು ಕೃತಿಯಲ್ಲಿ, ಈ ಕೋಟೆ-ಕೋಟೆಗಾಳೆಗಗಳ ವಿಷಯ ಬರುವು ದಾದರೂ, ನಾನು ನನ್ನ ಅನುಕೂಲತೆಗಾಗಿ ಇಲ್ಲಿ ಕೆಲವು ಪ್ರಾತಿನಿಧಿಕ ಕಾವ್ಯಗಳಲ್ಲಿಯ ವಿಷಯಗಳನ್ನು ಮಾತ್ರ ಆಯ್ದುಕೊಂಡಿರುವೆನು.

# ೩ ಕೋಟೆಯ ಪರಿಚಯ

## ( ವಸ್ತುಕ ಕಾವ್ಯಗಳಲ್ಲಿ )

ಕೋಟೆಗಳನ್ನು ಕುರಿತು ಹೇಳಬೇಕಾದ ಸಂದರ್ಭದಲ್ಲಿ ವಸ್ತುಕಕಾವ್ಯ ಕರ್ತೃಗಳು—ಅವಕಾಶಾಭಾವದಿಂದಲೊ, ಪರಿಚಯಾಭಾವದಿಂದಲೊ—ಕೋಟೆಯ ಆರೇಳು ಮುಖ್ಯಾಂಗಗಳನ್ನು ಮಾತ್ರ ತೆಗೆದುಕೊಂಡಿರುವರು. ಅವಾವುವೆಂದರೆ : ೧ **ಪರಿಖಾ** (ಅಗಳು) ೨ **ಪೊಂಗೋಂಟೆ**, ೩ **ಕೊತ್ತಳ** ೪ **ಮುಗಿಲಟ್ಟಳೆ** (ಗೋಪುರ), ೫ **ಕೋಟೆಯಂತೆನೆ**, ೬ **ಪಳಯಿಗೆ**, ೭ **ಪ್ರಾಕಾರ** ಮೊದಲಾದುವುಗಳು. ಇವು ಹೆಸರು ಮಾತ್ರ ಗೊತ್ತಾಗುವು ವಲ್ಲದೆ, ಅತಿಶಯೋಕ್ತಿಯ ಮೂಲಕ ಇವುಗಳ ಸ್ವರೂಪಕಲ್ಪನೆ ಸಾಕಷ್ಟು ಉಂಟಾಗದು.

* * *

**ನಾಗಚಂದ್ರ** ಅಥವಾ **ಅಭಿನವಪಂಪ** (೧೧೦೫) ನು ತನ್ನ **'ರಾಮಚಂದ್ರಚರಿತ ಪುರಾಣ'** ದಲ್ಲಿ ಕೋಟೆಯ ಅಂಗಾಂಗಗಳನ್ನು ಕುರಿತು ಹೀಗೆ ಹೇಳಿರುವನು :

### * ನಿಗರ್ಾದಿಗೆ ( ಅಗಳು )

**"ಬಡಬಾನಲನಿಗೆ ಹೆದರಿದ ಕ್ಷೀರಸಮುದ್ರವು, ಅಮರಶೈಲವನ್ನು ಶರಣುಹೊಕ್ಕಿರುವುದೇನೊ ಎಂಬಂತೆ 'ನೀಗರ್ಾದಿಗೆ' ಯು 'ಹೊನ್ನ ಕೋಟೆ'ಯನ್ನು ಬಳಸಿಕೊಂಡಿರುವುದು. (ಆಶ್ವಾಸ ೧; ಪದ್ಯ ೧೧೩)"**

ಅಮರಶೈಲ ಎಂದರೆ ಮೇರುಪರ್ವತ. ಅದು ಬಂಗಾರದ್ದೆಂದು ಕವಿ-ಸಮಯ. ಇಲ್ಲಿಯ ಎತ್ತರವಾದ ಕೋಟೆಯೂ ಬಂಗಾರದುದು.

---

*** ಸಾಮಾನ್ಯವಾಚಕರಿಗೆ ತೊಂದರೆಯಾಗಬಾರದೆಂದು ಚಂಪೂಕಾವ್ಯಗಳಲ್ಲಿಯ ಪದ್ಯಗಳನ್ನು, ಕೈಯಲ್ಲಾದಷ್ಟು ಸುಲಭವಾಗಿ ತಿಳಿಯುವಂತೆ ಮಾಡಬೇಕೆಂದು ಮೂಲಕವಿಗಳ ಪದಧಾಟಿಯಲ್ಲಿಯೆ ಗದ್ಯವನ್ನಾಗಿ ಹೇಳಲಾಗಿದೆ :**

## ಮುಗಿಲಟ್ಟಳಿ, ಅಂಬುಗಂಡಿ, ಪಳಯಿಗೆ

“ ಮುಗಿಲನ್ನು ಮುಟ್ಟಿದ ‘ಮುಗಿಲಟ್ಟಳೆ’ಗಳ ಪಕ್ಕದ ‘ಅಂಬುಗಂಡಿ’ ಗಳೊಳಗಿಂದ ನುಸುಳಿ ಮುಂದುವರಿವ ಸೂರ್ಯನ ಕುದುರೆಗಳು, ‘ಪಳಯಿಗೆ (ಧ್ವಜ)’ ಗಳ ತಂಗಾಳಿಯ ತೀಟದಿಂದ ದಾರಿಯ ದಣಿವನ್ನು ಹೋಗಲಾಡಿಸುವುವು. (ಆಶ್ವಾಸ ೧; ಪದ್ಯ ೧೧೬) ”

*        *        *

ಅಗ್ಗಳಸು (೧೧೮೯) ತನ್ನ **‘ಚಂದ್ರಪ್ರಭಪುರಾಣ’** ದಲ್ಲಿ, ಕೋಟೆಯನ್ನು ಕುರಿತು ನಾಗಚಂದ್ರನಿಗಿಂತ ವಿಶದವಾಗಿ ಹೇಳಿರುವನು:

### ಕೋಟೆ

“ ಬ್ರಹ್ಮದೇವನು ಮೇರುಪರ್ವತವನ್ನೆ ಅಗಲವಾಗಿ ಜಗ್ಗಿ, ಈ ಪಟ್ಟಣಕ್ಕೆ ಪರದೆಯನ್ನಾಗಿ ಸುತ್ತಿರುವನೇನೋ-ಎಂಬಂತೆ, ‘ನವಹಾಟಕ ನಿರ್ಮಿತವಪ್ಪ ಕೋಂಟೆ’ ಮುಗಿಲಿನುದ್ದಕ್ಕೂ ನಿಂತುದರಿಂದ, ಸೂರ್ಯನ ರಥಕ್ಕೆ ದಾರಿಯಿಲ್ಲದೆ ಹೋಯಿತು. ಅದಕ್ಕಾಗಿಯೆ ಸೂರ್ಯನು ಕೋಟೆಯ ಇಕ್ಕೆಲಗಳಲ್ಲಿ ಬರಹೋಗಲಾರಂಭಿಸಿದನು. ಹೀಗಲ್ಲದಿದ್ದರೆ ಆತನಿಗೆ ಉತ್ತರಾಯಣ-ದಕ್ಷಿಣಾಯನಗಳೆತಕ್ಕೆ ಉಂಟಾಗುತ್ತಿದ್ದುವು ? (ಆಶ್ವಾಸ ೧; ಪದ್ಯ ೧೧೪). ”

### ಪರಿಖೆ (ಅಗಳು)

“ ಈ ಪುರವು ತನ್ನಂತೆಯೆ ‘ರತ್ನವಿತತಿಗೆ’ ನಿವಾಸವಾಯಿತೆಂಬ ‘ಸಮಗುಣಪ್ರಣಯ’ದಿಂದ, ಸಮುದ್ರವು ಬಂದು ಪಟ್ಟಣವನ್ನು ಅಪ್ಪಿಕೊಂಡಿರುವುದೇನೊ—ಎಂಬಂತೆ, ಸುತ್ತಲೂ ‘ಪರಿಖೆ’ ಬಳಸಿರುವುದು. (ಆಶ್ವಾಸ ೧; ಪದ್ಯ ೧೧೫) ”

### ಮುಗಿಲಟ್ಟಳಿ

“ ಹೊಸ ಹೊಸ ಸ್ಫಟಿಕದ ‘ ಮುಗಿಲಟ್ಟಳೆ’ಗಳು, ಕೋಟೆಯು ಮೇರುಪರ್ವತವಿದೆಂಬ ಶಂಕೆಯಿಂದ ಬಂದು ನಿಂತ ‘ ಜ್ಯೋತಿರ್ವಿಮಾನ-ತತಿ’ ಎಂದು ಭಾವನೆಯಾಗುವಂತೆ ಅದನ್ನು ಸುತ್ತುಗಟ್ಟಿರುವುವು. ( ಆಶ್ವಾಸ ೧; ಪದ್ಯ ೧೧೭ ) ”

## ತೆನೆ, ಪಳಯಿಂಗೆ

"ಓಡಾಡುವ ರವಿರಥದ ಗಾಲಿಗಳ ಬಿರುಸಾದ ಅಚ್ಚಿಗೆ ತಗುಲಿ, 'ಪೊಂದೆನೆಗೊನೆಯಿಂದ' ಧೂಳಿಯೆದ್ದು ಮೇಲೆ ನಿಮಿರಿ ನಿಂತಿರುವುದೇನೊ– ಎಂಬಂತೆ, ಅಟ್ಟಳೆಗಳ ಮೇಲೆ ಸೆಡೆದುನಿಂತ 'ಕೆಂಬಳಯಿಗೆ'ಗಳು ಕಂಡುವು. (ಆಶ್ವಾಸ ೧; ಪದ್ಯ ೧೧೮)"

## ಪ್ರಾಕಾರ (ಆಳ್ವೇರಿ)

"ಆಕಾಶದ ತಾರೆಗಳು ತೆನೆಯ ತುದಿಗಳ ಮೇಲೆ ದೀಪದಂತೆ ಪ್ರಕಾಶಿಸುತ್ತಿರಲು, ಆ 'ಪ್ರಾಕಾರ'ವು ಅಪೂರ್ವವಾದ ದೀಪೋತ್ಸವದ ಭ್ರಮೆಯನ್ನು— ಪೌರರಿಗೆ— ಉಂಟುಮಾಡುವುದು. (ಆಶ್ವಾಸ ೧; ಪದ್ಯ ೧೧೯)"

* * *

**ಜನ್ನಕವಿ** (೧೩೨೦–೩೦) ತನ್ನ '**ಅನಂತನಾಥಪುರಾಣ**'ದಲ್ಲಿ ಕೋಟೆಯ ವಿವಿಧಾಂಗಗಳನ್ನು ಕುರಿತು ಹೇಳಿರುವನು. ಇವನು ಕೋಟೆಗಾಳೆಗದ ವರ್ಣನೆಯನ್ನು ವಾಸ್ತವವೆನಿಸುವಂತೆ ಮಾಡಿರುವನಾದರೂ ಕೋಟೆಯ ವರ್ಣನೆಯನ್ನು ಕವಿಸಮಯಗಳಿಂದಲೆ ಹೆಣೆದುಬಿಟ್ಟಿರುವನು.

ಮೊದಲು 'ಪುರಪ್ರಥಿತ ಖಾತೀ-ವಪ್ರವಿಸ್ತಾರ' ಎಂದರೆ ಪಟ್ಟಣವನ್ನು ಬಳಸಿಕೊಂಡಿದ್ದ ವಿಸ್ತಾರವಾದ ಅಗಳು-ಕೋಟೆಗಳನ್ನು ಬಣ್ಣಿಸಿರುವನು. ಆ ಮೇಲೆ:—

## ಮುಗಿಲಟ್ಟಣೆ

"ಮುಗಿಲ ಮಣಿಮಂಟಪಗಳು ಆಕಾಶದಲ್ಲಿವೆಯೆಂದು ತಿಳಿದು, ತಂಗಾಳಿಯಲ್ಲಿದ್ದು ಕ್ರೀಡೆಯಾಡಲೆಳಸಿದ 'ಖಚರ ದಂಪತಿನಿಚಯವು' ಮುಗಿಲು ಹರಿದುಬೀಳುವಂತೆ 'ಮುಗಿಲಟ್ಟಣೆಗೆ' ಹಾರಿ ಹಾರಿ ಹೋಗುತ್ತಿದ್ದಿತು. (ಆಶ್ವಾಸ ೧; ಪದ್ಯ ೧೦೦)"

## ಕೋಟೆ, ಕೊತ್ತಳ, ತೆನೆ

**" ಸೂರ್ಯನ ಓಡುವ ರಥವು, ಕೋಟೆಯ ಕೊತ್ತಳದಲ್ಲಿ-ಅಲ್ಲಿಯೆ ಕೆಚ್ಚಿಬಿಟ್ಟಂತೆ— ನಿಂತುಕೊಳ್ಳಲು, ಅರುಣನು ಗಾಲಿಯನ್ನು ಮುಂದೆ ನೂಕುವುದಕ್ಕೆಂದು ಹೋಗಿ, ಕೋಟೆಯ ತೆನೆಗಳನ್ನು ಎತ್ತಿ ಸೂರ್ಯನನ್ನು ನಗಿಸುವನು.** ( ಆಶ್ವಾಸ ೧; ಪದ್ಯ ೧೦೧ ) "

## ಪ್ರಾಕಾರ

**" ಪ್ರಾಕಾರದ ಮಣಿಮಯವಾದ ದಿಣ್ಣೆಯ ಎಳಬಿಸಿಲಿನಂತಹ ಬೆಳಕಿನ ಮೂಲಕ, ಅಲ್ಲಿ ರಾತ್ರಿಯಲ್ಲಿ ಕೂಡ ಚಕ್ರವಾಕಗಳು ಆಟವಾಡುತ್ತಿರುವುವು.** ( ಆಶ್ವಾಸ ೧; ಪದ್ಯ ೧೦೨ )"

* * *

ಇದೇ ರೀತಿಯಲ್ಲಿ ವಸ್ತುಕಕಾವ್ಯಗಳಲ್ಲಿ ವರ್ಣಿತವಾದ ಕೋಟೆಯ ವರ್ಣನೆಗಳ ಉದಾಹರಣೆಗಳನ್ನೆಷ್ಟೊ ಕೊಡಬಹುದು. ಆದರೆ ಇವಿಷ್ಟ-ರಿಂದಲೆ ಆ ಕವಿಗಳು, ಕಂಡ ಕೋಟೆಯನ್ನು ಬಣ್ಣಿಸಿರದೆ ಕಲ್ಪನೆಯ ಬಯಲು-ಗೋಟೆಯನ್ನೆ ಅವಾಸ್ತವರೀತಿಯಿಂದ ಬಣ್ಣಿಸಿರುವರೆಂಬ ಮಾತು ಸ್ಪಷ್ಟವಾಗದೆ ಇರದು. ಇನ್ನು ವರ್ಣಕಕಾವ್ಯಗಳಲ್ಲಿ ಬಂದ ಒಂದೆರಡು ಕೋಟೆಯ ಬಣ್ಣನೆಯ ಉದಾಹರಣೆಗಳನ್ನು ನೋಡೋಣ.

### ( ವರ್ಣಕಕಾವ್ಯಗಳಲ್ಲಿ )

**ಕನಕದಾಸನು** ( ೧೫೫೦ ) ತನ್ನ ' **ಮೋಹನತರಂಗಿಣಿ** ' ಕಾವ್ಯದಲ್ಲಿ, ' ಶ್ರೀಕೃಷ್ಣರಾಯನ ' ದ್ವಾರಕೆಯನ್ನೂ ಬಾಣನ ಶೋಣಿತಪುರವನ್ನೂ ವರ್ಣಿಸುವಾಗ, ಅವುಗಳ ಕೋಟೆಯ ಅಂಗಾಂಗಗಳನ್ನು ಕಣ್ಣಿಗೆ ಕಟ್ಟು-ವಂತಹ ಭಾಷೆಯಲ್ಲಿ ಹೇಳಿದ್ದಾನೆ. ಆತನ ಸಾಂಗತ್ಯದ ಭಾಷೆಯು ಸಾಹಿತ್ಯದ ಸ್ವಲ್ಪ ಪರಿಚಯವಿದ್ದವರಿಗೂ ತಿಳಿಯಬಹುದಾದುದರಿಂದ, ಆತನ ಭಾಷೆ-ಯಲ್ಲಿಯೆ ಆತನ ಕೋಟೆಯ ವಿಶದವರ್ಣನೆಯನ್ನು ಕೊಡುವುದು ಹೆಚ್ಚು ಪರಿಣಾಮಕಾರಿಯಾಗುವುದೆಂಬ ನಂಬುಗೆಯಿಂದ, ಮೂಲಪದ್ಯಗಳನ್ನೆ ಇಲ್ಲಿ ಕೊಡಲಾಗಿದೆ :

## ಕೋಟೆ

" ಸುತ್ತಣ ಮಣಿಗಲ್ಲ ' ಹೊಂಗೋಂಟೆ' ನೋಡಲು
ತತ್ತಳಗೆಯ್ವುದಕ್ಷಿಗಳ. "

## ಕೊತ್ತಳ

೧

" ಕೊತ್ತಳನಿಚಯವು ಕೊಳಲುಪ್ರೋಪರಿಗಳ
ಹೆತ್ತಳ ಗಂಡನಂತಿಹುದು. "

೨

" ಪಂತದಿಂದವನಿಯ ಹೊತ್ತ ದಿಗ್ಗಜದಂತೆ
ನಿಂತ 'ಕೊತ್ತಳ'ಗಳೊಪ್ಪಿದುವು. "

## ಹುಲಿಮೊಗ ( ಕೋಟೆಯ ಬಾಗಿಲು )

೧

" ಬಲಿನಂದನ ಮುಖ್ಯ ಖಳರೆಂಬ ಮೃಗಕುಲ
ಚಲಿಸಿ ತನ್ನಿದಿರ್ ಬರೆ ಪಿಡಿದು,
ಉಲಿದು ಹೊಯ್ಯುವೆನೆಂಬ ರೌದ್ರದಿಂ ಕೋಟೆಯ
' ಹುಲಿಮೊಗ' ಕಣ್ಗೆ ರಂಜಿಸಿತು. "

೨

ತಿಕ, ಪುಚ್ಛ, ಪಾದಚತುಷ್ಟಯ, ಗೂಢತಾ-
ನಕವಡೆದುಭಯ ವ್ಯಾಘ್ರಗಳು
ಪ್ರಕಟಿಸಿ ನಿಂದಂತೆ ದ್ವಿತಯ ಕೊತ್ತಳ ' ಹುಲಿ-
ಮುಖ'ವಿರ್ದುದೇನ ಬಣ್ಣಿಸುವೆ !

## ಕೋಟೆಯ ಕದ

" ಮಾಟಾದ ರಮ್ಯರತ್ನಗಳ ಸೊನ್ನಾರ ಕೈ-
ಮಾಟ ನಾನಾಬಂಧಗತಿಯು
ಕೂಟಸ್ಥವಾದ ಹೊನ್ನಗಸೆಯ ' ತಳಿತ ಕ-
ವಾಟ'ಗಳಿರ್ದುವೇನೆಂಬೆ !"

## ಮುಗಿಲಟ್ಟಣೆ, ಕಳಸ

" ಬೆಟ್ಟವ ಕಿತ್ತು ತಂದಿರಿಸಿದಂದದಿ ' ಮುಗಿ-
ಲಟ್ಟಣೆ' ತೆನೆಗಳಗ್ರದಲಿ
ಬಟ್ಟರನ್ನಗಳ ತೆತ್ತಿಸಿದ ' ಹೊಂಗಳಸಂ'ಗ-
ಳಿಟ್ಟಿರ್ದುವೇನ ಬಣ್ಣಿಸುವೆ!"

## ಅಗಳು

" ನೆಗಳು, ನೀರಾನೆ, ಪಾಠೀನ, ಕಚ್ಛಪ, ಕರ-
ಯುಗಳ ಕರ್ಕಾಟಕ ನಿಚಯ,
ಜಗಳಕ್ಕೆ ಬಪ್ಪ ಶತ್ರುಗಳ ಖಂಡಿಪೆವೆಂದು
ಅಗಳೊಳು ಘುಳುಘುಳಿಸಿದುವು. "

## ಡೆಂಕಣಿ, ಮುರುಳ್ಗೈ, ಲಾಳಿ, ಬಿಲ್ಲು, ಪೆಟಲು

" ಅಂಕಕೆ ಬರ್ಪ ರಾಯರ ಗಂಡನೆಂದೆಂಬ
' ಡೆಂಕಣಿ-ಮುರುಳ್ಗೈ'ಗಳೊಡನೆ
ಭೋಂಕೆನೆ ಮಿಡಿವ ' ಲಾಳಿ ' ಯ ' ಬಿಲ್ಲು-ಪೆಟಲ್ ' ಗಳ
ಸಂಕುಲವಿರ್ದುದಲ್ಲಲ್ಲಿ!"

## ಪೆರ್ಗದ, ಲಾಳವಿಂಡಿಗೆ, ದ್ವಾರಾಷ್ಟಕ

" ಮದಹಸ್ತಿಗಳ ಕೈಯೆ ನೂಕಿ ಬಂಧಿಸುವ ' ಪೆರ್-
ಗದ' ' ವಜ್ರ-ಲಾಳವಿಂಡಿಗೆ ' ಯ
ಅದಟನ ದ್ವಾರಾಷ್ಟಕವ ವರ್ಣಿಸುವೊಡೆ
ಪದಕವಿಗಳಿಗಗೋಚರವು ! "

## ದಿಡ್ಡಿ, ಬಿಲದ್ವಾರ, ಆಳ್ವೇರಿ

" ಪದಿನಾರು ದಿಡ್ಡಿ, ಬತ್ತೀಸ ಬಿಲದ್ವಾರ,
ವಿಧುಮಿತ್ರದುಪಲದಿಂ ಬಿಗಿದ
ರುಧಿರಾಪುರದಾಳುವೇರಿಯ ಸೌಭಾಗ್ಯ-
ದುದಯವನೇನ ಬಣ್ಣಿಸುವೆ ! "

* * *

**ಗೋವಿಂದ ವೈದ್ಯನು (೧೬೪೮) ತನ್ನ 'ಕಂಠೀರವ ನರಸ-ರಾಜೇಂದ್ರ ವಿಜಯ'** ಎಂಬ ಐತಿಹಾಸಿಕಕಾವ್ಯದಲ್ಲಿ ವಿವರಿಸಿದ ಕೋಟೆಯ ಬಣ್ಣನೆಯು, ಕನಕದಾಸನ ಕೋಟೆಯ ವಿವರಣೆಗಿಂತ ಹೆಚ್ಚಿನ ವಾಸ್ತವತೆಯಿಂದ ಕೂಡಿದೆ. ಇವನು ಹೇಳುವುದೇನೆಂದರೆ :—

**ಕೋಟೆ**

**" ಅಗಲಕೆ ಭೂಮಂಡಲ ಕಿರಿದು, ಉಬ್ಬಲು**
**ಮಿಗೆ ತಾಳವೆಂಟುದಿಕ್ಕೆಂದು,**
**ನಗುತಾಗ ಮೇಲಕ್ಕೆ ಬಳೆದೋಲು ಹೊಂಗೋಂಟೆ**
**ಗಗನಮಂಡಲವ ಮುಟ್ಟಿಹುದು "**

**ತೆನೆ**

**" ಪಾತಾಳದ ಫಣಿಪತಿ ಸಗ್ಗವ ನೋಡ-**
**ಲಾತುರದಿಂ ಮೇಲಕೇಳೆ,**
**ಖ್ಯಾತಿಯ ಪೆಡೆಗಳ ಸಾಲೆನೆ ಕೋಟೆಯ**
**ನೂತನ ತೆನೆಗಳೊಪ್ಪಿದುವು. "**

**ಕೊತ್ತಳ**

**" ಅಷ್ಟದಿಕ್ಪಾಳರು ತಮ್ಮ ಪಟ್ಟಣಗಳಿ-**
**ಗಟ್ಟಿಳಿಯಾಗೆ ರಕ್ಕಸರ,**
**ನೆಟ್ಟನೆ ನಿಲುವ ಠಾಣಗಳೆನೆ 'ಕೊತ್ತಳ'**
**ಕಟ್ಟಿಸಕದೊಳೊಪ್ಪಿದುವು.**

ಎಂಟು ದಿಕ್ಕುಗಳಿಗೂ ಎಂಟು ಕೊತ್ತಳಗಳಿರುತ್ತಿದ್ದುವೆಂಬುದನ್ನು ಹಿಂದೆ ಕನಕದಾಸನೂ ಹೇಳಿದ್ದಾನೆಂಬುದು ನೆನಪಿಸಲ್ಲಿರಬಹುದು.

**ಮುಗಿಲಟ್ಟಣೆ**

**" ಪುರವೆಂಬ ಸರಸಿಯೊಳೊಗೆದ ತಾವರೆಗಳು**
**ತರಣಿಮಂಡಲವ ನೋಡುವೊಡೆ**
**ನೆರೆವಾಯುಪಥವಡರ್ದೊಲು 'ಮುಗಿಲಟ್ಟಣೆ'**
**ಮೆರೆದುವಾಗಸವ ತುಡುಕುತ ! "**

## ಡೆಂಕಣಿ

ನೆರೆ ನವಿನ್ಯಾ ಪುರದರಸಿನಗ್ಗಳಿಕೆಗೆ
ಸರಿಯಿಲ್ಲ ಜಗದೊಳಗೆಂದು ।
ಪುರಲಕ್ಷ್ಮೀ ಕೈಗಳೆತ್ತಿದವೋಲು 'ಡೆಂಕಣಿ'
ಮೆರೆದುವೆಣ್ದೆಸೆಯೊಳೇನೆಂಬೆ ! "

## ಪಟ

" ಗಗನಗಂಗೆಯು ಕಾಲುವೆ ಬಲುಮಾರ್ಗದೆ
ಸೊಗಸುತ್ತೈತಂದೊಪ್ಪಿದಂತೆ
ಮುಗಿಲ ಮುಟ್ಟುವ ಕೋಟಿದೆನೆಯೆಡೆ ಪಟಗಳು
ಝುಗಝುಗಿಸಿದುವು ಶುಭ್ರದಲಿ ! "

## ಅಗಳು

" ಹರಿಗೆ ಹಾಸಿಗೆಯಾಗಬೇಕೆಂದು ಪಾತಾಳ-
ಪುರದಿಂದ ಉರಗೇಂದ್ರ ಬಂದ
ವರಮಾರ್ಗದ್ವಾರವಿದೆನೆ ಬಲುಘಾತದೆ
ಮೆರೆದುದಗಳದೇನನೆಂಬೆ ! "

## ಆಳುವೇರಿ

" ಶಾಲಾವೀಥಿಯು ಬಳಸಿಕೊಂಡತುಲ ವಿ-
ಶಾಲದೊಳಾ ಪಟ್ಟಣದ ।
ಆಳುವೇರಿಗಳೆಸೆದುವು—ನೋಳ್ಪಜನರ ಕ-
ಣ್ಣಾಲೋಕನಕಿನಿದಾಗಿ ! "

## ಹುಲಿಮುಖ

" ಮಲೆತೀ ಪುರಕ್ಕೈತಹ ರಿಪುನೃಪಪಶು-
ಕುಲಸಮೂಹವನಗಿದುಗುಳ್ದ
ಸಲೆ ಶಾರ್ದೂಲವದನವೆನೆ 'ಹುಲಿಮುಖ'
ಬಲು ಭಯಂಕರವ ಬೀರುವುವು. "

## ಬಾಗಿಲ ಸೆಜ್ಜೆ (ಅಗಸೆಯ ಮೇಲಿನ ಗೋಪುರ)

“ ಆ ಪುರದತುಳ ಭಾಗ್ಯ ಕೀರ್ತಿಯು ನಗುತಾಗ
ಗೋಪತಿಗರುಹುವಂದದಲಿ
ತಾ ಪಿರಿದಾಗಿ ಬಾಗಿಲಸೆಜ್ಜೆಯುಭ್ರವ
ವ್ಯಾಪಿಸಿದುವು ಶುಭ್ರವಿಡಿದು ! ”

## ಶತಘ್ನಿ

“ ಪುರಕ್ಕೈದಿ ಬಹರಿಪುಜಲಧಿಯನುಸಿರ್ಗಿಚ್ಚಿ-
ನುರುಹೆಂದು ಪಲವು ಬಾಡಬರ
ಪರಮೇಷ್ಠಿ ನಿರ್ಮಿಸಿ ಕಳುಹಿದ ತೆರದಂತೆ
ಮೆರೆದುವು ಬಲು ‘ಶತಘ್ನಿ’ ಗಳು ! ”

## ಫಿರಂಗಿ

“ ನರ ಸುಧನ್ವನ ಶಿರಕೆಚ್ಚ ಮೂರ್ತಿತ್ರಯ-
ವೆರೆದ ಶಕ್ತಿಯು ತೆರದಂತೆ,
ಪುರದ ಕೋಟೆಯ ಸುತ್ತಣ ಕೊತ್ತಳಗಳೊಳು
ಮೆರೆದುವು ಬಲು ಫಿರಂಗಿಗಳು ! ”

## ಫಿರಂಗಿಗಳ ಬೇರೆ ಬೇರೆ ಹೆಸರು

“ ರಾಮಬಾಣವು, ಭೂತನಾಥ, ಲಂಕೆಯ ನಿರ್-
ಧೂಮಧಾಮನು, ಹನುಮಂತ,
ಚಾಮುಂಡಿ, ಸಿಡಿಲ ಜಂಗುಳಿ, ಮೇಘನಾದ ನಿ-
ಸ್ಸೀಮ ಫಿರಂಗಿಗಳಿಹವು ! ”

## ಕೋವಿಗಳು (ಸಣ್ಣ ತೋಫು)

ಕೋಟೆ ಕೋಲಾಹಲ, ಕಲಿವೀರಭದ್ರನು,
ಲೂಟಿಯ ರಣಭೈರವನು,
ಮಿಾಟನ ರಂಗನಾಥನು ವೈರಿಭಟ ಕುರು-
ಪಾಟದ ಬಲ್ಗೋವಿಯಿಹುವು ! ”

## ಕೋಟೆಯ ಮೇಲಿನ ಬೇರೆ ಉಪಕರಣಗಳು

ಒಡ್ಡಿದ ‘ ಶೂಲ ’ ‘ ವರಾಹನ ತಲೆ ’ ‘ ನೂಂಕು-
ವಡ್ಡವಲಗೆ ’ ಕವಣೆ ’ ಗಳು
‘ ಅಡ್ಡಾಯುಧ ’ ‘ ಗರಗಸ ’ ‘ ನೊನೆಗಲ್ಲು ’ ಕ-
ಣ್ಗೆಡ್ಡವಾಗಿಯೆ ರಾಜಿಸುವುವು ! ”

‘ ಚೇಳುಬಾಣಗಳ ರಾಟೆಳ ’ ಉರಿಪೊಟ್ಟಣ
ವೇಳುವ ‘ ಜಂತ್ರದದಗಳು (?) ’
ತೂಳುವ ‘ ಗುಂಡುಗಲ್ಗಳ ರಾಶಿ ’ ಪಟ್ಟಣ-
ದಾಳುವೇರಿಯ ತುಂಬಿಹವು !

‘ ವಿಷದ ಜೀರ್ಕೊಳವಿ ’ ‘ ಮಳಲರಾಶಿ ’ ಉಕ್ಕಿನ
ಮುಸೆದಲಗಿನ ‘ ಸಾಲಸಬಳ ’
ಎಸೆವ ‘ ಕೀಲಾಯುಧ ’ ಬಲಿದ ‘ ಅಡ್ಡದೊಲೆ ’ ಕ-
ಣ್ಗೆಸೆದುವು ತೆನೆಯ ಸಂದಿಯಲಿ ! ”

ವರ್ಣಕಕವಿಗಳು ಹೇಳಿದ ಕೋಟೆಯ ವಿವರಣೆಯ ಮಾದರಿಗಳಿವು. “ ಇಂತಪ್ಪ ಪುರದ ಚೌದೆಸೆಯ ಬಾಗಿಲುಗಳ ಮುಂತಿಹ ‘ ಚಾವಡಿ ’ ಗಳಲಿ, ದಿವ್ಯಾಯುಧಗಳನಾಂತು, ಹೊಂತಕಾರಿಗಳು ಪಂಥದೊಳು ’ ಹಗಲಿರುಳೂ ಸಂರಕ್ಷಿಸುತ್ತಿರುವರು. ಎಂದ ಮೇಲೆ ಇಲ್ಲಿ ಉಡುಗಳ ಏರಾಟ ನಡೆವ ಬಗೆ ಹೇಗೆ ?

ಮೇಲೆ ಹೇಳಿದ ಉದಾಹರಣೆಗಳನ್ನೆಲ್ಲ ಸೂಕ್ಷ್ಮವಾಗಿ ಅವಲೋಕಿಸಿದಲ್ಲಿ, ಆಳವಾದ ಅಗಳು ಬಳಸಿದ ಎತ್ತರವಾದ ಆಳ್ವೇರಿಗಳುಳ್ಳ ಕೋಟೆ, ದಿಕ್ಕುದಿಕ್ಕಿನಲ್ಲಿ ಭವ್ಯವಾಗಿ ನಿಂತಿರುವ ಕೊತ್ತಳಗಳು, ಆಳ್ವೇರಿಯ ಮೇಲೆ ಸಾಲು-ಸಾಲಾಗಿ ನಿಂತ ತೆನೆಗಳು, ವೈರಿಗಳು ಬರುವ ಸುಳುಹನ್ನು ದೂರದಿಂದಲೆ ಕಂಡು ಹಿಡಿಯುವುದಕ್ಕಾಗಿ ಅನುಗೊಳಿಸಿದ ಮುಗಿಲಟ್ಟಣೆಗಳು ( ಮಂಚಿಕೆ ), ಎರಡೂ ಬದಿಗೆ ಹುಲಿಗಳಂತೆ ನಿಂತಿದ್ದ ಕೊತ್ತಳಗಳ ನಡುವಿನ ಹೆಬ್ಬಾಗಿಲು, ಆನೆಗಳಿಂದ ನೂಕಿಸಿದಾಗಲೆ ಮುಚ್ಚಲಿಕ್ಕಾಗುವಂತಹ ಭದ್ರವಾದ ಕದಗಳು, ಲಾಳವಿಂಡಿಗೆ (ಅಗಳಿ), ಕೊತ್ತಳಗಳ ಮೇಲೆ ನಿಡಿದಾಗಿ ನಿಂತ ಡೆಂಕಣಿಗಳು, ಮರುಳ್ಗೈಗಳು, ಧ್ವಜ-ಕೇತನಗಳು ಇವೆಲ್ಲ ಕಣ್ಣೆದುರು ಬಂದು ನಿಲ್ಲದೆ

ಇರವು. ಇದೆಲ್ಲ ಯುದ್ಧವಿಲ್ಲದಾಗಿನ ಬರಿಯೆ ಕೋಟೆಯ ಬಣ್ಣನೆಯಾಯಿತು. ಇನ್ನು ಯುದ್ಧ ನಡೆಯಬಹುದಾದಾಗ ಕೋಟೆಗಾಳೆಗದ '**ಸಂವರಣೆ**' (ಪೂರ್ವ ಸಿದ್ಧತೆ) ಯನ್ನು ಯಾವ ರೀತಿಯಿಂದ ಮಾಡಲಾಗುತ್ತಿದ್ದಿತೆಂಬುದನ್ನು, ಬೇರೆ ಬೇರೆ ಕಾಲದ ಕೆಲವು ಕವಿಗಳ ಮಾತುಗಳ ಮೂಲಕ ಅರಿತುಕೊಳ್ಳಲಿಕ್ಕೆ ಪ್ರಯತ್ನಿಸೋಣ.

# ೪. ಕೋಟೆಗಾಳೆಗಕ್ಕೆ ಮೊದಲು

## I ಲಗ್ಗೆಯಿಕ್ಕಿದವರ ಸಿದ್ಧತೆ

ಕೋಟೆಗಾಳೆಗ ಆರಂಭವಾಗುವುದಕ್ಕೆ ಮೊದಲು ಎರಡು ಪಕ್ಷಗಳಲ್ಲಿಯೂ ಸಮರಸಿದ್ಧತೆಗಳು ನಡೆಯಬೇಕಲ್ಲವೆ! ಹೊರಗಣಿಂದ ಬಂದು ಮುತ್ತಿಗೆ ಹಾಕಲಿರುವವರ ಸಿದ್ಧತೆಗಳು ಒಂದು ಜಾತಿಯವಾದರೆ, ಕೋಟೆಯೊಳಗೆ ಇದ್ದವರ ಸಾಧನ-ಸಿದ್ಧತೆಗಳು ಮತ್ತೊಂದು ಜಾತಿಯವಾಗಿರುವುವು. ಮೊದಲು ಮುತ್ತಿಗೆ ಹಾಕಿದವರ ಸಮರಸಿದ್ಧತೆಯನ್ನು ಪ್ರಕಟಗೊಳಿಸುವಂತಹ ಉದಾಹರಣೆಗಳನ್ನು ನೋಡೋಣ! ಒಂದು ವಿಷಯ: ಕೋಟೆಯ ವರ್ಣನೆಗಳಂತೆ ಈ ವರ್ಣನೆಗಳು—ವಸ್ತುಕಕಾವ್ಯಗಳೊಳಗಿನವೂ—ಕೃತ್ರಿಮವಾಗಿ ಇಲ್ಲ; ಇಷ್ಟೇ, ವಸ್ತುಕಗಳಲ್ಲಿ ಸಂಕ್ಷೇಪವಾಗಿದ್ದರೆ ವರ್ಣಕಗಳಲ್ಲಿ ವಿಶದವಾಗಿವೆ. ಎರಡರಲ್ಲಿಯೂ ಕನ್ನಡಿಗರ ಸಮರಜೀವನದ ವಾಸ್ತವತೆಯನ್ನು ಕಂಡುಕೊಳ್ಳಬಹುದಾಗಿದೆ.

* * *

**ಜನ್ನಕವಿ** (೧೨೨೦-೩೦) ತನ್ನ '**ಅನಂತನಾಥ ಪುರಾಣ**' ದಲ್ಲಿ ವಸುಷೇಣನ ಮುತ್ತಿಗೆಯನ್ನು—ಸ್ವಲ್ಪ ಮಾತುಗಳಲ್ಲಿಯೆ—ಸುಂದರವಾಗಿ ಚಿತ್ರಿಸಿರುವನು. ಅದು ಹೇಗೆಂದರೆ :—

**" ಹೀಗೆ ಮೂರು ಬಳಸುಗಳಿಂದ ಬಳಸಿ ಬೀಡುಬಿಟ್ಟು, ಮರುದಿನವೆ ಲಗ್ಗೆಯನ್ನಿಕ್ಕಬೇಕಾದ ದಿನವಾದುದರಿಂದ ವಸುಷೇಣರಾಜನು, ಕೋಟೆಯ 'ಸದರಸಿದರಮುಮಂ (ಅನುಕೂಲ - ಪ್ರತಿಕೂಲ ಸ್ಥಳಗಳನ್ನೂ) ಜಂತ್ರದ ಒಡವಣೆಗಳುಮಂ (ಕೋಟೆಯ ವ್ಯೂಹದ ರೀತಿಗಳನ್ನೂ),**

ಭೂಮಾನಮುಮಂ (ಭೂಮಿಯ ಅಳತೆಗಳನ್ನೂ) ಪುಗುವ ಪೊರ ಮಡುವ ನೀರಕಂಡಿ-ಕುದುರೆಗಂಡಿಯ ತೆರಪುಗಳುಮಂ' ಸುತ್ತಿ ಸುತ್ತಿ ನೋಡುತ್ತ ಬರುತ್ತಿರುವಾಗ 'ಏರಿಸಿದ ತಿಮಿರೊಳಂ, ಇಟ್ಟ ತಿಲಕ ದೊಳಂ, ಕಟ್ಟಿದ ದೆಂಡೆಯೊಳಂ, ಅರ್ಚಿಸಿದ ಕೊತ್ತಳದೊಳಂ ಅಮರ್ಚಿ ಸಿದ ಅಟ್ಟಳೆಯೊಳಂ, ಎತ್ತಿದ ಪತಾಕೆಯೊಳಂ, ಸುತ್ತಿದ ಬೇವಿನ ದಂಡೆಯೊಳಂ, ಸೆಱಿಗೆಯ್ದ ಸಱಿಯೊಳಂ, ಪೊಯಿಸಿದ ಗಾಲಿಯೊಳಂ, ನಿಱಿಸಿದ ಬಸಿಯೊಳಂ, ಪೂಸಿದ ಡೆಂಕಣಿಯೊಳಂ, ಗುಡಿಸಿದ ಗುಂಡಿ ನೊಳಂ, ಪಣ್ಣಿದ ಸಾರವಾರಿಯೊಳಂ, ಪುರಿದ ಮಣಲೊಳಂ, ಬಿರ್ಚಿದ ಬೇರ್ಕೆಯೊಳಂ, ಬೆಯ್ದಾಡುವ ಕಹಳೆಯೊಳಂ, ಪೊಯ್ದು ಬೊಬ್ಬಿರಿವ ಪಱಿಯೊಳಂ, ತೆನೆಯಂ ತಳ್ತ ಪರಿಗೆಯೊಳಂ, ಮೊನೆಯಂಪೂಣಿಸಿದ ಕೊಂತದೊಳಂ ಕೈಗೆಯ್ದು ಕಟ್ಬಾಸುರವಾಗೆ, ಮಸೆದ ಜವದಾಡೆಯಂತೆ- ಮಸಗಿದ ರಕ್ಕಸರ ಮಾಡದಂತೆ- ನೋಡಲರಿದೆನಿಸಿದ ಮಕರಮುಖ ದಾಡಾಯಗ್ಗದ ಅಗ್ಗಳಿಕೆಯಂ ಕಂಡು' ತುಂಬ ಕೋಪಗೊಂಡನು."

* * *

ಮೂರನೆಯ ಮಂಗರಸನು (೧೫೦೮) ತನ್ನ 'ಸಮ್ಯಕ್ತ್ವ ಕೌಮುದಿ' ಎಂಬ ಗ್ರಂಥದಲ್ಲಿ ಲಗ್ಗೆಗಾರನ ಸನ್ನಾಹವನ್ನು ಹೀಗೆಂದು ಹೇಳಿದ್ದಾನೆ:

"ಅರವೆಯ ತೊರೆದು, ಕೆರೆಗಳನೊಡೆದು, ಸುಟ್ಟಗ್ರ-
ಹಾರ ಮೊದಲಾದೂರುಗಳನು, ತುರುಸೆರೆಯ ಹಿಡಿ-
ದಾರಯ್ಯದಿದಿರಾದ ಬಲುದುರ್ಗಗಳನು ಧೂಳೀಪಟ್ಟಮಂ ಮಾಡುತ,
ಆರುಭಟೆಯಿಂದ ದಾಳಿಯನಿಟ್ಟು, ನಿಸ್ಸಾಣ-
ಭೇರಿ-ದುಂದುಭಿಯ ರವ ಘೂರ್ಣಿಸಲ್, ಮೂವಳಸಿ
ವಾರಣಾಸೀಪುರವ ಮುತ್ತಿದಂ ಜೇನಹುಳು ಝೇಂಕರಿಸಿ ಮುತ್ತುವಂತೆ ||

ಮುತ್ತಿ ಕೋಟೆಯ ಏರ್ಪಾಡುಗಳನ್ನೆಲ್ಲ ನೋಡುತ್ತಿರುವಾಗ:

"ನೆಲಕೆ ಬಾಗಿಸಿದ ಪಲವರಿಯ ಡೆಂಕಣಿ, ಕವಣೆ,
ತೊಲೆ, ಸಬಳ, ಹೇರಿಟ್ಟಿ, ದಸಿ, ಗುಂಡು, ಕಾಸುವಂ-
ಬಲಿ, ಸಾರವಾರಿ, ನೆಲಗುಮ್ಮ, ಬಿಸಿಯೆಣ್ಣೆ, ಹುರಿಮಳಲು,
ಹಾವಿನಹೇಳಿಗೆ, ||

**ಬಲು ಹುಲ್ಲದೊಂದೆ, ಬಿಲ್, ಅಂಬು, ಕತ್ತರಿ, ಪಂದಿ-**
**ದಲೆ, ಹಾರೆ, ಬಿರಿಕೊರಡು, ಪೆಟಲು, ತಿರುಗಣೆ, ಬೀಸು-**
**ವಲೆ, ತಳಿಯುವುರದ ಗೊಂದಣದ ಸಂವರಣೆಯಿಂದಾ ಕೋಟೆ**
**ಕಣ್ಗೊಪ್ಪಿತು !**

## II ಕೋಟೆಯೊಳಗಿನವರ ಸಿದ್ಧತೆ.

ಮೇಲಿನ ವರ್ಣನೆಯಲ್ಲಿ— ಆನುಷಂಗಿಕವಾಗಿ —ಕೋಟೆಯೊಳಗಿನ ಜನರು ಮಾಡಿಕೊಂಡಿರುವ 'ಸಂವರಣೆ' ಯ ವಿಚಾರವೂ ಸ್ವಲ್ಪದರಲ್ಲಿ ಬಂದಿದೆ. ಈಗ ಆ ವಿಚಾರವನ್ನೆ ಕುರಿತು ಹೆಚ್ಚಿಗೆ ವಿವರ-ವಿವರವಾಗಿ ಹೇಳಿದವರ ಕೃತಿಗಳಿಂದ ಕೆಲವು ಉದಾಹರಣೆಗಳನ್ನು ಕೊಡಲಿರುವೆನು.

* * *

ಎರಡನೆಯ **ಗುಣವರ್ಮ**ನು, (೧೨೩೦) ತನ್ನ '**ಪುಷ್ಪದಂತ ಪುರಾಣ**' ದಲ್ಲಿ ಕೋಟೆಯೊಳಗಿನವರ ಸಂವರಣೆಗಳನ್ನು ಈ ರೀತಿ ಹೇಳಿರುವನು :

"ಅಷ್ಟರಲ್ಲಿಯೆ ಆತನ (ವೈರಿರಾಜನ) ಬರವನ್ನು ಅರಿತುಕೊಂಡು 'ಜಳಖಾತಿಕೆ' ಗಳನ್ನು ತುಂಬಿಸಿಯೂ, ತುಂಬ ಗಟ್ಟಿಮುಟ್ಟಾದ 'ಜಾಳಂಗಳಿಂ (ತಂತಿಯ ಬಲೆಗಳಿಂದ) ಮೇಳೆಯುಮಂ ಓಳಿಗೊಳಿಸಿ' ಯೂ, ವಿಷವು ವಿಟಂಕದಂಷ್ಟ್ರಾಂಕುರದಂತೆ' ಭಯಂಕರವಾಗಿರುವ 'ವಿಷಲತಾ-ಗುಲ್ಮ ಕಂಟಕಂಗಳಂ' ವ್ಯವಸ್ಥಿತವಾಗಿ ಅಳವಡಿಸಿಯೂ, ವೈರಿಸೈನಿಕರ ಮೊಣ-ಕಾಲುಗಳು ಒಡೆದು ಛಿನ್ನವಿಚ್ಛಿನ್ನವಾಗಿ ಹೋಗುವಂತೆ 'ದಸಿಗಳಂ (ಚೂಪಾದ ಗೂಟಗಳನ್ನು)' ಕೆತ್ತಿಸಿ ನೆಡಿಸಿಯೂ, ಅಡಿಗಳನ್ನು ಮುಂದಿರಿಸಿ ನಡೆಯಲಿಕ್ಕೆ ಬಾರದಂತೆ 'ವಜ್ರಸೂಜಿ' ಗಳನ್ನು ಮೇಲುಮೊಗವಾಗಿ ನಿಲ್ಲಿಸಿಯೂ, ಮದ್ದಾನೆಗಳ ಅಡಿಗಳಡಿಯನ್ನು ತೊಂದರೆಗೀಡುಮಾಡುವ 'ಶೃಂಗಾಟಕ (ಒಂದು ಜಾತಿಯ ಮುಳ್ಳಿನ ಬಳ್ಳಿ)' ಗಳನ್ನು ದಾರಿದಾರಿಗಳಲ್ಲಿ ಹರಡಿಸಿಯೂ, 'ಪ್ರಳಯ ಶಿಖಿಯ ದಳ್ಳುರಿಯ ಬಳ್ಳಿಯಂತೆ ಮುಳ್ಳಿಸುವ ಮುಸಕದ ಉರಿಯೆಣ್ಣೆಯಂ' ಸಿದ್ಧಗೊಳಿಸಿಯೂ, ವೈರಿಗಳ ಏಟುಗಳನ್ನು ನಿವಾರಿಸಲು ಸಮರ್ಥವಾದ 'ಆಳ್ವೇರಿ' ಯ ಸಮೂಹವನ್ನು ಬೇರೆ ಬೇರೆ ಯುದ್ಧೋಪಕರಣಗಳಿಂದ ತುಂಬಿಯೂ, ಲಗ್ಗೆಯಲ್ಲಿ ಮೇಲೇರಿ ಬರುವ

ಬಂಟರನ್ನು ತಿವಿದು ಹಿಂದಟ್ಟಿಸುವಂತಹ 'ಅಂಕುಶಗಳನು' ಸಜ್ಜು ಗೊಳಿಸಿಯೂ, ಬೆಂಗುಂಡುಗೊಂಡ-ಗಂಡಗತ್ತರಿಯ ಸಂಸರ್ಗದ ಅರ್ಗಳವಂ (ಅಗಳಿಯನ್ನು)' ಗಟ್ಟಿಯಾಗಿ ಕೂಡಿಸಿಯೂ, ಬಾಗಿಲುಗಳನ್ನೆಲ್ಲ ಮುಚ್ಚಿಸಿಯೂ, ಶತ್ರುಸೈನ್ಯದ ವಿಶಿಷ್ಟ ಪರಿಸ್ಥಿತಿಗಳನ್ನು ತಿಳಿದುಕೊಂಡು ಅವರ ಶಕ್ತಿಯನ್ನು ಕುಗ್ಗಿಸುವಂತೆ 'ಕಟ್ಟುನಿಟ್ಟಳಂ' ಮಾಡಿಸಿಯೂ, ಅಲ್ಲಲ್ಲಿ 'ಜಾವವುಕ್ಕಡ' 'ಗರವಟಿಗೆ' 'ತಳವರಿಕೆ' ಗಳನ್ನು ಅನುಗೊಳಿಸಿ ಅಲ್ಲಿಯ ಕಾಪಿನವರು ಆಗಾಗ ಶತ್ರುಸೈನ್ಯದ 'ಠಾಣಾಂತರ' ವನ್ನು ತಿಳುಹಬೇಕೆಂದು ಅಪ್ಪಣೆಮಾಡಿಯೂ ಯುದ್ಧಕ್ಕೆ ಸನ್ನದ್ಧರಾಗಿ ನಿಂತರು. (೭ನೆಯ **ಆಶ್ವಾಸದ ೬೯ನೆಯ ಪದ್ಯದ ಮುಂದಿನ ವಚನದ ಭಾವಾರ್ಥವಿದು.**)

* * *

**ವಿರೂಪಾಕ್ಷ ಪಂಡಿತನು** (೧೫೮೪) ತನ್ನ '**ಚೆನ್ನಬಸವಪುರಾಣ**' ದಲ್ಲಿ ಕೋಟೆಯ ಸಂವರಣೆಯನ್ನು ಕಣ್ಣಾರೆ ಕಂಡವನಾಗಿ ವರ್ಣಿಸಿರುವನು. ನಿಜವಾಗಿ ನೋಡಿದರೆ ಅವನಿಗೆ ವರ್ಣ್ಯವಿಷಯವಾಗಿದ್ದ ಕೋಟೆಗಾಳೆಗವು, ದೇವತೆಗಳೊಡನೆ ಶ್ರೀಶಂಕರನು ಹೊರಟು ತ್ರಿಪುರಕ್ಕೆ ಮುತ್ತಿಗೆ ಹಾಕಿದ-ಕೇವಲ ಪೌರಾಣಿಕ-ಕತೆಯನ್ನೊಳಗೊಂಡುದು; ಆದರೆ ಅವನು ದೇವತೆಗಳ ಮುತ್ತಿಗೆಯನ್ನಾಗಿ ಅದನ್ನು ಬಣ್ಣಿಸಿಲ್ಲ; ತನ್ನ ಕಾಲದ ಯಾವನಾದರೊಬ್ಬ ರಾಜನು, ಸೈನ್ಯಸಮೇತನಾಗಿ-ಇನ್ನಾವುದೋ ರಾಜನ ರಾಜಧಾನಿಯನ್ನು ಮುತ್ತಿದ ಐತಿಹಾಸಿಕವಸ್ತುವಿನಂತೆ ವರ್ಣಿಸಿದ್ದಾನೆ. ಆದುದರಿಂದಲೆ ಇವನ ಕೋಟೆಗಾಳೆಗದಲ್ಲಿ, ವಿಜಯನಗರದ ಸೈನ್ಯದಲ್ಲಿ ಪ್ರಚಾರಗೊಂಡಿದ್ದ 'ಪೆಟಲು' 'ಗುಂಡುಗೋವಿ' 'ಫಿರಂಗಿ' ಇವೆಲ್ಲ ಬಂದಿರುವುದನ್ನು ನೋಡಬಹುದು. **ತಾರಕಾಕ್ಷನ** ಕೋಟೆಯ ಸಂರಕ್ಷಣೆಯ ಸಿದ್ಧತೆಯನ್ನು ವಿರೂಪಾಕ್ಷಪಂಡಿತ ಹೀಗೆ ವಿವರಿಸಿದ್ದಾನೆ:



**"ಗರ್ಜಿಸುವ ಸುಭಟರಂ ನಿಲಿಸಿ, ಓಲಗವಂ ವಿ-**
**ಸರ್ಜಿಸಿ, ಅಸುರತ್ರಯದ ಕೋಂಟೆಗಾವಲ ಪಟು ಭ-**
**ಟರ್ ಜತನವೆಂದು ನೇಮಿಸಿ, ತಾರಕಾಕ್ಷನರಮನೆ ಪೊಕ್ಕನಾ**
**ಕ್ಷಣದೊಳು !**

ದುರ್ಜಯರ್ ಬಡಿವ ಹರೆಗಳ, ಕೈಗಳೊಳಗಾಂತ
ಪೆರ್ಜೋಡರ ಗಡಣದಿಂ, ಪ್ರಹರಿಪೊದಕುಳಿಯಿಂದೆ
ವರ್ಜಿತಸ್ವಾಪರುರೆ ಭೋಯೆನುತೆ ಮುಪ್ಪುರಿಯ ಕೋಂಟೆಯಂ
ಕಾದಿರ್ದರು. ( ಸಂ. ೪೨. ಪ. ೯ )



ಬಿಡದೆ ಕೂಗುವ ಪಹರೆ, ತಿರುಗುತಿಹ ಪಂಜುಗಳ್,
ಗಡಬಡಿಪ ಕೋಂಟೆವರೆ, ದನಿಗೆಯ್ವ ಪೆಟಲುಗಳ್,
ಒಡನೊಡನೆ ಸುಳಿವ ಪೋಲ್ಪಪರಿಯಾಳ್ಗಳ್, ಚೀರುತಿಹ
ಕಹಳೆಗಳ್, ಭರದೊಳು-

ಪೊಡೆವ ತಂಬಟರವಂ, ಮೋಸವೋಗದಿರೆನುತ
ಅಡಿಗಡಿಗೆ ಸುಯ್ದಾನವುಂ ಮಾಳ್ಪ ಭಟರವಂ
ಗಡಮೊಸೆದುದಾಗಳಾ ತ್ರಿಪುರದಾಳ್ವೇರಿಯೆಡೆಯೆಡೆಯೊಳತಿ
ನಿಬಿಡಮಾಗಿ! ( ಸಂ. ೪೨. ಪದ್ಯ ೧೦ )



ಹುರಿವ ಮಳಲಿನ, ಕಾಸುವಂಬಲಿಯ, ಬಿಸಿಯೆಣ್ಣೆ-
ಪರವಿಗಳ, ಪುದಿದ ಪುಲ್ದೊಂದೆಗಳ, ತರತರದೊ-
ಳಿರಿಸಿರ್ದ ಬಲ್ಡೊಲೆಯ, ಡೆಂಕಣಿಯ, ಮುರುಳ ಕೈಗಳ, ನೆಟ್ಟ
ಬಲ್ಗಸಿಗಳ,

ಪರಿಪರಿಯ ಗುಂಡುಗೋವಿಗಳ, ಕುದಿವ ಸುಣ್ಣಗಳ,
ಪಿರಿದಾದ ಗುಂಡುಗಳ, ಕವಣೆಗಳ, ಸಬಳಗಳ,
ಸುರಿದ ಕಲ್ಗಳ, ಪಂದಿದಲೆಯ ಮೊತ್ತಂಗಳಾಳ್ವೇರಿಯೊಳ್
ಮೆರೆದುವಂದು. ( ಸಂ. ೪೨; ಪದ್ಯ ೧೧

ಹೀಗೆ ಅಸುರರು ತಮ್ಮ ಸುಪುರಸಿದ್ಧತೆಯನ್ನು ಮಾಡಿಕೊಳ್ಳುತ್ತ ತುಂಬ ಎಚ್ಚರಿಕೆಯಿಂದ ನೋಡಿಕೊಂಡಿರುವಾಗಲೆ, ದೇವತೆಗಳ ಸೈನ್ಯಾಧಿಪತಿಯಾದ ದೇವೇಂದ್ರನು ಬೇಗನೆ ಎದ್ದು, 'ತ್ರಿಪುರಕ್ಕೆ ಲಗ್ಗೆಯಿಕ್ಕುವುದಕ್ಕಾಗಿ ಎಲ್ಲರೂ ಎಲ್ಲ ಬಗೆಯಿಂದ ಸನ್ನಾಹ ಮಾಡಿಕೊಂಡು ಹೊರಡ-

ಬೇಕು !' ಎಂದು ಪಾಳೆಯದೊಳಗೆಲ್ಲ ಡಂಗುರವನ್ನು ಹೊಡೆಯಿಸಿದನು. ಆಗ :

**" ಆನೆಗಳ್ಗೆ ಗುಳಿವನಿಕ್ಕಿದರು. ಕುದುರೆಗಳ್ಗೆ ಇರದೆ ಪಲ್ಲಣವುಂ ಅಳವಡಿಸಿದರು. ತೇರ್ಗಂ ಐದೆ ವಾಜಿಗಳಂ ಕಟ್ಟಿದರು. ಕಾಲಾಳ್ಗಳುಂ ಸಂಜೋಗವಾಗಿ ಪೊರವಟ್ಟರು. ಭೇರಿ, ದುಂದುಭಿ, ಢಕ್ಕೆ, ಡೌಡೆ, ಬೊಂಬುಳಿಕರಡಿ, ನಿಸ್ಸಾಳ ಎಂಬ ವಾದ್ಯಪ್ರತತಿ ಮೊಳಗಿದುದು. ಪರಿಗಣನೆಗರಿದೆಂದೆನಲ್ ಚತುರಂಗಸೇನೆ ತವಕದಿಂದ ತಳರ್ದುದು.''**

ಸೈನ್ಯದೊಡನೆ ಬಂದ ದೇವೇಂದ್ರನು ಆ ಯುದ್ಧಸನ್ನದ್ಧ-ಕೋಂಟೆಯನ್ನು ನೋಡಲುತೊಡಗಿದ. ಆಗ :

**" ಸಾಲ ಮುಗಿಲಟ್ಟಣೆಯು, ಡೆಂಕಣಿಯು, ಪಂದಿದಲೆ-**
**ಯೋಳಿಗಳ, ಮರುಳಕೈಗಳ, ತೂಗುದೊಲೆಯು, ಧ್ವ-**
**ಜಾಳಿಗಳ, ನೆಟ್ಟ ಸಬಳಗಳ, ನಿಡುಗುಂಡುಗಳ ಸಂದಣಿಯು ಸನ್ನಾಹದ-**
**ಸ್ಥೂಲವಾಗಿರ್ದ ತೆನೆಗಳ, ಕನಕರತ್ನ ಪ್ರ-**
**ಭಾಲಹರಿಯೊಬ್ಬುಳಿಯು, ಘಾತವಾದಗಳಿನ, ವಿ-**
**ಶಾಲಶಾಲವುನಿರದೆ ದಿವಿಜಪತಿ ಕಂಡು ತನ್ನವರ ಕೂಡಿಂತೆಂದನು.''**
**( ಸಂಧಿ ೪೨; ಪದ್ಯ ೨೨ )**

'ಬೇಗನೆ ಮುತ್ತಿಗೆ ಹಾಕಿ ತ್ರಿಪುರದ ಕೋಟೆಯನ್ನು ವಶಪಡಿಸಿಕೊಳ್ಳಬೇಕು' ಎಂದು ಕಟ್ಟಳೆಮಾಡಿದ ದೇವೇಂದ್ರನ ಆಶಯವನ್ನರಿತು ಎಲ್ಲರೂ ಸಂಭ್ರಮದಿಂದ ಮುಂದುವರಿದರು.

* * *

**ಗೋವಿಂದವೈದ್ಯನು** ( ೧೬೪೮ ) ತನ್ನ **'ಕಂಠೀರವ ನರಸರಾಜೇಂದ್ರವಿಜಯ'** ಕಾವ್ಯದಲ್ಲಿಯಂತೂ ಕೋಟೆಯೊಳಗಿನವರ ಸನ್ನಾಹವನ್ನು-ಕಣ್ಣಿಗೆ ಕಟ್ಟುವಂತೆ-ವರ್ಣಿಸಿದ್ದಾನೆ. ಹೇಳಿ ಕೇಳಿ ಐತಿಹಾಸಿಕ ಸಂಗತಿಗಳನ್ನು ಒಳಗೊಂಡ ಕಾವ್ಯವದು. ಅದರಲ್ಲಿಯ ಕೋಟೆ ಕನ್ನಡಿಗರದು, ಕೋಟೆಯ ಸಂವರಣೆಯ ರೀತಿ-ನೀತಿಗಳೆಲ್ಲ ಕನ್ನಡಿಗರವು; ಆದುದರಿಂದಲೆ ಅವನ ವರ್ಣನೆಯಲ್ಲಿ ಕೃತಕಕಲ್ಪನೆಯ ಅಂಶ ಕೊಂಚವೂ ಇರದೆ,

ಕೇವಲ ಕಣ್ಣಾರೆ ಕಂಡ ವಾಸ್ತವಾಂಶವೇ ಹೆಚ್ಚಾಗಿ ಇದೆ. ಆದುದರಿಂದಲೆ ಆಧುನಿಕನಾದ ಗೋವಿಂದವೈದ್ಯನ ಕೋಟೆಗಾಳೆಗದ ಕತೆಯು ನಮಗೆ ಅಳೆಗೋಲೋ, ಒರೆಗಲ್ಲೋ ಆಗಿನಿಲ್ಲುವುದು. ಅದರ ಮೂಲಕ ಆತನಿಗಿಂತ ಹಿಂದೆ ಆಗಿಹೋದ–ಬೇರೆ ಬೇರೆ ಶತಮಾನಗಳ–ಕನ್ನಡ ಕವಿಗಳ ಕೃತಿಗಳಲ್ಲಿಯ ಕೋಟೆಗಾಳೆಗದ ಸಂದರ್ಭಗಳನ್ನು ವಿಮರ್ಶಿಸಲಿಕ್ಕೆ ಅನುಕೂಲವಾಗುವುದು. ಗೋವಿಂದವೈದ್ಯನ ಕೋಟೆಗಾಳೆಗದ ಬಣ್ಣನೆಯನ್ನು ಚೆನ್ನಾಗಿ ನೋಡಿದವರಿಗೆ, ಹಿಂದಣ ಕವಿಗಳ ಕೃತಿಗಳಲ್ಲಿ ಬರುವ ಕೋಟೆಗಾಳೆ-ಗದ ವಿವರಣೆಗಳಲ್ಲಿ 'ಕೃತಕವೆಷ್ಟು? ವಾಸ್ತವವೆಷ್ಟು?' ಎಂಬುದು ಸಹಜವಾಗಿ ಕಂಡುಬರುವಂತಿದೆ. ಇದರ ಮೂಲಕವಾಗಿಯೆ ಕನ್ನಡ ಪ್ರಾಚೀನ ಸಾಹಿತ್ಯದಲ್ಲಿ ಅಲ್ಲಲ್ಲಿ ಮೂಡಿನಿಂತಿರುವ ಕೋಟೆಗಾಳೆಗದ ಚಿತ್ರವು, ಕೇವಲ ಕನ್ನಡಿಗರ ಕೋಟೆಗಾಳೆಗದ ಪರಂಪರೆಗೇ ಸೇರಿದುದೆಂಬುದರ ಮನವರಿಕೆ ಖಂಡಿತವಾಗುವುದು.

ವಿಜಾಪುರದ ಬಾದಶಹನಿಂದ ಕರ್ಣಾಟಕವನ್ನು ಗೆಲ್ಲುವ ಅಪ್ಪಣೆ ಪಡೆದು '**ರಣಧೂಳಿಖಾನ** (ರಣದುಲ್ಲಾಖಾನ್)' ನೆಂಬವನು ದಂಡೆತ್ತಿ ದಕ್ಷಿಣಕ್ಕೆ ಬರುವನು. ಒಂದರ ಹಿಂದೊಂದು ಕೋಟೆಗಳನ್ನು ವಶಪಡಿಸಿಕೊಳ್ಳುತ್ತ ಆಗಿನ ಮೈಸೂರರಸರ ರಾಜಧಾನಿಯಾದ **ಶ್ರೀರಂಗಪಟ್ಟಣ**ವನ್ನು ಸಮೀಪಿಸುವನು. ಈ ವರ್ತಮಾನ 'ದೊರೆರಾಯ ಕಂಠೀರವ ನರಸರಾಜೇಂದ್ರ' ನಿಗೆ ಗೊತ್ತಾಯಿತು. ಆಗ :

**ಪಟ್ಟಣ ಮೊದಲಾದ ಗಡಿಯ ದುರ್ಗಂಗಳ-**
**ಗೊಟ್ಟಿಸಿ ಸಂವರಣೆಗಳ |**
**ಕಟ್ಟೆಚ್ಚರೊಳಿರಿಸೆಂದು ನಂಜೇಂದ್ರಗೆ**
**ಸೃಷ್ಟೀಶ್ವರ ನೇಮಿಸಿದ. ||**

ಆಗ ಮಂತ್ರಿಯಾದ ನಂಜರಾಜನು ಎಲ್ಲ ಗಡಿಯ ದುರ್ಗಗಳನ್ನೂ ಹೇಗೆ 'ಸಂವರಣೆಗೊಳಿಸಿದ' ನೆಂಬುದನ್ನು ನೋಡಿ :



**"ಮುಗಿಲ ಮುಟ್ಟುವ ಕೋಟೆಯ ತೆನೆಯೆಡೆಯೆಡೆ**
**ಹೊಗರೆದ್ದ ದಸಿ, ಮೊನೆ, ಶೂಲ,**
**ಝಗಝಗಿಸುವ ಹೇರಿಟ್ಟಿ, ಮರುಳುಗೈಗ-**
**ಳುಗುಳುತಿರ್ದುವು ಕೆಂಗಿಡಿಗಳ**



ಭೂರಿಭೀಕರ ವರಾಹನ ತಲೆ, ಸಿಲುಕಿಟ್ಟು,
ಪೂರ್ಕೈಪ ವಿಷದ ಜೀರ್ಕೊಳವೆ,
ಮೂರಿಮೊಗದ ಡೆಂಕಣಿ, ಮುಸೆದಲಗುಗಳ್
ತೋರಿದುವತಿ ಭಯಂಕರವ !



ಕರಿಯ ಮದ್ದಿನ ಪೊಟ್ಟಣ, ಕಟ್ಟದಂಬಿನ
ಹೊರೆ, ಹುರಿಮುರಳಿನ ರಾಶಿ,
ಅರೆದ ಸಾಸಿವೆಗೊಡ, ಕಾದಂಬಲಿಯ ಬಹು
ಹರವಿಗಳೊಪ್ಪಿದ್ದುವಾಗ !



ಚೇಳುಬಾಣಗಳ ರಾಟಳ, ಉಪ್ಪಿನ ತಿತ್ತಿ,
ಸಾಲುವಿಡಿದ ಕವೆಗೋಲು,
ಬೇಳುವೆಗಳ ಭಸ್ಮದ ಕೊಪ್ಪರಿಗೆಯು
ಸಾಲೊಪ್ಪಿದುವು ದುರ್ಗದೊಳಗೆ !



ಎತ್ತುಗಲ್ಲುಗಳ್, ಏರುಗಲ್ಲು, ಕವಣೆಗಲ್ಲು,
ಬಿತ್ತರದರೆಗಲ್ಲುಗಳು,
ಮೊತ್ತದಸಿಯ ಕಲ್ಲು, ಕೊರಳಿಗೆ ಬೀರುವ
ಜೊತ್ತಿಗೆ ಮೆರೆದುವರ್ಥಿಯಲಿ !



ಸಾಲುವಿಡಿದ ಕೊತ್ತಳ ಕುಟ್ಟಿಮಗಳ
ಮೇಲೊಪ್ಪುವ ಶತಘ್ನಿಗಳು,
ಕಾಲನ ದಂಡದಂದದ ಕೈಗುದಿಗೆಯು
ಪೇಳಲಳವೆ ದುರ್ಗದೊಳಗೆ ?



ಚೋರಕಂಡಿಗಳಂಬುಕಂಡಿಗಳೊಳು ಗುರಿ-
ಯಿರಿಸಿ ಮೆರೆವ ಕೈಗೋವಿ ;

ನೀರ ತುಂಬುವ ದಿಡ್ಡಿ, ಒಳಸುರಂಗದ್ವಾರ
ತೋರಿತು ಕಣ್ಗೆ ಕೌತುಕವ!



ಅಗಳಾಳ್ತೇರಿ, ಕೊತ್ತಳ, ಹುಲಿಮುಖದೊಳು
ಜಗಳದಂಕೆಯು ಬಲ್ಲ ಭಟರ
ಮಿಗೆ ಬಲಿದಾಗ ದುರ್ಗದ ಸಂವರಣೆಯು
ಬಗೆಯು ಬಿನ್ನೈಸಿದ ನೃಪಗೆ."

ಕೋಟೆಯ ಸಂವರಣೆಯನ್ನು ಹೀಗೆ ಹೇಳಿದ ಗೋವಿಂದವೈದ್ಯನು ಮುಂದೆ ಕೋಟೆಯ ಕಾಪಿನಾಳುಗಳನ್ನು ಕಣ್ಣೆದುರು ತಂದು ನಿಲ್ಲಿಸುತ್ತಾನೆ. ಇಂದಿನ ಐತಿಹಾಸಿಕ ಕಥಾ-ನಾಟಕ-ಕಾದಂಬರೀ ಲೇಖಕರಿಗೆ, ಅವರ ವೇಷ-ಭೂಷಣಗಳ ಪರಿಚಯುವನ್ನೂ ಕೂಲಂಕಷವಾಗಿ ಮಾಡಿಕೊಟ್ಟಿರುತ್ತಾನೆ:



"ಹೊಡೆವ ಹೆಬ್ಬರೆ, ಜಾವಗಹಳೆ, ತಂಬಟೆಗಳ
ಕಡುರವ; ಒಳರುಗುದಿಗೆಯು-
ಜಡಿವ ದನಿಗಳಿಂದ ತಳವಾರರುಗಳ
ಪಡೆ ತಿರುಗುವುದು ದುರ್ಗದಲಿ!



ಕರದಲ್ಲಿ ಪಿಡಿದ ಗುರಾಣಿ-ಕೈಗತ್ತಿಯು
ಗರುವ ಮನ್ನೆಯರ ಸಂದಣೆಯು
ಪರಿಪಿಡಿಯಿಂದಲಾ ದುರ್ಗ ನೋಳ್ಪರ ಕಣ್ಗೆ
ಪಿರಿದು ಭೀತಿಯನು ಪುಟ್ಟಿಸಿತು!



ಕರಡಿಯ ಮೈಜೋಡು, ಕಾರ್ಪಾಸ ಕುಪ್ಪಸ,
ಬಿರುದಿನ ತೋಳ ಪಾವಡೆಯು
ದುರಗಲಿಗಳು ದುರ್ಗದಾಳ್ತೇರಿಯ ಮೇಲೆ
ಪರಿಶೋಭಿಸಿದರುಬ್ಬಿನಲಿ!

೪—೨೨೨೨.



**ಜವದಾಡೆ-ಜಲ್ಲಿಯು ಬಿಲ್ಲು-ಕೈಗತ್ತಿಯು**
**ಬವರಿಗರತಿ ಹರುಷದಲಿ**
**ತವಕದೊಳಾ ದುರ್ಗದ ಕೋಟೆಯ ಸುತ್ತ**
**ಸುವಿಲಾಸದೊಳೊಪ್ಪಿಹರು.**



**ಒರೆಗಳನುಗಿದ ಖಂಡೆಯ-ಕೈಸುರಗಿಯು,**
**ಸೊರಟಿಯು ಕತ್ತಿ-ಬಾಕುಗಳ**
**ಪರಿವಿಡಿಗಾರರು ಪುರದಾಳುವೇರಿಯೊಳ್**
**ಚರಿಸುತಿರ್ದರು ವೊತ್ತದಿಂದ !**



**ಜಾಡಿಯ ಹರಿಗೆ, ಸಿಂಗಾಡಿ, ಕಠಾಚೂರಿ,**
**ಸೀಡುವ ಬಾಳಗತ್ತಿಗಳ**
**ಪಾಡುಪಂಥದ ಸುಭಟರು ಕೋಟೆಯನಾಗ**
**ರೂಢಿಯೊಳಗೆ ಕಾದಿಹರು."**

*  *  *

ಇದುವರೆಗಿನ ಎಲ್ಲ ವಿವರಣೆಗಳಿಂದ, ಸುಮಾರು ಕ್ರಿ. ಶ. ೧೨ ನೆಯ ಶತಮಾನದ ಆರಂಭದಿಂದ ಕ್ರಿ. ಶ. ೧೭ನೆಯ ಶತಮಾನದ ವರೆಗಾದ ಕೋಟೆಗಾಳೆಗದ '**ಸಂವರಣೆ**'ಯ ಮುಂಬರಿತವನ್ನು ಕಂಡುಕೊಳ್ಳ ಬಹುದಾಗಿದೆ. **ಮಂಗರಸನ** ಕಾಲದ ವರೆಗೆ ಎಂದರೆ ಕ್ರಿ. ಶ. ೧೫ನೆಯ ಶತಮಾನಗಳು ಮುಗಿಯುವ ವರೆಗೆ '**ಪಟಲು**' ನಮ್ಮ ಜನಕ್ಕೆ ಗೊತ್ತಿರ ಲಿಲ್ಲ. ಅದರಂತೆ ೧೬-೧೭ ನೆಯ ಶತಮಾನದಲ್ಲಿ ಕಂಡು ಬರುವ '**ಫಿರಂಗಿ**' '**ಗುಂಡುಗೋವಿ**' '**ಮದ್ದಿನ ಪೊಟ್ಟಣ**' '**ಶತಘ್ನಿ**' '**ಉಪ್ಪಿನತಿತ್ತಿ**' ಇವು **ಮಂಗರಸ**ನಿಗೆ ಗೊತ್ತಿಲ್ಲ. ೧೨-೧೩ನೆಯ ಶತಮಾನಗಳಿಂದ ೧೫ನೆಯ ಶತಮಾನದ ವರೆಗೆ ನಡೆದುಕೊಂಡು ಬಂದ '**ಸಾರಮಾರಿ**' ಎಂಬ ಆಯುಧ-ವಿಶೇಷವು ೧೬ ನೆಯ ಶತಮಾನದಲ್ಲಿಯೆ ಕಣ್ಮರೆಯಾಗಿದೆ. **ಗೋವಿಂದ ವೈದ್ಯ**ನ ಕಾಲ (೧೬೪೮) ದಲ್ಲಂತೂ ಹೊಸ ಹೊಸ ಯುದ್ಧೋಪಕರಣಗಳು ಸಾಕಷ್ಟು ಬಂದಿವೆ. **ಮಂಗರಸನ** ಕಾಲದ ವರೆಗೆ ನಡೆದುಕೊಂಡು ಬಂದ

**'ಹಾವಿನ ಹೇಳಿಗೆ'**ಯ ಪರಂಪರೆಯು ೧೬ ನೆಯ ಶತಮಾನದಲ್ಲಿ ನಷ್ಟ ವಾದಂತಿದೆ. ಬಹುಶಃ ಮದ್ದು-ಗುಂಡುಗಳ ಉಪಯೋಗವು ವಿಶೇಷ ಪ್ರಚಾರದಲ್ಲಿ ಬಂದುದರಿಂದಲೆ, ಹಾವುಗಳನ್ನು ಹಿಡಿದು ಹಿಡಿದು ಪೆಟ್ಟಿಗೆಗಳಲ್ಲಿ ಹಾಕಿ ಇಡುವ ಕಷ್ಟಸಾಧ್ಯವೂ, ಅಪಾಯಕಾರಕವೂ ಆದ ಪದ್ಧತಿ ನಿಂತು ಹೋಗಿರಬೇಕು.

## ೫. ಪಾಳೆಯಸಂರಕ್ಷಕ ಸಾಧನೆಗಳು

ಕೋಟೆಯ ಮುತ್ತಿಗೆಗೆಂದು ಎತ್ತಿ ಬಂದವರು, ಅಲ್ಲಲ್ಲಿ ಬೀಡು ಬಿಡು ವಾಗಲೂ ಮುತ್ತಿಗೆ ಹಾಕಿದಾಗಲೂ, ತಮಗೆ ಇನ್ನಾರಿಂದಲೂ ತೊಂದರೆ ಯುಂಟಾಗದಂತೆ, ತಮ್ಮ ಪಾಳೆಯದ ಸುತ್ತಲೂ **'ತಳಿ' 'ಮುಳುವೇಲಿ'** ಗಳನ್ನು ಬಲಿಯುತ್ತಿದ್ದರೆಂಬ ಮಾತು—ವಿಶೇಷವಾಗಿ—ವರ್ಣಕಕಾವ್ಯಗಳಲ್ಲಿ ಕಂಡುಬರುವುದು. ಮುತ್ತಿಗೆಯ ಕಾಲದ ಯುದ್ಧದ ಹುರುಪಿನಲ್ಲಿ, ಅಗಳಿ ನಿಂದ ಸುರಕ್ಷಿತತೆ ಬೇಕೆಂದು ಅಗಳಿನ ಸುತ್ತಲು ಕೂಡ ಈ **'ತಳಿ' 'ಮುಳು ವೇಲಿ'** ಗಳನ್ನು ಬಲಿಯುತ್ತಿದ್ದರಂತೆ. **'ಪಡಿಗೊಂಟೆ'**ಯ ವಿಚಾರವು ವಸ್ತುಕ-ವರ್ಣಕಗಳೆರಡರಲ್ಲಿಯೂ ಬರುವುದು. **'ಪಡಿಗೋಂಟೆ'** ಎಂದರೆ **'ಪ್ರತಿದುರ್ಗ'** ಎಂದರೆ ರಚನೆ ಮಾಡಿದ ಕೃತ್ರಿಮ ದುರ್ಗ. ಇವು ಯುದ್ಧ-ಕಾಲದಲ್ಲಿ ಮೇಲೆ ಏರಿ ನಿಂತು ಯುದ್ಧಮಾಡಲಿಕ್ಕೆ ಅನುಕೂಲವಾಗಬೇಕೆಂದೆ ಇರುತ್ತಿದ್ದುವಲ್ಲದೆ, ಸೈನ್ಯದ ಸಂರಕ್ಷಣೆಗಾಗಿಯೂ ಇವುಗಳ ಉಪಯೋಗ ವಾಗುತ್ತಿರಬಹುದು. ಈ **'ಪಡಿಗೋಂಟೆ'** ಯೆ ಮುಂದೆ ೧೬ ನೆಯ ಶತಮಾನ ದಲ್ಲಿ **'ಮೇರುವೆ'** ಎಂಬ ಹೆಸರನ್ನು ಪಡೆದಿದೆ. ಇನ್ನೊಂದು : ವರ್ಣಕ ಕಾವ್ಯಗಳಲ್ಲಿ **'ನಡೆಗೋಟೆ'**ಯ ಹೆಸರು ಬಂದಿರುವುದು. ಈ **'ನಡೆ-ಗೋಟೆ'** ಗಳು **'ತಳಿ'**, **'ಮುಳುವೇಲಿ'** ಗಳಂತೆ ಪಾಳೆಯದ ಸಂರಕ್ಷಣೆ ಗಾಗಿಯೂ ಇದ್ದಿರಬಹುದು. **'ನಡೆಗೋಟೆ' 'ಪಡಿಗೋಟೆ'** ಗಳ ಸುತ್ತಲೂ **'ಪಡಿಯಗಳ'** ನ್ನೂ ರಚಿಸುತ್ತಿದ್ದರು.

*  *  *

**ಕುಮಾರವ್ಯಾಸ ಕವಿಯು** (೧೪೩೦) ತನ್ನ **'ಮಹಾಭಾರತ'**ದ **'ಭೀಷ್ಮಪರ್ವ'** ದಲ್ಲಿ ಪಾಳೆಯ ಸಂರಕ್ಷಕ ಸಾಧನಗಳ ವಿಷಯಕ್ಕೆ ಹೀಗೆ ಹೇಳಿರುವನು :

" ಗುಡಿಗಳನು ಬೀಸಿದರು; ಲೋಹದ
ತಡಿಕೆಗಳನಳವಡಿಸಿ ಬೀಡಿನ
ನಡುವೆ ರಚಿಸಿದರವನಿಪಾಲನ ರಾಜಮಂದಿರವ.

(ಸಂಧಿ ೧ ; ಪದ್ಯ ೫೧)

ಅಳವಿ ನಾಲ್ವತ್ತೆಂಟರೊಳಗಿ-
ಟ್ಟಳಿಸಿ ಬಿಟ್ಟುದು ಸೇನೆ; ಕೋಟಾ-
ವಳಯ, ಅಗಳಲ್ಲಲ್ಲಿ ; ತಳಿ, ಮುಳುವೇಲಿ, ಪಡಿಯಗಳು;
ಕೆಲದೊಳೊಪ್ಪುವ ಭೋಗವತಿ ನಿ-
ರ್ಮಲ ಗಭೀರೋದಕದ ನದಿ; ಕುರು-
ಬಲದ ಪಾಳೆಯದಂಗವಿದು ಕೇಳೈ ಮಹಿಪಾಲ | "

(ಸಂಧಿ ೧ ಪದ್ಯ ೫೨)

*   *   *

ವಿರೂಪಾಕ್ಷಪಂಡಿತನು (೧೫೮೫) ' ಚೆನ್ನಬಸವ ಪುರಾಣ ' ದಲ್ಲಿ ಹೀಗೆ ಬಣ್ಣಿಸಿರುವನು :

" ಲಗ್ಗೆವರೆ ಮೊಳಗಿದುವು ; ಕೂಗಿದುವು ತಮತಮಗೆ
ಬೊಗ್ಗುಹೆಗ್ಗಾಳೆಗಳ್; ಬಿಡದೆ ' ನಡೆಗೋಂಟೆ ' ಗಳ
ಮೊಗ್ಗರಂ ನೂಂಕಿದುವು; ಪುರದ ಪೊರಬಳಸಿನೊಳ್
' ಪಡಿಯಟ್ಟಣೆ ' ಗಳೆದ್ದುವು ;
ಒಗ್ಗಿನಿಂ ' ಬದ್ದರ ' ದ ಬಂಡಿವಿಂಡೈದಿದುವು ;
ವೆಗ್ಗಳಿನ ಬಿರುದಿನಾಳ್ ' ತಳಿ 'ಯನಗಳಿನ ಸರಿಸ-
ಕಗ್ಗಳಿಕೆಯಿಂ ಸೇರಿಸುತ್ತಿರ್ದರೆಲೆ ಸಿದ್ಧರಾಮ ಕೇಳಚ್ಚರಿಯನು.

( ಸಂಧಿ ೮೨ ಪದ್ಯ ೨೮

*   *   *

ಗೋವಿಂದ ವೈದ್ಯನ (೧೬೪೮) ' ಕಂಠೀರವ ನರಸರಾಜ ವಿಜಯ ' ದಲ್ಲಂತೂ ಈ ' ತಳಿ ' ' ಮುಳುವೇಲಿ ' ' ಮೇರುವೆ ' ಗಳ ಸಂದರ್ಭ ಆರೇಳು ಸಲ ಬಂದಿರುವುದು :

" ತಳಿ, ಮುಳುವೇಲಿ, ಮೇರುವೆ ಫಿರಂಗಿಗಳಿಗಾ-
ಗಳವಟ್ಟ ತವಗ, ಸುರಂಗ,
ಬಳಸಿಯೊಪ್ಪಿದುವಾ ಕೋಟೆಯುಗಳ ಹೊರ-
ವಳಯದೊಳತಿ ಚೋದ್ಯವಾಗಿ! (ಸಂಧಿ ೧೨, ಪದ್ಯ ೧೬)

ಒತ್ತರಿಸಿಯೆ ತಳಿ-ಮೇರುವೆಗಳನಿಟ್ಟು,
ಮುತ್ತಿಗೆಯಿಕ್ಕಿದ ಬಲವ
ಮತ್ತೆ ಕಂಠೀರವೇಶ್ವರ ಕಂಡು ದಳವಾಯ
ಹತ್ತಿರ ಕರೆದು ಇಂತೆಂದ : (ಸಂಧಿ ೧೩, ಪದ್ಯ ೪೮)

ಪಿರಿದಾದ ತಳಿ-ಮೇರುವೆಗಳನಡಸಿಯೆ
ಕಿರಿದಾಗಿಸಿದ ದುರ್ಗವನು! (ಸಂಧಿ ೧೬ ; ಪದ್ಯ ೩೪)

ಮುಳುವೇಲಿ, ಮೇರುವೆ, ತಳಿ-ಸುರಂಗಗಳಿಂದೆ
ಬಳಸಿ ಬಂಧಿಸಲಾ ಪುರವ" (ಸಂಧಿ ೧೬ ; ಪದ್ಯ ೬೩)

'**ಮೇರುವೆ**' '**ತಳಿ**' ಗಳ ವಾಸ್ತವರೂಪವನ್ನು ಕೆಳಗಿನ ಪದ್ಯಗಳಲ್ಲಿ ನಿಚ್ಚಳವಾಗಿ ಕಂಡುಕೊಳ್ಳಬಹುದು :

" ಗಗನ ಮಾರ್ಗವ ತುಡುಕುವ 'ಮೇರುವೆ' ಗಳ
ಮಿಗೆ ಚೌದೆಸೆಯುಲಿ ಬಲಿದು (ಸಂಧಿ ೧೬ ಪದ್ಯ ೭೫)

ಬಳಿಕಾಗ ಪುರದ ಚೌದೆಸೆಯುಲಿ ತಳಿಗಳ-
ನಳವಡಿಸಿಯೆ ಮನ್ನೆಯರು (ಸಂಧಿ ೧೮ ಪದ್ಯ ೧೦)

ಇರುಹೆ ನುಸುಳಲಳವಲ್ಲದ ಮುಳುವೇಲಿ,
ಗರುಡನ ಮಾರ್ಗವನಡರ್ವ
ಪಿರಿದಪ್ಪ ಮೇರುವೆಗಳು ಲೆಕ್ಕವಿಲ್ಲದೆ
ಪುರವ ಬಂಧಿಸಿದುವೇವೇಳ್ವೆ!" (ಸಂಧಿ ೧೮ ; ಪದ್ಯ ೬೮)

ಸೈನ್ಯದಲ್ಲಿಯ ಮುಖ್ಯಮುಖ್ಯ ಅಧಿಕಾರಿಗಳಿಗೆಲ್ಲ—ಒಬ್ಬೊಬ್ಬರಿಗೆ ಒಂದೊಂದರಂತೆ—ಬೇರೆಬೇರೆ 'ಮೇರುವೆ' ಗಳಿರುತ್ತಿದ್ದುವು. ಈ ವಿಷಯ '**ಕಂಠೀರವ ನರಸರಾಜ ವಿಜಯ**' ದಿಂದ ಮಾತ್ರ ಗೊತ್ತಾಗುವುದು :

" ಒಡನೆ ಈಶಾನ್ಯಭಾಗದೊಳಂಬರವನ್ನು
ತುಡುಕುತ ಸರ್ವಸನ್ನಹದೆ
ಕಡುಗಲಿ ದಳವಾಯ ಮೇರುವೆಯೊಪ್ಪಿತು
ಪಡಿಯಾಗಿ ಕೈಲಾಸಗಿರಿಗೆ!

ಬಳಿಕ ಉತ್ತರ ದೆಸೆಯಲಿ ಲಿಂಗರಾಜೇಂದ್ರ
ತಳುವದಂದೊಲಿದೆತ್ತಿಸಿದ
ಬಲವಾಂತ ಮೇರುವೆ ಗೋವರ್ಧನಾದ್ರಿಯೊಲ್
ಸಲೆ ರಂಜಿಸಿತು ಉನ್ನತದೆ!

ವರ ಚೆನ್ನರಾಯ ಪಟ್ಟಣದ ದೊಡ್ಡೇಂದ್ರನು
ತುರುಗೆರೆಯಾಳ್ವ ಹಂಪೇಂದ್ರ
ಪಿರಿದೆತ್ತಿಸಿದ ಬಲುಮೇರುವೆ ಮೆರೆದುದು
ಸುರುಚಿರ ನೀಲಾದ್ರಿಯಂತೆ!"

(ಸಂಧಿ ೧೮; ಪದ್ಯ ೬೯-೭೦-೭೧)

ಫಿರಂಗಿಗಳೊ ತುಬಾಕಿಗಳೊ ನಮ್ಮಲ್ಲಿ ಪ್ರಚಾರಕ್ಕೆ ಬಂದಮೇಲೆ ಅವುಗಳನ್ನು ಹೇಗೆ ಹೇಗೆ ಇರಿಸುತ್ತಿದ್ದರು. . ಆ ವಿಷಯ ತಿಳಿಯಬೇಕಾದರೂ ನಮಗೆ '**ಕಂಠೀರವ ನರಸರಾಜ ವಿಜಯ**' ವನ್ನು ಓದಬೇಕಾಗುವುದು :

" ಬಿಡದೆ ಬಳಸಿದ ಕಾವಲ ಹೂಡೆಯ ಮೇ-
ಲಿಡುವ ಫಿರಂಗಿಯ ತವಗ,
ಒಡನೆ ಚೌದೆಸೆಯೊಳೊಪ್ಪುವ ಸುರಂಗದ್ವಾರ
ಕಡುಭಯಂಕರವ ಬೀರಿದುವು. (ಸಂಧಿ ೧೮, ಪದ್ಯ ೭೪)

ಇಲ್ಲಿ '**ಫಿರಂಗಿಯ ತವಗ**' ಎಂದರೆ ತೋಫುಗಳನ್ನು ಇರಿಸುವುದಕ್ಕೆ ರಚಿಸಿದ ಎತ್ತರವಾದ ಪೀಠ ಎಂದರ್ಥ. '**ಸುರಂಗದ್ವಾರ**' ಎಂದರೆ ನೆಲದೊಳಗಿಂದ ರಚಿಸಿದ-ಕೋಟೆಯೊಳಕ್ಕೆ ಹೋಗುವ-ದಾರಿಗಳು. ಈ ದಾರಿಗಳಲ್ಲಿ ಮದ್ದನ್ನು ತುಂಬಿ ಬೆಂಕಿಕೊಟ್ಟು ಕೋಟೆಯ ಗೋಡೆಗಳನ್ನು ಸಡಲಿಸುತ್ತಲೂ ಇದ್ದರು.

**" ಮೋರುವೆಗಳ ಮೇಲೆ ಒಡನೆ ತುಪಾಕಿಯು**
**ಸೇರಿಸುತೆದೆಯೊಳಗಾಗ**
**ಊರೊಳು ಸಂಚರಿಪರನಿಟ್ಟು ಕೆಡಹಲು**
**ಬೀರದಿಂ ಕಾಪಿನ ಭಟರು "**

ಕೋಟೆಗಾಳೆಗದ ಪೂರ್ವಸಿದ್ಧತೆಯೆಲ್ಲವೂ ಆದಂತಾಯಿತು. ಇನ್ನು ಕಾಳೆಗಕ್ಕೇ ಆರಂಭವಾಗಬೇಕಲ್ಲವೆ? ಸರಿ! ನಾವೂ ಈಗ ಬೇರೆ ಬೇರೆ ಶತಮಾನಗಳಲ್ಲಿ ನಡೆದ ಕೋಟೆಗಾಳೆಗಗಳನ್ನೆ ಒಂದೊಂದಾಗಿ ನೋಡುತ್ತ ಹೋಗೋಣ. ಕನ್ನಡಿಗರಲ್ಲಿ 'ಅಹಿಂಸಾಪ್ರಿಯ' ರಾದ ಜೈನರೂ ಕೋಟೆ-ಗಾಳೆಗವಾಡಿದುದುಂಟು; ಯುದ್ಧಜೀವಿಗಳಾದ ವೈದಿಕ ಕ್ಷತ್ರಿಯರೂ ಕೋಟೆಗಾಳೆಗವಾಡಿದುದುಂಟು.

## ೬. ಕೋಟೆಗಾಳೆಗ

### ( ಕ್ರಿ. ಶ. ೧೨ನೆಯ ಶತಮಾನ )

**ಅಗ್ಗಳಕವಿ** ( ೧೧೮೯ ) ಯ '**ಚಂದ್ರಪ್ರಭ ಪುರಾಣ**' ದಲ್ಲಿಯ ಕಾವ್ಯನಾಯಕನು, ದೇಶಸಂಚಾರ ಮಾಡುತ್ತ ಮಾಡುತ್ತ '**ವಿಪುಳನಗರ**' ದ ಬಳಿ ಬರುವನು; ಆಗ ಅವನು ಶತ್ರುಗಳ ಭೀತಿಯಿಂದ ನೆಲೆ-ನಿವಾಸ ಗಳನ್ನು ಬಿಟ್ಟು ಓಡಿಹೋಗುತ್ತಿರುವ ಜನರನ್ನು ನೋಡುವನು. ಅವರ ಮುಖದಿಂದ ವಿಪುಳನಗರದ **ಜಯವರ್ಮ** ರಾಜನ ವಿಚಾರವೂ, ಆತನ ಮಗಳು **ಶಶಿಪ್ರಭೆಯನ್ನು** ಕಾಮಿಸಿ **ಮಹೇಂದ್ರ**ನೆಂಬ ದೊರೆ ದಂಡೆತ್ತಿ ಬಂದು ರಾಜಧಾನಿಗೆ ಮುತ್ತಿಗೆ ಹಾಕಿದ ವಿಚಾರವೂ ಗೊತ್ತಾಗುವುದು. ಅನೀತಿವಂತನಾದ ಮಹೇಂದ್ರನಿಂದ ಜಯವರ್ಮನನ್ನು ಉಳುಹಬೇಕೆಂಬ ಆತುರದಿಂದ, ಕಾವ್ಯನಾಯಕನು ವಿಪುಳಾವತಿಗೆ ಬಂದು, ಅಲ್ಲಿ ತುಮುಲವಾಗಿ ನಡೆದ ಕೋಟೆಗಾಳೆಗವನ್ನು ನೋಡಿದನು. ಅದು ಅಗ್ಗಳನು ಕಂಡ ಕನ್ನಡಿ ಗರ ಕೋಟೆಗಾಳೆಗವೆ! ಅದು ಹೇಗಿದ್ದಿತೆಂದರೆ :—

**" ಬಿಡುವುರಿಯೆಣ್ಣೆ, ಸೂಸುವ ಕವಲ್ಗಿಡಿ, ಬೀಸುವ ಪಾಶವೋರೆಯಿಂ-**

**ಕಡೆಸಿರಗೆಯ್ವ ನೂಂಕುದಳಿಯಿಕ್ಕುವ ಬಲ್ಲಿಸಿ, ಭೀತಿಯಂ ಮನ–**
**ಕ್ಕೊಡರಿಸಿ ಲಗ್ಗೆಯೊಟ್ಟಿಳದೊಳಿಟ್ಟಳವಾದುದು ಕೋಂಟೆಗಾಳಿಗಂ ||**

**(ಆಶ್ವಾಸ ೫. ಪದ್ಯ ೧೦೫)**

(ಸುರಿಯುತ್ತಿರುವ ಉರಿಯೆಣ್ಣೆಗಳಿಂದಲೂ, ಸೂಸುತ್ತಿರುವ ಬೆಂಕಿಯ ಕಿಡಿಗಳಿಂದಲೂ, ಬೀಸುವ ಪಾಶಗಳಿಂದಲೂ, ಅಡ್ಡವಾಗಿ ನಿಂತು ಒಗೆಯುವ ಬಂಡೆಗಲ್ಲುಗಳಿಂದಲೂ, ಹೊಡೆಯುವ ಕತ್ತರಿಯಂತಹ ಆಯುಧದಿಂದಲೂ, ಚುಚ್ಚುವ ಭಲ್ಲೆಯುಗಳಿಂದಲೂ, ತಲೆಯನ್ನೊಡೆದು ಬಿಡುವ (!) ' ನೂಂಕು ದಳಿ ' ಗಳಿಂದಲೂ, ಚುಚ್ಚುವ ಚೂಪಾದ ಗೂಟಗಳಿಂದಲೂ ಕೋಟೆಗಾಳಿಗವು ಭಯುವನ್ನುಂಟುಮಾಡುತ್ತ ರಭಸದಿಂದ ನಡೆದಿದ್ದಿತು.)

**" ಇಡಿಸುವ ಡೆಂಕಣಕ್ಕೆ, ನೆಲೆವಾಳಿಗೆ ಕೊತ್ತಳದಂಬುಗಂಡಿಯಿಂ–**
**ದುಡುಗದೆ ಪಾಯ್ವ ಕೂರ್ಗಣೆಗೆ ಬದ್ದರವೊಡ್ಡಿಪ ಕೋಂಟೆಗಾವಗಂ |**
**ಕೆಡಪುವ ಗೆಗ್ಗೆ ವಂಕದರದಿಂ ಪೊಱಮಟ್ಟಱಿವಾಳ್ಗಳಂಕೆಯೊಳ್**
**ಗಡಣಿಸಿ ಕಾದುತಿರ್ದುದು ಮಹೇಂದ್ರಪತಾಕಿನಿ ಮುತ್ತಿ ಸುತ್ತಲುಂ ||**

**(ಆಶ್ವಾಸ ೫ ಪದ್ಯ ೧೦೬)**

( ಮೇಲಿನಿಂದ ಹೊಡೆಯಿಸುತ್ತಿರುವ ' ಡೆಂಕಣ ' ಗಳಿಗೂ, ನೆಲೆವಾಳಿಗೆ- ಕೊತ್ತಳಗಳ ಅಂಬುಗಂಡಿಯಿಂದ ಎಡೆಬಿಡದೆ ಹಾಯ್ದು ಬರುತ್ತಿರುವ ಕೂರ್ಗಣೆಗಳಿಗೂ– ಅವುಗಳ ಏಟುತಗಲದಂತೆ—'**ಬದ್ದರ**' ಒಡ್ಡಿಸುತ್ತಲೂ; ಅಗಳನ್ನು ದಾಂಟಿ ಹೋಗುವುದಕ್ಕಾಗಿ ಕೆಡಪಿದ ' **ಗೆಗ್ಗೆ** ' ಯ ಮೂಲಕ ವಾಗಿಯೂ ವಕ್ರದ್ವಾರಗಳ ಮೂಲಕವಾಗಿಯೂ ಒಂದೆ ಸವನೆ ಕೋಟೆಗೆ ನುಗ್ಗಿ, ಅಲ್ಲಿ ಸುತ್ತಲೂ ಗುಂಪುಗೂಡಿ ಮುತ್ತಿ ಯುದ್ಧಮಾಡುತ್ತಲೂ ಆ ಮಹೇಂದ್ರರಾಜನ ಸೇನೆಯು ಇದ್ದಿತು.)

## ( ಕ್ರಿ. ಶ. ೧೩ನೆಯ ಶತಮಾನ )

**ಜನ್ನ**ಕವಿ ( ೧೨೩೦–೬೦ ) ಯ ' **ಅನಂತನಾಥ ಪುರಾಣ** ' ದಲ್ಲಿ **ವಸುಷೇಣ** ರಾಜನು **ಚಂಡಶಾಸನ**ನ ರಾಜಧಾನಿಯಾದ **ಮಾಣಿಕ್ಯನಗರಿ**ಗೆ ಮುತ್ತಿಗೆ ಹಾಕಿದ ಸಂಗತಿಯಿದೆ. **ಚಂಡಶಾಸನ**ನು ಮಿತ್ರಭಾವದಿಂದ **ವಸುಷೇಣ**ನಲ್ಲಿಗೆ ಬಂದಾಗ, ಆತನ ಹೆಂಡತಿ **ಸುನಂದೆ**ಯ ಸೌಂದರ್ಯಕ್ಕೆ

ಮನಸೋತು, ನಂಬಿಸಿ ಮೋಸಮಾಡಿ, ಅವಳನ್ನು ತನ್ನ ರಾಜಧಾನಿಗೆ ತೆಗೆದುಕೊಂಡು ಹೋಗಿರುವನು. ಆಗ ದಂಡೆತ್ತಿ ಬಂದ ವಸುಷೇಣನು, ಕೋಟೆಯ ಗುಟ್ಟು-ಗುರಿಗಳನ್ನೆಲ್ಲ ನಿರೀಕ್ಷಿಸಿ ಅರಿತುಕೊಂಡು ಕೋಟೆ-ಗಾಳೆಗಕ್ಕೆ ತೊಡಗಿದನು. ಹೇಗೆಂದರೆ:—

"ನೋಣೆಯಲ್ ನುಂಗಲಿಳಾತಳಂ ಮುರಿದು ಮೂರಿಟ್ಟಂತೆ ದುರ್ಗಕ್ಕೆ ನಿ-ಚ್ಚಣಿ, ಸಾಚುರ್ಗಂದೊಲೆ, ವೀರಸೇತು, ನಡೆಸಾರಂ, ಬದ್ದರಂ, ಗೆಗ್ಗೆ, ಡೆಂ-ಕಣಿ, ಗುಮ್ಮಂ, ಪಡಿಗೋಂಟೆಯೆಂಬ ಬಹುಕೋಟಾಯಂತ್ರ ಸಾಮಗ್ರಿ ತಿಂ-ತಿಣಿಗೊಂಡಾಂತಿರೆ, ಲಗ್ಗೆಗಾರ್ದು ವಸುಷೇಣಂ ಸಾರ್ದುಸೂಟ್ಯೈಸಿದಂ. ||

(ಆಶ್ವಾಸ ೧೧, ಪದ್ಯ ೮೩)

(ಕೋಟೆಯನ್ನು ನುಂಗಿ ನೊಣೆಯುವುದಕ್ಕೆಂದು ಭೂಮಿಯು ಬಿರಿದು ಬಾಯನ್ನು ಬಿಟ್ಟಂತೆ ನಿಚ್ಚಣಿಕೆ, ಏರಿಹೋಗುವುದಕ್ಕಾಗಿ ಕೋಟೆಗೆ ಆನಿಸಿ ನಿಲ್ಲಿಸಿದ ತೊಲೆ, ಅಗಳನ್ನು ದಾಟುವುದಕ್ಕಾಗಿ ಮಾಡಿದ 'ವೀರಸೇತು' 'ನಡೆಸಾರ' ಗಳು, ಮೇಲಿನವರ ಆಘಾತಗಳನ್ನು ತಪ್ಪಿಸಿಕೊಳ್ಳುವುದಕ್ಕೆಂದಿದ್ದ 'ಬದ್ದರ' 'ಗೆಗ್ಗೆ' ಗಳು, ಡೆಂಕಣಿ, ಗುಮ್ಮ (ಬಡಿಮಣೆ), ಪಡಿ-ಗೋಟೆ ಇವೇ ಮೊದಲಾದ ಕೋಟಾಯಂತ್ರ ಸಾಮಗ್ರಿ ಸಮೂಹವು, ಕೋಟೆಗೆ ಸುತ್ತುವರಿದು ಹೊಂದಿ ನಿಂತಿದ್ದುವು. ಆಗ ವಸುಷೇಣನು ಕೋಟೆಗಾಳೆಗವನ್ನಾರಂಭಿಸಿದನು.)

"ಅಂತು ಸೂಟ್ಯೈಸುವ ನಿಸ್ಸಾಳ-ಭೇರೀ-ಢಕ್ಕಾ-ಮೃದಂಗ ಕೋಳಾಹಳಂ ಎತ್ತಿ ಪೊತ್ತುತಂದಿಟ್ಟುವುದುದೆನಿಸಿ; ಗುಡವಿಡಂಬಿತ ಪಿಪೀಲಿಕಾಜಾಲದಂತೆ ಮುತ್ತಿ ಮುಸುರಿ; ಪತ್ತೆ ಪಳಂಚೆ ಕೋಟೆಯ ಕೊತ್ತಳದ ಅಳ್ವೇರಿಯ ಜೆಟ್ಟಿಗರೊಳ್ ಶಸ್ತ್ರಾಶಸ್ತ್ರಿಯುಂ, ಖಡ್ಗಾ-ಖಡ್ಗಿಯುಂ, ದಂಡಾದಂಡಿಯುಂ, ಕಚಾಕಚಿಯುಂ ಆಗಿ ತಳ್ತಿಱಿವ ವಸುಷೇಣನೃಪನ ವೀರಭಟಕೋಟಿಯ ಲಗ್ಗೆಯಗ್ಗಳಿಕೆಯೊಳಗೆಟ ಲಸಿಯುಡುಗೆಯಂತಿರೆ ಅಟ್ಟಳೆಯೊಡೆದು, ಬಣಜಿಗನ ಬಳಕೆಯಂತೆ ಕೊತ್ತಳಂ ಖರಿದಾಗಿ, ಬಟಲ್ದ ಬಡಗೊಂದೆಯಂತಿರೆ ಅಳ್ವೇರಿಯ ಟಿದು, ಕಡುಗೊಯ್ಯಲಾದ ಕೆಯ್ಯಂತೆ ತೆನೆಮುರಿದು, ಬೀಸರವಾದ ರಾಶಿಯಂತೆ ಪುಲಿವೊಗಂಗೆಟ್ಟು, ಕಟ್ಟುಗೊಂಡು ತಟ್ಟುತ್ತಿರುವ ಕಟ್ಟಾಯದ ಕಡುಗಲಿಗಳೆಲ್ಲಂ ಅಣ್ಣಣ್ಮೆನಿಂದು, ಮುಮ್ಮಳಿಯಾಗೆ 'ಪೋಯ್ತು ಪೋಯ್ತು

**ದುರ್ಗಂ, ಇನ್ನೇಂ!" ಎಂದು ಒಳಗೆ ಎಲ್ಲಂ ಎಯ್ದೆ ಸರಕುಗಟ್ಟಿ, ಪೊರಗೆ ಎಲ್ಲಂ ಎಯ್ದೆ ಗುಡಿಗಟ್ಟಿ, ಸೀೞಿಯುಂ ಬೀಸಿ ಬೊಬ್ಬಿಱಿದಾೞಿ..'**

ಈ ವಚನದಲ್ಲಿಯ ವಸುಷೇಣನ ಭಟರ ಯುದ್ಧದ ಚಿತ್ರ ಮನಂಗೊಳಿಸು ವಂತಹದಾಗಿದೆ. ನಡುವೆ ಉಪಯೋಗಿಸಿದ ಉಪಮೆಗಳು ಕೇವಲ ಕವಿ-ಸಾಮಯಿಕ ಉಪಮೆಗಳಾಗಿರದೆ, ವಾಸ್ತವವಾದ ಜಾನಪದ ಉಪಮೆಗಳಾಗಿವೆ. ವಸುಷೇಣನ ಬಲದ ಏರಿಕೆಯನ್ನು ಕಂಡ ಚಂಡಶಾಸನನು ಯುದ್ಧಸನ್ನದ್ಧನಾಗಿ ಬಂದು,

**"....ಬೀೞ್ವ ಕಂಡಿಗಳಂ ಪೆಣದ ಪೇರಟ್ಟೆಯೊಟ್ಟಲಿಂ ಮುಚ್ಚಿ, ಮತ್ತಪತ್ತಿಭಿತ್ತಿಗರ ಮೊತ್ತಂ ಬಿಡೆ ಉರಿವೆಣ್ಣೆಯೊಳಂ ಮುರಿದುರುಳಿಯುಂ, ಉರಿವ ಮಣಲೊಳ್ ಸಿಡಿಮಿಡಿಗೊಂಡು ಸುರುಳಿಯುಂ, ಕಣೆಯ ಕಲ್ಲೊರಲೆ ಡೆಂಕಣಿಯಾಗೆಯುಂ, ಸಾರಸಾರಿಯ ಪೊಯ್ಲೊಳ್ ಓರಣಿಕೆಗೆಡೆಯುಂ, ತೆತ್ತಿಸಿದ ಗಾಳದೊಳ್ ಎತ್ತಿದ ಪಾಪೆಯಂತೆ ಎಳಲೆಯುಂ, ಕುತ್ತಿದ ಕೊಂತದೊಳ್ ಕೋಲ ಸುಂಟಗೆಯಂತೆ ಸಾಲಿಟ್ಟು ಬೀಳೆಯುಂ, ಮೇಲ್ವಾದಿ ನಿಂದು ಪೋಗದೆ ಗೞಿಗಟ್ಟೆನಿಂದ ರಿಪುವೀರ-ದುರ್ಗಂ, ಆಳ್ವೇರಿಯ ಮೇಲೆ ಅಲಗನೂರಿ ತೂಗಾಡುತಿರ್ದ ಪುಣ್ಣುಉಣ್ಣಂಗಳಿಂ, ಪೂತ ಮುತ್ತದ ಪೂವುನೊರಡಿಯಂತಿರ್ದ ಅಟ್ಟಳೆಗಳೊಳಗೆ ನಿಂದ ಅಟ್ಟೆಗಳಿಂ, ಒಗೆವ ನೆತ್ತರ ಸುಟ್ಟುೞಿಗಳಿಂ, ಬೇಸಗೆ ಯುರಿ ಪತ್ತಿದ ಬೆಟ್ಟದಂತಿರ್ದುದು. ಕೊತ್ತಳದೊಳ್ ಒತ್ತಿನ ತೆನೆಯ ಸಂದಿಗಳೊಳ್ ಸಂದಣಿಸಿ ನೇಲ್ವ ವೀರಭಟಕುಣಪಂಗಳಿಂ, ಪೆಣೆದ ಪೆರ್ಮುಟಿಯುಂ ಕೞಿವ ವಿಳಯ ಜಳಧರದ ಒಡ್ಡಿನಂತೆ ದೊಡ್ಡಿಗೊಂಡು ಇರ್ದುದು."**

ಇಲ್ಲಿಯು ಬಣ್ಣನೆ ಅಂದಿನ ಕನ್ನಡಿಗರ ಕೋಟೆಗಾಳೆಗವನ್ನೆ ಕಣ್ಣೆದುರು ತಂದು ನಿಲ್ಲಿಸುವುದು. ಇಲ್ಲಿಯ ಕೆಲವೊಂದು ಉಪಮೆಗಳು ರುದ್ರಹಾಸ್ಯ-ಮಯುವಾಗಿವೆ. ಗಾಳಕ್ಕೆ ಸಿಕ್ಕಿಸಿ ಮೇಲಕ್ಕೆ ಎತ್ತಿದ ಸೈನಿಕರು 'ಎತ್ತಿದ ಪಾಪೆ (ಗೊಂಬೆ)' ಯಂತೆ ನೇತಾಡುತ್ತಿದ್ದರಂತೆ. ಭಲ್ಲೆಯದಿಂದ ಚುಚ್ಚಿ ಸಾಲಾಗಿ ಬಿದ್ದವರು, ಮಾಂಸದ ಅಂಗಡಿಯಲ್ಲಿ ಕೋಲಿಗೆ ಕಟ್ಟಿ ನೇತು ಹಾಕಿದ 'ಸುಂಟಗೆ' ಗಳಂತೆ ಕಂಡರಂತೆ. ದುರ್ಗದ ಆಳ್ವೇರಿಯ ಮೇಲೆ ನಿಂತ ಭಟರ ಮೈಯ ಗಾಯಗಳ ಕೆಂಪು ಬಣ್ಣದ ಮೂಲಕ ಅದು, ಹೂವಾದ

ಮುತ್ತಲು ಗಿಡಗಳುಳ್ಳ ಮೊರಡಿಯಂತೆ ಕಾಣುತ್ತಿದ್ದಿತಂತೆ. ಅಟ್ಟಳೆಗಳಲ್ಲಿ ನಿಂತವರ ಅಟ್ಟಿಗಳಿಂದ ಥಿಲ್ಲೆಂದು ನೆಗೆಯುವ 'ನೆತ್ತರ ಸುಟ್ಟುರೆ' ಗಳಿಂದ ಅವು ಬೇಸಗೆಯ ಕಾಳ್ಗಿಚ್ಚು ಹತ್ತಿದ ಬೆಟ್ಟದಂತೆ ಕಾಣಿಸಿದುವಂತೆ. ಜನ್ನನ ಈ ಕೋಟೆಗಾಳೆಗದ ಬಣ್ಣನೆ ಕೂಡ ಆತನ ಕಾಲದ ಕೋಟೆಗಾಳೆಗದ ಪ್ರಾತಿನಿಧ್ಯವನ್ನು ಮಾಡುವಂತಿದೆ.

*　　　*　　　*

**ಎರಡನೆಯ ಗುಣವರ್ಮ** (೧೨೩೦) ನ '**ಪುಷ್ಪದಂತ ಪುರಾಣ**' ದಲ್ಲಿಯೂ ಸುಮಾರಾಗಿ ಇದೇ ಜಾತಿಯ ವರ್ಣನೆಯಿದೆ- ಯಾದರೂ, ಅದರಲ್ಲಿ 'ಅನಂತನಾಥ ಪುರಾಣ' ದಲ್ಲಿ ಹೇಳಿದುದಕ್ಕಿಂತ ಹೆಚ್ಚಾಗಿ 'ಕಕ್ಕಡೆ' ಎಂಬ ಆಯುಧದ ಹೆಸರೂ (ಪಾರ್ದಿಸುವ ಕಕ್ಕಡೆ), ಕವಣೆ- ಗಲ್ಲಿನ ಹೆಸರೂ (ಇಕ್ಕುವ ಒಳ್ಗವಣೆ) ಬಂದಿರುವುವು. ಗುಣವರ್ಮನೂ ೧೩ನೆಯ ಶತಮಾನದವನಾದುದರಿಂದ, ಆತನ ವರ್ಣನೆಯನ್ನು ವಿಶದವಾಗಿ ಕೊಡಬೇಕಾದ ಕಾರಣವಿಲ್ಲ. (**ಬೇಕಾದವರು ಅವನ ಆ ಕಾವ್ಯದಲ್ಲಿಯ ೭ನೆಯ ಆಶ್ವಾಸದ ೭೪, ೭೫, ೭೬ ನೆಯ ಪದ್ಯಗಳನ್ನು ಓದಿ ನೋಡಬೇಕು.**)

## (ಕ್ರಿ. ಶ. ೧೫ನೆಯ ಶತಮಾನ)

ಮೂರನೆಯ **ಮಂಗರಸ** (೧೫೦೮) ನು ಹದಿನಾರನೆಯ ಶತಮಾನದ ತೀರ ಪ್ರಾರಂಭವಾದವನಾದುದರಿಂದ, ಹದಿನೈದನೆಯ ಶತಮಾನಕ್ಕೂ ಅವನನ್ನು ಪ್ರತಿನಿಧಿಯೆಂದು ಭಾವಿಸಿದರೆ ತಪ್ಪೆನಿಸದು. ಅವನ '**ಸಮ್ಯಕ್ತ್ವ- ಕೌಮುದಿ**' ಎಂಬ ಗ್ರಂಥದ ೮ನೆಯ ಸಂಧಿಯಲ್ಲಿ—ವರ್ಣಕ ಕವಿಗಳ ರೀತಿಯನ್ನನುಸರಿಸಿ—ಕೋಟೆಗಾಳೆಗದ ವಿಶದವಾದ ವರ್ಣನೆಯಿದೆ:

'**ವಾರಣಾಸಿ**' ಎಂಬುದೊಂದು ರಾಜಧಾನಿ. ಅಲ್ಲಿಯ ಅರಸು '**ಜಿತಶತ್ರು**' ಎಂಬ ಹೆಸರಿನವನು. ಆತನಿಗೆ ಸುಂದರಿಯಾದ ಮಗಳೊಬ್ಬ ಳಿದ್ದಳು. **ಚಕ್ರಕೋಟಾಪುರ**ದ ದೊರೆಯಾದ **ಭಗದತ್ತ**ನೆಂಬವನು ಅವಳನ್ನು ಮದುವೆಗಾಗಿ ಕೇಳಲು ಜಿತಶತ್ರು ಸಮ್ಮತಿಸಲಿಲ್ಲ. ಸರಿ! ಕೂಡಲೆ ಭಗದತ್ತನು ದಂಡೆತ್ತಿಬಂದು, ವಾರಣಾಸಿ ದುರ್ಗವನ್ನು ಮುತ್ತಿ ಕೋಟೆಗಾಳೆಗಕ್ಕೆ ಅಣಿಯಾದನು. ಹೇಗೆಂದರೆ:—

**" ಹೂಳಿಯಗಳಂ ಹುಲ್ಲಹಾಕಿ, ಡೆಂಕಣಿಗಳಂ**
**ಮೇಳಯಿಸಿ, ನಡೆಚೆಪ್ಪರವನು ನಡೆಯಿಸಿ, ಕೋಂಟೆ-**
**ಯಾಳು ತಲೆಯೆತ್ತಲೊಡನಾ ಬದ್ದರದ ಮರೆಯೊಳಿದ್ದ ಬಿಲ್ಲಾಳ್ಗಳೆಲ್ಲ ||**
**ಬೀಳಲಿಸೆಡೆಗ್ಗೆಯಂ ನೂಂಕಿ, ಸೇತುವನೊಟ್ಟಿ,**
**ಆಳೋಚನೆಯ ಮಾಡದಿಕ್ಕಿ ನಿಚ್ಚಣಿಕೆಯಂ,**
**ದೂಳಿಗೋಂಟೆಯ ಕೊಳ್ಳಬೇಕೆಂಬ ಪಡಿಯರರ ಕಲಕಲಂ ಕರಮೊಪ್ಪಿತು.**

**( ಸಂಧಿ ೮, ಪದ್ಯ ೨೯ )**

* " ಬಳಿಕ ಎಂತೆಂತಹ ದೊರೆಗಳಿಗೂ ಅಸಾಧ್ಯವಾಗಿರುವ ಕೋಟೆ-ಯನ್ನು ನೋಡಿ, ರೋಷಾವೇಶಗೊಂಡವರಾಗಿ ಆ ವೀರರೆಲ್ಲರೂ ತಂತಮ್ಮ 'ಕರಿ-ತುರಗ-ರಥ ಸಂತತಿ' ಯಿಂದ ಇಳಿದು, ಸೀಸಕ (ಶಿರಸ್ತ್ರಾಣ) ಜೋಡುಸವಗ (ಚಿಲಖತ್ತು) ಗಳನ್ನು ತೊಟ್ಟು-ಕೊಂಡು, ಕೂಡಲೆ ಅಗಳಿನ ಸಮೀಪದ ದಿಣ್ಣೆಗೆ ಬಂದು, 'ಬದ್ದರ' ದ ಮರೆಯಲ್ಲಿ ನೂಲೇಣಿಯನ್ನು ಹಿಡಿದುಕೊಂಡು ನಿಂತು 'ಹತ್ತಿರಿ ಹತ್ತಿರಿ' ಎಂದು ಒಬ್ಬರನ್ನೊಬ್ಬರು ಹುರುಪಿಗೆಬ್ಬಿಸುತ್ತಿದ್ದರು."

* ಯಾವ ಬಗೆಯಲ್ಲಿಯೂ ಹಿಂದೆಮುಂದೆ ನೋಡದೆ ಕೋಟೆಗೆ ನಿಚ್ಚಣಿಕೆಗಳನ್ನು ಹಚ್ಚಿಯೂ, ಒಬ್ಬರ ತಲೆಯ ಮೇಲೆ ಒಬ್ಬರು ಏರಿ ನಿಂತೂ—ಮೇಲಿಂದ ಬರುವ 'ಕಲ್ಲು-ಬಿಲ್ಲು-ದಸಿಗಳ ಅದೊಂದು ಖುರಪಾಟಕೆ' ಸ್ವಲ್ಪವೂ ಬೆದರದೆಯೂ—ಮುಂದೆ ಬಿದ್ದ ಹೆಣಗಳನ್ನು ತುಳಿಯುತ್ತಲೆ ಕೋಟೆಯನ್ನು ಹತ್ತಿ ಮೇಲಕ್ಕೆಬಂದ ಆ ವೀರರ ಪರಿವಾರವು— ಸ್ವರ್ಗಕ್ಕೆ ದಾಳಿಯಿಡಲು ಹೊರಟಂತೆ— ತೆನೆಗಳ ಮೇಲೆ ಕಾಲಿಟ್ಟು ನಿಂತಿತು."

* " ಹುರುಪಿನಿಂದ ಕೋಟೆಯ ಮೇಲೆ ಹತ್ತಿದ ವೀರರು 'ಕುದುರೆಗಾಲನ್ನು' ಇಡುವುದೇ ತಡ; ಅಡಗಿಕೊಂಡು ಕುಳಿತಿದ್ದ ಕಾಪಿನವರು ಕಂಡು ಒಳಗಿನಿಂದ ಬಂದು, ಅವರನ್ನು ಕೆಳಕ್ಕೆ ಬೀಳು-ವಂತೆ ನೂಕಿ ಬಿಡುವರು. ಆಗ ಮೇಲೆ ಹತ್ತಿ ಬಂದಿದ್ದವರು ಚಳಕ-ದಿಂದ ಕಾಲುಗಳನ್ನು ತೆನೆಗಳಿಗೆ ಬಿಗಿಯಾಗಿ ತೊಡಕಿಸಿ, ತಲೆಕೆಳಗಾಗಿ

---

* **ಮೂಲ ಪದ್ಯದ ಗದ್ಯಾನುವಾದವಿದು.**

ಜೋಲಾಡುತ್ತಿರುವರು. ಅಂತಹದರಲ್ಲಿಯೂ ಅವರು, ಕೆಳಗಡೆಯಿಂದ ಹತ್ತಿಬರುವವರಿಗೆ 'ಬೆದರಬೇಡಿ; ಅಂಜದೆ ಹತ್ತಿ' ಎಂದು ಕೈ-ಗೊಟ್ಟು ಹತ್ತಿಸಿಕೊಳ್ಳುತ್ತಿರುವರು."

ಅಬ್ಬಾ! ಎಂತಹ ಸಾಹಸಸಂದರ್ಭದ ಸುಂದರ ಚಿತ್ರವಿದು!

* ಆಗ ಮೇಲಿನ ಜನರು "ಹುರಿದ ಮಳಲಂ ಹುಯ್ದು, ಹುಲ್ಲ ಕಿಚ್ಚಂ ಹಿಡಿದು, ಹರಿವ ಹಾವಂ ಹಾಯ್ಕಿ, ಕಾಸಿದಂಬಲಿಯ ಎರೆದು, ಪರಿಪರಿಯ ಡೆಂಕಣಿಗಳಿಂದ ತಲೆವೊರೆಯಿಂದ ಕೈಯಿಂದ ಕವಣೆಯಿಂದ ಕಲ್ಲಂ ಸುರುಹಿ, ಪಂದಿದಲೆ-ಅಂಬು-ಪೆಟಲು-ದಸಿಮುರ-ಸಾರವಾರಿ-ಯಿಂದ, ಹತ್ತುವ ಆಳ್ಗಳಂ ಧರೆಗೆ ಉರುಳ್ವ ತೆರದಿ—ಆ ಪರಿಖೆ (ಅಗಳು) ಪೂಳು (ತುಂಬು) ವಂತೆ—ಕೊಂದಿಕ್ಕಿದರು."

* "ನಡೆಚೆಪ್ಪರಗಳನ್ನು ನಡೆಯಿಸುತ್ತ, 'ಲಗ್ಗೆವರೆ' ಗಳನ್ನು ಜಡಿದು ಹೊಡೆಯಿಸುತ್ತಿರುವ ರಭಸಕ್ಕೂ, 'ಬದ್ದರಗಳೊಳಗೆ ಅಡಗಿ' ಗುದ್ದಲಿ ಹಾರೆಗಳಿಂದ ಎಡೆಬಿಡದೆ ಅಗೆಯುವ ರಭಸಕ್ಕೂ, ಪೆಟಲು-ಗುಂಡುಗಳನ್ನು ಹಾರಿಸುವ ನಿಬ್ಬರಕ್ಕೂ ಬೀಳುತ್ತಿರುವ ಕೋಟೆ-ಯನ್ನು ಕಂಡು, ಒಳಗಿನವರು ಕೂಡಲೆ ಅಲ್ಲಲ್ಲಿ 'ತಳಿಯಂ ನೆಡುತ್ತ' ಹೊರಗಿನವರು ಒಳಕ್ಕೆ ಬಾರದಂತೆ ನೋಡಿಕೊಳ್ಳುತ್ತಿದ್ದರು."

**" ತಲೆಸಳಿತು ಕೈಮುರೆದರಂತೆ ಎಸುವಾಳುಗಳ್**
**ನಿಲೆ, ಕಂಡು 'ಕೋಟೆ ಹೋಯ್ತೇಳೇಳಿ' ಎನುತಿರದೆ**
**ಕುಲಿಲಿಯೆಂದಾರಿ ಬೊಬ್ಬಿರಿದು ಹುಲಿವೊಗದೊಳಗೆ ಹೊಗಲೊಡನೆ**
**ಸೂತ್ರವಿಡಿದು ;**
**ಬಲಿಯ ಬಲಿದೆತ್ತಲ್ ಆಗಸಕೇಳುವಾ ಭಟಾ-**
**ವಳಿಯುಮಂ ಕಾಣುತಾ ಕದನಮಂ ನೋಳ್ಪ ಅಮರ-**
**ಲಲನೆಯರ್ 'ಇವಂ ನನಗೆ ಇವಂ ನನಗೆ' ಎನುತ್ತ ಪಸುಗೆಯ ಮಾಡಿ**
**ಕೊಳುತಿರ್ದ್ದರು.**

* "ಪ್ರಹರಿಸುತ್ತಿರುವ 'ಡೆಂಕಣಿಗೈ' ಗಳನ್ನು ಮುರಿಯುವ, ಪೂಡೆಯ (ಕೊತ್ತಳ) ಗಳನ್ನು ಹುಡಿಹುಡಿಯಾಗಿ ಮಾಡುವ, 'ಹುಲಿ-

---

*** ಮೂಲ ಪದ್ಯದ ಗದ್ಯಾನುವಾದವಿದು.**

ಮೊಗದ ಅಂಕವಮುಂ ( ಹೆಬ್ಬಾಗಿಲ ಕದಗಳನ್ನು ) ' ನುಗುನುಗ್ಗಾಗು- ವಂತೆ ಹೊಡೆಯುತ್ತಿರುವ, ಊರೊಳಗೆ ಒಬ್ಬರೂ ಅಡ್ಡಹಾಯದಂತೆ ಎಡೆಬಿಡದೆ ಧಡಧಡಿಸುವ 'ಲೋಹಯಂತ್ರ' ಗಳ ಗರ್ಜನೆಯು— ಕಡೆಗಾಲದ ಸಿಡಿಲ ದಂಡು ಬಂದು ಹೊರಗಡೆ ಪಾಳೆಯವನ್ನು ಬಿಟ್ಟಿರುವುದೇನೋ—ಎಂಬ ಭ್ರಮೆಯನ್ನುಂಟುಮಾಡುತ್ತ, ಘೂರ್ಣಿ ಸುತ್ತಿದ್ದಿತು."

ಮುಂದೆ ಮಂಗರಸನು ರಾಹುಕೇತುಗಳ ಉಪಮೆಯನ್ನು ಕೊಟ್ಟು "ಗಡಿಯಿಲ್ಲದೆ ಅಲ್ಲಲ್ಲಿ ಹಾಯಿಸುವ '**ಡೆಗ್ಗೆವರಂ**' ಅತಿ ಭೀಕರಂ ಬಡೆ ದುವು" ಎಂದು ಹೇಳಿದ್ದಾನೆ. ಈ 'ಡೆಗ್ಗೆವರಂ' ಎಂಬ ರಾಹು-ಕೇತುಗಳು "ಪೊಳಲೆಂಬ ಭಾಸ್ಕರನನ್ನು ತುಡುಕಲೆಂದೆನುತ ಮಾನುಸಕದಿಂ ಬಹು ರೂಪುವಡೆದು ನಡೆಚೆಪ್ಪರಗಳೆಂಬ ಬಿಲದಿಂ ಪೊರಮಟ್ಟು" ಬಂದು, ಕೋಟೆಗೆ ತಾಗುತ್ತಿದ್ದುವೆಂತೆ. ಇದರ ಪರಿಣಾಮವಾಗಿ :

**"ಸತ್ತವರ್ಗ್ಗ‍ಡಿಯಿಲ್ಲ ; ಸಾವವರ್ಗ್ಗ‍ಡಿಯಿಲ್ಲ ;**
**ಹೊತ್ತಗಾಯದೊಳುರುಳಿ ಬೀಳುವರ್ಗ್ಗ‍ಡಿಯಿಲ್ಲ ;**
**ತತ್ತರಂದರಿಯಿಸಿಕೊಳುತ್ತ ಹೊಯ್ದಾಡುವರ್ಗ್ಗ‍ಡಿಯಿಲ್ಲ; ತೆನೆಯ ಹಿಡಿದು-**
**ಹತ್ತುವರ್ಗ್ಗ‍ಡಿಯಿಲ್ಲ ; ನಿಚ್ಚಣಿಗೆಯಂ ಹಾಕಿ**
**ಹತ್ತಿಸಾರುವರಿಗಡಿಯಿಲ್ಲ ; ಆದರಿಂ ಕೋಂಟೆ-**
**ಮುತ್ತಿಗೆಯ ಸುತ್ತುಪೊತ್ತಂಬರವನೇನಂತುಟಂತುಟೆಂದೆನಲುಬಹುದೆ ?"**

ಮಂಗರಸನ ಕಾಲವೆಂದರೆ ವಿಜಯನಗರ ಸಾಮ್ರಾಜ್ಯದ ಉಚ್ಛ್ರಾಯ ಕಾಲ ; ಊರೂರಿಗೆ ಕೋಟೆಕೊತ್ತಳಗಳ ಬಲ್ಪಿನ ಸಂರಕ್ಷಣೆಯಿರುವ ಕಾಲ; ಕೋಟೆಗಾಳೆಗಗಳು ನಿತ್ಯವೂ ಕಣ್ಣಿಗೆ ಬೀಳುವ ಉತ್ಸಾಹದ ಕಾಲ. ಅಲ್ಲದೆ "ಈತನು ಚೆಂಗಾಳ್ವರಾಜರ ಮಂತ್ರಿಗಳ ವಂಶದಲ್ಲಿ ಜನಿಯಿಸಿದವನು. ಈತನ ಪಿತಾಮಹನು ಮಾಧವರಾಯ ; ತಂದೆ ವಿಜಯರಾಯ. ಇವರು ಹೊಯ್ಸಳ ದೇಶದ ಹೊಸವೃತ್ತಿಯ ನಾಡಿನ ( ಕಲ್ಲಹಳ್ಳಿ ) ಧಾತುಪುರ- ದರಸರು."ಎಂದಮೇಲೆ ಮಂಗರಸನಿಗೆ ಕನ್ನಡಿಗರ ಕೋಟೆಗಾಳೆಗದ ಪರಿಚಯ ವಿಶೇಷವಾಗಿ ಇದ್ದಿರಬೇಕು. ಇದ್ದಿರಬೇಕೆಂಬ ಸಂದೇಹದ ಮಾತಾದರೂ ಏತಕ್ಕೆ ? ಇದ್ದೇ ಇದ್ದಿತೆಂಬುದಕ್ಕೆ ಆತನ ಕೋಟೆಗಾಳೆಗದ ವರ್ಣನೆಯ ವಾಸ್ತವತೆಯೆ ಪ್ರತ್ಯಕ್ಷಪ್ರಮಾಣವಾಗಿದೆ.

## ( ಕ್ರಿ. ಶ. ೧೬ನೆಯ ಶತಮಾನ )

**ವಿರೂಪಾಕ್ಷ ಪಂಡಿತ** ( ೧೫೮೫ ) ನ ‘ **ಚೆನ್ನಬಸವ ಪುರಾಣ** ’ ದಲ್ಲಿ ( ೪೨ನೆಯ ಸಂಧಿ ) ಕೋಟೆಗಾಳೆಗ ಯಾವ ಸಂದರ್ಭದಲ್ಲಿ ಬಂದಿದೆಯೆಂಬು-ದನ್ನೂ, ಅದರ ವೈಶಿಷ್ಟ್ಯವೇನೆಂಬುದನ್ನೂ ಹಿಂದೆಯೆ ಹೇಳಲಾಗಿದೆ. ತ್ರಿಪುರದ ಕೋಟೆಯ ಲಗ್ಗೆಗೆ ಬಂದ ದೇವತೆಗಳ ಸೈನ್ಯದ ಚಲನವಲನವನ್ನು ರಾಕ್ಷಸರು ನೋಡಿದರು. ನೋಡಿ ‘ **ಆಖಂಡಲಾದ್ಯರ್ ಕೋಂಟೆಗಾಳೆಗವನ್ ಈಗ ಕೈಕೊಂಡರ್ಕೈ! ತಪ್ಪುವುದು?** ’ ಆದರೆ ‘ **ಎಚ್ಚರಿಕೆ!** ’ ಎಂದು ಎಲ್ಲರಿಗೂ ಕೂಗಿ ಕೂಗಿ ಹೇಳುತ್ತಿರಲು ಇತ್ತ ‘ **ಖಂಡೆಯದ ಪೊಳಪಿನ ಭಟಾಳಿ ಭೋ ಎನುತು ಆಲಿಕೊಂಡು ( ಆರ್ದು ), ಪುರದ ಸರಿಸದೊಳ್ ತಲೆದೋರ್ದುದು.** ’

* “ ಆಗ ಕೆಲರ್ ತಲೆವರಿಗೆಯಿಂದೆ ಅಗಳ ಸರಿಸದೊಳ್ ತಲೆ ದೋರಿದರ್. ಮಾವುತರ್ ಬಿಗಿದ ರೆಂಚೆಗಳ ಮರೆಯೊಳಗಡಗಿ, ಬೇಗ-ದಿಂದೆ ಪುಲಿಮುಖಕೆ ಸೂಂಕಿದರ್. ಆಗ ಆ ಸುರಭಟರ್ ‘ ಎಲೆಲೆ ಸುಮನಸರ್ ಅಗಳದಿಡ್ಡೆಯಂ ಸೇರಿದರ್ ’ ‘ ಚಲಿಸದಿರಿ ’ ಎಂದು ಬೊಬ್ಬಿರಿದು, ಅಸಿ–ಮುಸುಂಡಿ–ಮುದ್ಗರ–ಗದಾವಳಿಯಿಂದ ಸುರ-ಭಟರನು ಹೂಣಲಿಡುತಿರ್ದರ್.”

ರಾಕ್ಷಸಭಟರು ಇಷ್ಟೊಂದು ತೊಂದರೆಕೊಡುತ್ತಲಿದ್ದರೂ ದೇವ-ಸೈನಿಕರು :

* “ ತೊಲಗದೆ ಕೆಲರ್ ಇಡುಕಿನೊಳ್ ಅಂಡಿಸಿದರ್ ( ಅಡಗಿ ಕುಳಿತರು ). ಕೆಲರ್ ಆಗಳೆ ತಳಿಗಳೊಳ್ ಪೊಕ್ಕು ಮೈಗರೆದರ್. ಕೆಲರ್ ಆಕ್ಷಣಂ ಬಲಿದ ಬದ್ದರಗಳಂ ಮರೆಗೊಂಡರ್. ಕೆಲರ್ ನಡೆ-ಗೋಂಟೆಯ ಬಳಿಯೊಳಿರ್ದರ್. ಕೆಲಕೆಲರ್ ಲಾಗಿನಿಂ ಲಳಿಯೆದ್ದು ( ಚಪಲತನದಿಂದ ) ಸುಳಿದಾಡಿದರ್. ಕೆಲಬರು ಬೀಳ್ವ ಕವಣೆಗಲ್ಗಳ-ಬೀರುಗುಂಡುಗಳ ಘಾತಿಯಿಂ ಬಸವಳಿದು ಬೀಳುತಿರ್ದರ್.

ಇತ್ತ ರಾಕ್ಷಸರು

* ದಿಡ್ಡಿಗಳೊಳ್ ಗುಪ್ತದಿಂ ಐತಂದು, ಅಗಳದಿಡ್ಡೆ ( ದಿಣ್ಣೆ ) ಯೊಳ್ ಸಾಲ್ಗೊಂಡು, ತರತರದ ಪೆರ್ದಳಿಯ ದಡ್ಡಿಗಳಂ ಉರೆಮುರಿದು,

* ಮೂಲಪದ್ಯದ ಗದ್ಯಾನುವಾದವಿದು.

ಮರೆಯೊಳಗೆ ಮೈಗರೆದ ವೀರರಂ ಸಂಹರಿಸುತೆ, ಬಡ್ಡು-ಬಣಗುಗಳಂ ಓಡಿಸಿ, ತಳಿಗಳಂ ಮುರಿದುಕೊಂಡು ಮುಗ್ಗುವ ಅಮರರಂ ಕಡ್ಡಿಗೆಣಿಸದೆ, ಅಗಳೊಳ್ ಅಡ್ಡಲಾದ ಅಮರರಂ ತರಿವುತುಂ (ಮತ್ತೆ) ಆ ಕ್ಷಣದೊಳು ಪುರವಂ ಒಳಪೊಗುತಿರ್ದರು. "

ಇನ್ನೊಂದು ಕಡೆಗೆ ದೇವತೆಗಳ ಸೈನ್ಯದಲ್ಲಿ

* "ಕಲ್ಲು, ಕೊರಡು, ಸದೆ-ಸಟ್ಟು, ಪುಲ್ಪೊರೆಗಳಾಂತವರ್ ಪುರದ ಅಗಳಂ ನಿಲ್ಕಿದರ್. ಏಣಿಯಂ ಪೊತ್ತವರ ಸಾಲು ಕದಲಿದುದು. ಪೊರಗಣ ಅಟ್ಟಣೆಯ ಮೇಲಿನವರು, ಆ ತ್ರಿಪುರದವರನು ನಾಲ್ಕು ದಿಕ್ಕಿನ ಸುರಂಗಗಳಿಂದ ಇಟ್ಟರು. ಪುರಂದರನ ಸೇನೆಯೊಳ್ ಮೇಲುಕೀಳೆಂಬ ಭೇದಮುಂ ಅರಿಯೆಂ; ಅವರ ಭರವಸಕೆ ನಿಲ್ಕಡೆಯ ಕಾಣೆಂ; (ಎಂತಲೆ) ಎಲ್ಲಾ ಭಟರ್ ಭರದೊಳು ಮುಸುಕಿದರ್."

ಮುಂದೆ ದೇವತೆಗಳು ಪುರದ ಅಗಳನ್ನು ಹೂಳಿದ ಬಗೆಯನ್ನು ಕವಿ ಸೊಗಸಾಗಿ ಹೇಳಿದ್ದಾನೆ. ಹೇಗೆಂದರೆ :—

*" ಇರದೆ ಪದಹತಿಯ ಧೂಳಿಯಿಂದೆ ಪಿರಿದಹ ಸಪ್ತಶರಧಿಯಂ ಪೂಳ್ವರ್ಗೆ, ಪುರದ ಅಗಳನು ಪೂಳ್ವುದು ಏಸರಿದು ? ನಿಮಿಷಾರ್ಧದೊಳ್ ಮಡಿದ ಪೆಣಗಳನು ಎಳೆದು ತುಂಬಿದರ್. ಪುಲ್ಪೊರೆಗಳಂ ಕೊರಡುಗಳಂ ಒಟ್ಟಿದರ್. ಕಲ್, ಗುಂಡು, ಮಣ್ಗಳಂ ತುಂಬಿ ನೆಲಸರಿ ಮಾಡಿದರ್. ಖಳರ ಪೊಯಿಲ್ಗಳಂ ಸರಕುಮಾಡದೆ ಆ ದಿವಿಜಭಟರು, ತ್ರಿಪುರಮಂ ಸುತ್ತಲೂ ಮುಗ್ಗಿ ಕವಿದರ್."

ಆಗ ಕೋಟೆಯ ಮೇಲಣವರು ಸುಮ್ಮಗಿದ್ದರೇನು ? ಸುಮ್ಮಗಿದ್ದೇನು ಮಾಡುವರು ! ಅವರೂ ಪ್ರತೀಕಾರೋಪಾಯಗಳನ್ನು ಮಾಡಲು ತೊಡಗಿದರು; ಅದರ ಪರಿಣಾಮವಾಗಿ :—

* " ಡೆಂಕಣಿಗಳು ಅಲ್ಲಲ್ಲಿ ಆಡಿದುವು. ಮರುಳ ಕೈ ನೀಡಿದುವು. ಕವಣೆಗಲ್ ಸೂಸಿದುವು. ಕಾಯ್ದೆಣ್ಣೆಗೂಡಿ ಮಳಲು, ಅರಗುಗಳೂ; ಸಾಸಿವೆಗದಡು, ಸುಣ್ಣ, ಕಲ್ಲು, ಅಂಬಲಿಗಳೂ ಸುರಿದುವು. ಪೆಟಲ್ಗಳು

+ ಮೂಲಪದ್ಯದ ಗದ್ಯಾನುವಾದವಿದು.

ಹೂಡಿದುವು. ಇಕ್ಕುವ ದಸಿಗಳ್ ಓಲಾಡಿದುವು. ಪೇರೆತ್ತು-ಗುಂಡುಗಳ್ ಭರದೊಳ್ ಒಕ್ಕಾಡಿದುವು. ಆಗ (ಈ ಏಟುಗಳಿಗಾಗಿ) ಕವಿಕವಿದು ಬೀಳ್ವ ದಿವಿಜಾಳಿ ಭಟರ ಮೋರೆಗಳ್ ಬಾಡಿದುವು."

ರಾಕ್ಷಸಭಟರು ಇನ್ನೇನು ಮಾಡಿದರೆಂಬುದು ಗೊತ್ತೇ?

* "ದಿವಿಜರಂ ನಿಚ್ಚಣಿಕೆಯಂ ಪತ್ತೆ ಬೇಗ ಪುಲ್‌ದೊಂದೆಗಳ ಕಿಚ್ಚಿನಿಂ ಸೀದರ್; ಎಡಬಲದೊಳ್ ಇಟ್ಟಣಿಪರಂ ಕಲ್ಗುಂಡು ಮಳೆ-ಗಳಿಂ ಮುಚ್ಚಿದರ್ ; ಪಂದಿದಲೆಗಳೊಳಿಟ್ಟು ಬೊಬ್ಬಿರಿದರ್; ಕತ್ತಿ-ಕೈದುಗಳಿಂದೆ ಕೊಚ್ಚಿದರ್, ಪೆಣಗಳಂ ಭೂತ-ವೇತಾಳ ಸಂಕುಲಕೆ ಪಚ್ಚಿದರ್; ಒಂದೆ ನಿಮಿಷದೊಳ್ ದಿವಿಜರಂ ಹುಚ್ಚು ಮಾಡಿದರ್.''

ದೇವತೆಗಳ ಸೈನ್ಯದ ಅವಸ್ಥೆಯನ್ನಾಗ ಅವರನ್ನು 'ಅಸುರ' ರನ್ನಾಗಿ ಮಾಡಿದ ದೇವರೇ ಕೇಳಬೇಕು :—

* "ಕಾಸಿದ ಎಣ್ಣೆಯು ಪೊಯಿಲ್ಗೆ ಪಟುಭಟರ ಮೈದೊಗಲು ಕೀಸಿದುದು; ಮಳಲ ಮಳೆಯಿಂದ ಪುಣ್ಣಾದುವು; (ಎಡೆಬಿಡದೆ) ಸೂಸುತಿಹ ಸುಣ್ಣಗಳ ಸೋಂಕಿನಿಂ ಕಣ್ಣರಳಿ, ಬಾಯಿಬೆಂದು, (ಅವರು) ಬಸವಳಿದರು. ಸಾಸಿವೆಯು ಬಿಸಿಗದಡು ಬೀಳೆ, ಜಠರಾಗ್ನಿ ಯೊಳ್ ಕೇಸುರಿಗಳು ಉಬ್ಬಿದುವು. ಕಲ್ಗುಂಡುಗಳ ಹತಿಯೊಳ್ ಓಸರಿಪ ದಿವಿಜರಂ ಕಂಡು, ಸುರಪನು ಅತಿ ಕೋಪದಿಂದ ಮೂದಲಿಸಿದಂ."

ದೇವೇಂದ್ರನು ಮನಸ್ಸಿಗೆ ಹತ್ತುವಂತೆ ಅಣಕಿಸಿ ಮಾತುಗಳನ್ನಾಡಲು ದೇವಸೈನಿಕರಿಗೆ ಮತ್ತೆ '**ಚಿತ್ತದಾವೇಶಂ ಉಬ್ಬರಿಸಿದುದು.**' ಮತ್ತೆ ತಮ್ಮಂದ ತಾವೆ ಕೊತ್ತಳ-ಹುಲಿಮುಖ-ದಿಡ್ಡಿಗಳ ಬಳಿಯಲ್ಲಿ ಗುಂಪು-ಗೂಡಿದರು. ಸಾಲ ನಿಚ್ಚಣಿಕೆಗಳ ಮೇಲೆ ಹತ್ತಲು ತೊಡಗಿದರು. ಆಗ ಶರಧಿನಿರ್ಘೋಷದಂತೆ ಇತ್ತಂಡದಲ್ಲಿಯೂ ವಾದ್ಯಗಳು ಮೊರೆಯುತ್ತಿದ್ದುವು. ದೇವತೆಗಳ ಈ ಮರುಮುತ್ತಿಗೆಯನ್ನು ಕಂಡು ರಾಕ್ಷಸರೂ ಮತ್ತೆ ತಡೆಗಟ್ಟುವ ಹವಣಿಕೆಗೆ ತೊಡಗಿದರು. ಹೇಗೆಂದರೆ :—

---

* ಮೂಲಪದ್ಯದ ಗದ್ಯಾನುವಾದವಿದು.

* "ಕೆಂಡಮಂ ಸೂಸಿದರು; ಬಲ್‌ಗವಣೆಕಲ್ಗಳಂ ಬೀಸಿದರು; ಬಿಸಿಯ ಮೇಣಮಂ ಎರೆದು ತನುವನು ಕಾಸಿದರು; ಬೀರ್ವಗ್ಗಮಂ ಹಾಕಿ ಸೇದಿದರು. ಮುರುಳ್‌ಗೈಗಳಿಂ ತೂಂತರು (ಗಾಯಗೊಳಿಸಿದರು); ಕಾರ್ಮೊಗೆಯ ಮುರ್ಬಿನಿಂ ಮೂಸಿದರು. ಈ ಬಲ್ಗೊಲೆಗೆ ಸುರರು ಹೇಸಿದರು. ಕೆಲರು ಅಗಳದಿಡ್ಡಿಯೊಳ್ ಕೈಗಳಂ ಪಾಸಿದರು. ಕೆಲರು ಉರುಬಿ ಕಾದುತ್ತಿರ್ದರು."

ಆಗ ದೇವತೆಗಳ ಸೈನಿಕರೂ ಪಟುಭಟರೂ—ಮೇಲುಗಡೆಯಿಂದ ಕೆಂಡಗಳು ಬೀಳಲು—ಹಲುಬಿ ಹಮ್ಮೈಸಿದರು. ಕೇಸುರಿಯಿಂದ ಮುಖವೆಲ್ಲ ಸುಟ್ಟುಹೋಗಿ ನೆಲಕ್ಕೆ ಬಿದ್ದರು. ತೊಲೆಗಳು ಉರುಳುರುಳಿ ಬೀಳಲು ಕೈ-ಕಾಲುಗಳು ಮುರಿದು ಕೆಡೆದರು. ಪಂದಿದಲೆಯು ತಾಕಲು ಜರ್ಜರಿತತನುಗಳಾದರು. ದೊಡ್ಡ ದೊಡ್ಡ ದಸಿಗಳು ಮೈಯೊಳಗೆ ನಾಂಟಲು ಕಳವಳಿಸಿದರು. ಹೀಗೆ ಪರಿಪರಿಯ ಸಮರಸಾಧನಗಳಿಂದ, ಒಬ್ಬರ ಹಿಂದೊಬ್ಬರಂತೆ ಕ್ರಮಕ್ರಮವಾಗಿ ದೇವಸೈನಿಕರು ಬೀಳುತ್ತಿದ್ದರು.

**"ಸುರಗಿಯಿಂದಿರಿದು, ಶೂಲದಿ ತಿವಿದು, ಖಡ್ಗದಿಂ-**
**ದಿರದೆ ಕತ್ತರಿಸಿ, ಕೊಡಲಿಗಳಿಂದೆ ಕಡಿದು, ಮು-**
**ದ್ಗರದಿಂದ ಮೋದಿ, ಮುಸಲದೊಳಿಟ್ಟು, ಗದೆಗಳಿಂದಪ್ಪಳಿಸಿ,**
**ಸಬಳದಿಂದೆ**
**ಶಿರವನಿರಿದೆತ್ತಿ, ಚಕ್ರದಿನರಿದು, ಮಿಕ್ಕ ಪರಿ-**
**ಕರದಿಂದೆ ದೈತ್ಯನಾಯಕರಾರ್ದು ಕೊಲುತಿರಲ್,**
**ಪರಿಕಿಸಲ್ ದೀಪಮಂ ಸೋಂಕುವ ಪತಂಗಮಾದರ್ ದಿವಿಜ-**
**ಸುಭಟರಂದು"**

ಆಗ ಅಷ್ಟದಿಕ್ಪಾಲಕರೆಲ್ಲ ತಂತಮ್ಮ ವಾಹನಗಳಿಂದಿಳಿದು, ಕಾಲ್ನಡಿಗೆಯಿಂದ ನಡೆಯುತ್ತ, ಕೈಯಲ್ಲಿ ಕತ್ತಿ-ಢಾಲುಗಳನ್ನು ಹಿಡಿದುಕೊಂಡು ಬಂದು, ಹೂಳಿದ ಅಗಳಿನಲ್ಲಿ ನಿಂತುಕೊಂಡು, ಓಡಿಹೋಗುವ ಅಮರರನ್ನೆಲ್ಲ ಬಾಯಿಗೆ ಬಂದಂತೆ ಜರಿಯುತ್ತ ತಾವೆ ಮುಂದೆ ನುಗ್ಗಿದರು; ಅಲ್ಲಲ್ಲಿ ಕೈಕಾಲೊಡೆದು ಬಿದ್ದವರನ್ನು ಎಳೆದೆಳೆದು ಹಾಕಿಸುತ್ತ, ಸ್ವತಃ ಕೋಟೆಯನ್ನು

* ಮೂಲ ಪದ್ಯದ ಗದ್ಯಾನುವಾದವಿದು.

ಹತ್ತಿನಿಂತರು. ಆಗ ಸುರರ ಸೈನ್ಯಕ್ಕೆಲ್ಲ ಹೊಸ ಉತ್ಸಾಹ ಬಂದಂತಾಯಿತು. ರಾಕ್ಷಸರೂ ಎಚ್ಚರಿಕೆಯಿಂದ ಯುದ್ಧಮಾಡಲು ತೊಡಗಿದರು. ಆಗ:

* "ಸುರರು ಅಸುರರಂ, ಮುಂದಲೆಯಂ ಪಿಡಿದು ಆಳ್ವೇರಿಯಿಂದ ಅಗಳೊಳಗೆ ಕೆಡಪುವರ್; (ಅಸುರರು) ದಿವಿಜರಂ ಮೇಲ-ಕಡರದಂತಿರೆ ಇರಿದು ನೂಂಕುವರ್. ಉರಿವ ಮದ್ದಿನ ತಿತ್ತಿಯಂ ಹಾಯ್ಕುವರ್. (ಹೀಗೆಯೆ) ಉಳಿದ ಸಮರಸಾಧನದಿಂದೆ ದಿವಿಜರಂ ಮಡಿಪುತಿರೆ, ಮತ್ತೆ ಮತ್ತೆ ಉರವಣಿಸಿ ಅಮರವ್ರಾತ ದೈತ್ಯರಂ ಗಣನೆಗೊಳ್ಳದೆ ಪತ್ತುತಿರ್ದುದು."

ಆಗ ಪಟ್ಟಣದಲ್ಲಿ ತುಂಬ ಗಲಾಟೆಯೆದ್ದಿತು. ಪಟ್ಟಣಿಗರು ಕೋಟೆಯ ಆಳ್ವೇರಿಯನ್ನು ಹತ್ತಿದರು. 'ಶಿವಶಿವಾ ದುರ್ಗಗಳಿರದೆ ಕೋಳ್ವೋದುವು' ಎಂದು ಬೀದಿ ಬೀದಿಗಳಲ್ಲಿಯೂ ಕೂಗಲು ತೊಡಗಿದರು. ಕೋಳ್ವೋದ ದುರ್ಗದ ಬಣ್ಣನೆಯೂ ಈ ಕಾವ್ಯದಲ್ಲಿ ಬೇಕಾದಷ್ಟಿದೆ.

ಆಯಿತು; ಮುಂದೆ ತ್ರಿಪುರದ ಕೋಟೆ ನಾಶವಾಗಿ ರಾಕ್ಷಸರನ್ನು ದೇವತೆಗಳು ಜಯಿಸಿದರು. ಆ ಮಾತು ನಮಗೀಗ ಬೇಕಾಗಿಲ್ಲ. ನಮಗೆ ಬೇಕಾದುದು ಕೋಟೆಗಾಳೆಗದ ವಿಷಯ ಮಾತ್ರ.

ಹದಿನಾರನೆಯ ಶತಮಾನದ ಕೊನೆಯ ಭಾಗದಲ್ಲಿ ಬದುಕಿದ **ವಿರೂಪಾಕ್ಷ ಪಂಡಿತ**ನಿಗೆ ಕೋಟೆಗಾಳೆಗ ಅರಿಯದ ವಿಷಯವೇ? ಕೋಟೆಗಾಳೆಗದ ಪ್ರತಿಯೊಂದು ಅಂಗವನ್ನೂ ಕಣ್ಣಿಗೆ ಕಟ್ಟುವಂತೆ ಸಂಪೂರ್ಣವಾಗಿ ಚಿತ್ರಿಸಿದವನೆಂದರೆ—ನಮಗೆ ಗೊತ್ತಿದ್ದ ಮಟ್ಟಿಗೆ—೧೬ನೆಯ ಶತಮಾನದ ಕವಿಗಳಲ್ಲೆಲ್ಲ ವಿರೂಪಾಕ್ಷ ಪಂಡಿತನು ಒಬ್ಬನೇ ಒಬ್ಬ ಎಂದು ಹೇಳಬಹುದು. ರಾಕ್ಷಸರಿಗೂ-ದೇವತೆಗಳಿಗೂ ನಡೆದ ಆಕಾಶದಲ್ಲಿಯ ಯುದ್ಧದಲ್ಲಿ, ಈ ವೀರಕವಿ ಕನ್ನಡಿಗರ ಕೋಟೆಗಾಳೆಗದ ಜೀವವನ್ನು ತುಂಬಿ, ಅದನ್ನು ಅಮರವಾಗಿಸಿದ್ದಾನೆ. ಕನ್ನಡಿಗರೂ ಕನ್ನಡಿಗರ ಸಂಸ್ಕೃತಿಯೂ ಜಗತ್ತಿನಲ್ಲಿ ಇರುವವರೆಗೂ **ವಿರೂಪಾಕ್ಷ ಪಂಡಿತ**ನ ಹೆಸರು, ಆತನ '**ಚೆನ್ನಬಸವಪುರಾಣ**'ದಲ್ಲಿಯ **ತ್ರಿಪುರದ ಮುತ್ತಿಗೆ**ಯ ಕತೆ ಇವು ಬದುಕಿ ಉಳಿದೇ ಉಳಿಯುವುವು.

---

* ಮೂಲ ಪದ್ಯದ ಗದ್ಯಾನುವಾದವಿದು.

## ( ಕ್ರಿ. ಶ. ೧೭ನೆಯ ಶತಮಾನ )

**‘ ಕಂಠೀರವ ನರಸರಾಜ ವಿಜಯ ’** ವನ್ನು ಬರೆದ, **ಗೋವಿಂದ ವೈದ್ಯ** (೧೬೪೮) ನು, ಶ್ರೀರಂಗಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ಮೈಸೂರುದೊರೆ **ಶ್ರೀಕಂಠೀರವ ನರಸರಾಜರ** ಆಸ್ಥಾನಕವಿಯು. ಕಂಠೀರವ ನರಸರಾಜರ ಕಾಲವೆಂದರೆ ಅದು ನಾಡಿನಲ್ಲಿಯು ತುಂಬ ಅಶಾಂತಿಯ ಕಾಲ. ಆದುದರಿಂದಲೆ ಈ ದೊರೆಯ ಚರಿತ್ರವೆಂದರೆ ಬರಿಯೆ ಚಿಕ್ಕದೊಡ್ಡ ಯುದ್ಧಗಳಿಂದಲೆ ತುಂಬಿದೆ. ಇವೆಲ್ಲ ಯುದ್ಧಗಳನ್ನೂ ಗೋವಿಂದವೈದ್ಯನು ಕಣ್ಣಾರೆ ಕಂಡವನಾಗಿಯೆ ಇರಬೇಕು. ಇವನ ಕಾವ್ಯದ ವಸ್ತು ಐತಿಹಾಸಿಕವಾದುದರಿಂದ, ವರ್ಣನೆಗಳು ಕೇವಲ ವಾಸ್ತವ ವಿಷಯಗಳಿಂದಲೆ ತುಂಬಿವೆ. ‘ ಕಂಠೀರವ ನರಸರಾಜ ವಿಜಯ ’ ದಲ್ಲಿ ಕೋಟೆಗಾಳೆಗದ ವರ್ಣನೆಯ ಸಂದರ್ಭಗಳು ನಾಲ್ಕೆಂಟು ಇವೆಯಾದರೂ, ಸಂಪೂರ್ಣ ವರ್ಣನೆ ಸಿಕ್ಕುವುದು ಆ ಕಾವ್ಯದ ೧೪ನೆಯ ಸಂಧಿಯಲ್ಲಿ. ಈ ಸಂಧಿಯಲ್ಲಿರುವ ೯೦ ಸಾಂಗತ್ಯಗಳು ಒಂದೊಂದೂ ಕೋಟೆಗಾಳೆಗದ ವರ್ಣನೆಗೆ ಪರಿಪೋಷಕವಾಗಿರುವುವು. ಈ ಸಂಧಿಯುದ್ದಕ್ಕೂ ಶ್ರೀರಂಗ ಪಟ್ಟಣಕ್ಕೆ ಲಗ್ಗೆಬಿದ್ದ ಸಂಗತಿಯು ಕಥಿತವಾಗಿದೆ. ಲಗ್ಗೆ ಹಾಕಿದವನು ವಿಜಾಪುರದ ಬಾದಶಹನ ಸರದಾರನಾದ ‘ ರಣಧೂಳಿಖಾನ್ ’ ಎಂಬವನು. ಆತನಿಗೆ ದೇಶೀಯರಾದ ಕೆಲವು ಜನ ಕನ್ನಡ ಪಾಳೆಯಗಾರರೂ ನೆರವಾಗಿ ಬಂದಿದ್ದರು. ಲಗ್ಗೆಗೆ ಪ್ರಾರಂಭಿಸಿರೆಂದು ಖಾನನು ಸೈನ್ಯಕ್ಕೆ ಅಪ್ಪಣೆ ಯಿತ್ತೊಡನೆಯೆ :—

**“ ಬಡಿದರು ಸನ್ನೆಯ ಭೇರಿ ; ಡಮಾಮಿಯ**
**ಕಡುರಭಸಕೆ ಬ್ರಹ್ಮಾಂಡ**
**ಒಡೆಯಲು, ಚೌದೆಸೆ ಜಡಿಯಲು, ಭೂತಳ**
**ನಡುಗುವಂದವನೇವೇಳ್ವೆ !**

**ಚಂಬಕ, ಡವುಡೆ, ನಫಿರಿ, ಬುರುಗಗಳುರೆ**
**ಕೊಂಬಿನ ಕಾಳೆ, ಮುವುರಿಯ,**
**ಬೊಂಬುಳಿಡೋಳು, ನಿಸ್ಸಾಳಗಳಬ್ಬರ**
**ತುಂಬಿತಾಕಾಶಮಂಡಲವ ! ”**

ಈ ವಾದ್ಯಗಳ ಮೊರೆತವಲ್ಲದೆ

“ ಬಿಲ್ಲ ಜೇವಡೆ, ಪಟುಭಟರ ಬೊಬ್ಬೆಯ ಬಲು
ಘಲ್ಲಣೆ, ಹಯಹೇಷಾನಿನದ,
ಕೊಲ್ಲಾರ ಬಂಡಿಯು ಚೀತ್ಕೃತಿ ತ್ರಿಜಗಕೆ
ತಲ್ಲಣವಿತ್ತುವಾ ಕ್ಷಣದೆ.

ಮುಹಮ್ಮದೀಯ ಸೈನಿಕರ ಕೂಗಾಟವನ್ನೂ ಕಾರ್ಯವನ್ನೂ ಕೂಡಿಯೆ ಹೇಳಿದ ಕವಿಯ ಪದ್ಯಗಳನ್ನು, ಅವನ ಭಾಷೆಯಲ್ಲಿಯೆ ಗದ್ಯವನ್ನಾಗಿ ಕೆಳಗೆ ಕೊಡಲಾಗಿದೆ :

“ ಬೇಗ ಫಿರಂಗಿಯ ಇಡು! ನಿಚ್ಚಣಿಕೆಯ ಪಿಡಿ! ಗುರಾಣಿ-ಖಂಡೆಯುವ ತುಡುಕು! ಬಲು ‘ ಜಬರುಜಂಗಿ ’ ಯಲಿ ಕೋಟೆಯನು ಹೊಡೆ!— ಎಂಬ ಕಡುರಭಸಗಳು ಒಪ್ಪಿದುವು. ಸೊಪ್ಪಿನ ಹೊರೆಯಲಿ ಅಗಳ ಹೂಳಿಬಿಡು! ಆರ್ಭಟೆಯ ಬಾಣಗಳ ಮೇಲಕೇಳಿಸು! ಪಟಲ ಗುಂಡುಗಳಂ ತೂಳಿಸು!— ಎಂಬ ಕೋಳಾಹಳ ಒಪ್ಪಿತು. ಕರಿಗಳ ಕೈಯಿಂದ ಕೋಟೆಯ ಕೆಡಹು! ಮೇಲಕೆ ಉರವಣಿಸಿ ಏರು! ಕಾಹಿ-ನವರ ತರಿ, ಇರಿ, ಹೊಡೆ!— ಎಂಬ ಅಬ್ಬರ ಚೌದೆಸೆಯೊಳಗೆ ಮೊರೆದುದು. ಶರಾಗ್ರದಲಿ ತುಂಬಿದ ಕರಿಯ ಮದ್ದಿನ ಪೊಟ್ಟಣಗಳನು ಇಂಬು-ಗೊಳಿಸು! ಬಲುಸುರಂಗದ್ವಾರಗಳಿಗೆಲ್ಲ ತುಂಬಿಸು!— ಎಂಬ ರಭಸವು ಒಪ್ಪಿತು. ತಳಮುಟ್ಟ ಕೋಟೆಯ ಅಗೆ! ದ್ವಾರಗಳ ಮಾಡಿ ಹೊಗು! ಅಡ್ಡಲಾದ ಅರಿಭಟರ ಮಿಗೆ ಬೀಳಲಿರಿ!— ಎಂಬ ಖಾನರ ಅಬ್ಬರವು ಗಗನಮಂಡಲದಿ ಮೊಳಗಿದುದು. ”

ಮುಹಮ್ಮದೀಯರ ಸೈನ್ಯವು ಲಗ್ಗೆಗೆ ಸನ್ನದ್ಧವಾದುದು ಸಟ್ಟಿರುಳಲ್ಲಿ ಎಂಬ ಮಾತು ಗೊತ್ತಿರಲಿ! ಆದುದರಿಂದಲೆ ಎಲ್ಲೆಲ್ಲಿಯೂ ದೀವಟಿಗೆಗಳು ಕಂಗೊಳಿಸುತ್ತಿದ್ದುವು, ಹೇಗೆಂದರೆ :—

“ ಖಳರ ಕೋಪಾಗ್ನಿ ನಾನಾದೆಸೆಯೊಳಗಾಗ
ಪಲವು ರೂಪಾದಂದದಲಿ |
ತಳಿಶುವು ಲಕ್ಕ ಸಂಖ್ಯೆಯಲಿ ಬೊಂಬಾಳದ
ಹೊಳೆವ ದೀವಟಗೆಗಳಾಗ. ||

ಕರಿಗಳಿಗೆಂಟು, ಕಾಲಾಳಿಗೆರಡು, ಬಲು-
ತುರಗಕೆ ನಾಲ್ಕು, ಕೊಲ್ಲಾರ-
ಹರಿವ ಬಂಡಿಗೆ ಹತ್ತು ದೀವಟಗೆಯ ಬಲು
ಪರಿಗಣನೆಗಳೊಪ್ಪಿದುವು ||"

ಈ ಭವ್ಯವಾದ ಬೆಳಕಿನಲ್ಲಿ ಖಾನನ ಸೈನಿಕರು :

"ದೆಸೆದೆಸೆಗೆ ಎರಡುಸಾಸಿರ ಏಣಿಗಳನು ಮಸಗಿ, ಮುಸುಕಿ, ಚೌದಿಕ್ಕಿನ ಕೋಟೆಯ ತೆನೆಗೆ ಸಂದಿಸಿ ಬೊಬ್ಬಿರಿದರು. (ಅಲ್ಲದೆ) ಆಗಸವನು ತುಡುಕುವ ಪೇರುವೆಗಳ ಮೇಗೆ ಏರಿ, ಬೇಗದೆ ಪೆಟಲ ಗುಂಡುಗಳ ಮಳೆಯನು ಕರೆದರು. ಅಂಬಿನ ತುದಿಗೆ ಏರಿಸಿದ ಪೊಟ್ಟಣ ದುಪ್ಪಿನಲಿ ಇಂಬಾದ ಕಿಚ್ಚಕಾರಿಸುತ, ಕುಂಬಿನಿ ನಡುಗೆ ಎಚ್ಚು ಬೊಬ್ಬಿರಿದು, ಊರೊಳಗೆ (ಕಿಚ್ಚನ್ನು) ತುಂಬಿದರು. ಆನೆಯ ಮೇಲೆ 'ಜಬರುಜಂಗಿ' ಗಳ ತಂದು ಆನಿಸಿ, ಭೋ ಎಂದೆನುತ ಖಾನಖಾನರು ಮುಂಬರಿದು, ಗುಂಡಿನ ಬಲುಸೋನೆಯ ಕರೆದರು."

"ಸುರುಸುರು ಸುರ್ರೆಂದು ಕೇಸುರಿಯು ಕರೆಯುತ ಮೊರೆದೇಳ್ವ ಬಾಣಗಳು ಆಗ ಕೈಕಾಲಿಡೆಯೊಳು ತುರುಗಿ ಪೊಯ್ದು, ಜನರಿಗೆ ಪಿರಿದು ಭೀತಿಯನು ಬೀರಿದುವು. (ಮತ್ತು) ಅಂಬರವೆಲ್ಲ ಬಾಣಗಳ ಉರಿ; ಚೌದೆಸೆ ತುಂಬಿದ ಕೋವಿಯ ಗುಂಡು ; ಕುಂಬಿನಿ ಸಿಂಗಾಡಿಯ ಅಂಬಿನ ಮಯವು" ಹೀಗಾಗಿ ಎಲ್ಲೆಲ್ಲಿಯೂ ಇಂಬಿಲ್ಲದಂತಾಯಿತು. ಆಗ ಖಾನ-ಖಾನರು ಕುದುರೆಯನು ಇಳಿದು, "ಗುರಾಣಿಯ ಹರಿಗೆಯ ಒದರಿಸಿ, ಖಡ್ಗವ ಜಳಪಿಸಿ, ತೊಡೆಯೊಳಗೆ ಕದುಬಿ, ಮದಮುಖದೊಳಗೆ (ಕೋಟೆ-ಯನು) ಏರಿದರು. ಆನೆಗಳನು ಕೊಂಬುಗತ್ತಿ ಸಹಿತವಾಗಿ ನಾನಾ ದೆಸೆಯೊಳಗೆ ಉರುಬಿ, ಉಪ್ಪಿನ ತಿತ್ತಿಯ ಹೊತ್ತಿಸಿ (ಕೋಟೆಗೆ) ಆನಿಸುತ ಉರಿಯ ಸೂಸಿದರು."

"ಒಂದೊಂದು ಏಣಿಯೊಳು ಐನೂರು ಖಾನರು ನಿಂದು, ತಲೆ-ವರಿಗೆಗಳ ಸಂದಿಸಿ, ಬೊಬ್ಬಿರಿದು (ಕೋಟೆಯನು) ಏರಿದರು. (ಆಗ) ಜಾಡಿಸಿ ಬರುವ ಪೆಟಲ ಗುಂಡುಗಳ—ಈಡಿರಿದು ಅರಿವ ಬಾಣಗಳ ನೋಡದೆ (ಗಣಿಸದೆ), ಹೆಣಗಳ ತುಳಿಯುತ್ತ (ಆ) ಖಾನರು

**ಕೋಟೆಯ ತೆನೆಗೆ ಕೈಯ ನೀಡಿದರು. ಹತ್ತಿ ನೋಡಿದರೆ ಇನ್ನೂ ಎರಡು ಸುತ್ತಿನ ಕೋಟೆ; ಒತ್ತಿನಲಿ ಅಗಳು–ಕಂದಕವು; ಮತ್ತೆ ರಾಟಳದ ಸೂತ್ರದ ಯಂತರಗಳ ಬಿತ್ತರವನು ಕಂಡರು.''**

ಮೊದಲನೆಯ ಸುತ್ತುಕೋಟೆಯನ್ನು ಅನೇಕ ಜನ ಮುಹಮ್ಮದೀಯ ವೀರರೂ ಅವರ ಪಕ್ಷದ ಹಿಂದೂ ವೀರರೂ ತಂತಮ್ಮ ಅನುಯಾಯಿಗಳೊಂದಿಗೆ ಹತ್ತಿ ಬಂದರು.

**" ಹಸಿದಿದ್ದ ಸಿಂಹದ ಗುಹೆಯನ್ನು ಎರಳೆಯ**
**ಶಿಶುಸಂಕುಳ ಮುತ್ತುವಂತೆ |**
**ವಸುಧೇಶ ನರಸೇಂದ್ರನ ಪುರವನು ರಿಪು-**
**ವಿಸರ ಮುಸುಕಿತೇವೇಳ್ವೆ ?**

**ಪಲೆ ಸೇರಿಸಿದೇಣಿಗಳ ಮೇಲೆ ಸುಭಟರು**
**ತಲೆವರಿಗೆಯನೊಡ್ಡಿಕೊಳುತ**
**ಅಲಗಿನ ಗಾಯವನೆಣಿಸದೆ ಹೆಣಗಳ**
**ತುಳಿತುಳಿದೊಡನೇರಿದರು.**

**ನೇಜೆಯಗಳ ಗಾಯ, ಪೆಟಲ ಗುಂಡುಗಳ ಸ-**
**ಮಾಜದಾರ್ಭಟೆಗೆ ಕಂಗೆಡದೆ**
**ಫೌಜುಫೌಜಾಗಿ ಬೊಬ್ಬಿರಿದೇರುವರಿಭಟ-**
**ರೋಜೆಯನೇನ ಬಣ್ಣಿಸುವೆ !''**

ಆಗ ಕಂಠೀರವನರಸರಾಜನು ತನ್ನ ಸೇನಾಪತಿ ನಂಜರಾಜನನ್ನು ಕರೆದು " ನೀನು ಈಗಲೆ ನಮ್ಮ '**ಗಡಿಮನ್ನೆಯ**' ರನ್ನು ಕರೆದು, ಅಪ್ಪಣೆ ಮಾಡಿ ಲಗ್ಗೆಗೇರಿದ ರಿಪುಬಲವನ್ನು ಯಮಸದನಕ್ಕಟ್ಟಿಸು '' ಎಂದು ಹೇಳಿದ. ಆಗ ನಂಜರಾಜನು ಒಡೆಯನ ಮಾತಿಗೆ 'ಹಸಾದ' ಎಂದು ಹೇಳಿ, ಆ ಕ್ಷಣವೆ ನಾಲ್ಕೂ ದಿಶೆಗೂ ಗಡಿಯ ಮನ್ನೆಯರನ್ನು ಅಟ್ಟಿ ಸಾಹಸವ ಮಾಡಿಸಿದ.

**" ಒಡನಾಗ ಕಂಠೀರವೇಶ್ವರನಾಳುವ ಪೊಡವಿಯ ಬಲುಮನ್ನೆಯರು**
**ತಡೆಯದೆ ಲಗ್ಗೆಗೇರಿದ ಖಾನಖಾನರ ಕಡಿದೋಡಿಸುವುದೇನನೆಂಬೆ ? ''**

‘ ಏನನೆಂಬೆ ? ’ ಎಂದು ಹೇಳಿದ ಗೋವಿಂದ ವೈದ್ಯನು, ಮೈಸೂರಿನವರ ಕೋಟೆಗಾಳೆಗದ ಸಾಹಸ-ಶೌರ್ಯಗಳನ್ನು ಮನವಾರೆ ಕೊಂಡಾಡದೆ ಬಿಟ್ಟಿಲ್ಲ. ಅವನು ಹೇಳುತ್ತಾನೆ :

“ ಹಿಂಡು-ಹಿಂಡಿನಲಿ ಏಣಿಯ ಮೇಲೆ ಏರಿ, ಮುಂಕೊಂಡು ಉರುಬುವ ರಿಪುಬಲದ ಸಿರಗಳ ಖಂಡಿಸಿ, ಮರುಳ್ಗಳ ಕೊರಳಿಗೆ ಮಾಲೆ ಹಾಕಿದರು. ಭಲ್ಲೆಯದಿಂದ ಇರಿದು, ಖಾನರ ಕರುಳ್ಗಳ ಸರಮಾಲೆಗಳ ಬೇಗ ತೆಗೆದು, ಭೂತಗಳ ಕೊರಳೊಳಗಿಕ್ಕಿ ಉನ್ನತಸಾಹಸವ ಮೆರೆದರು.”

“ ಆರನು ನೋಡಿದರೂ ಜವದಾಡೆಯ ತಿರಿಗುಳ ಪೂರೈಸಿದ ಗಾಯದವರು. ಆರ ನೋಡಲು ನೇಜೆಯದಲಗಲಿ ನೊಂದ ಮಾರಣದವರು ! ”

“ ಕವಿದು ಕೋಟೆಯ ತೆನೆಗೆ ಉರುಬುವ ಖಾನರನು ‘ ಕರಾಚೂರಿ ’ ಯಿಂದ ತಿವಿಯೆ, ಕೆಳಗೆ ತಲೆಯಾಗಿ ಸುರುಳಿ ಬಿದ್ದ ( ಆ ) ಅಸುರರ ಹವಣನು ಈಶ್ವರ ತಾನೆ ಬಲ್ಲ. ಚಿಗಿದು ಅಳ್ಳೇರಿಗಿಳಿವ ಖಾನ-ಖಾನರ ಮುಂದಲೆಗಳ ನಗುತ ಹಿಡಿದು, ಆಯುಧಗಳ ಉಗಿದು, ಶಿರಗಳ ಖಂಡಿಸಿ, ಅಗಳಿಗೆ ಇಟ್ಟರು. ”

ಹೀಗೆಯೆ

“ ವಸುಧೇಶ್ವರ ಕಂಠೀರವ ಸಾಕಿರ್ದ
ಅಸಹಾಯ ಶೂರ ಮನ್ನೆಯರು
ದೆಸೆದೆಸೆಯೊಳು ಕೋಟೆಗಡರ್ವ ಖಾನರುಗಳ
ಕುಸುರಿದರಿದು ಕೆಡಹಿದರು.”

ಮೈಸೂರಿನ ‘ **ಹಳೆಯ ಪೈಕದ ಭಟರೂ ಕೋವಿಯ ಭಟರೂ** ’ ವೈರಿಗಳ ತಲೆಗಳನ್ನು ಚೆಂಡಾಡಿದರು. ಅಲ್ಲದೆ ಏರಿಬರುತ್ತಿರುವ ತುರುಕರ ಸೈನ್ಯವನ್ನು ಚೆದರಿಸುವುದಕ್ಕೆ ಇನ್ನೂ ಹಲವು ಉಪಾಯುಗಳನ್ನು ಮಾಡಿದರು :—

“ ಏಣಿಗಳಿಗೆ ಕವೆಗೋಲುಗಳನು ತಂದು ಆನಿಸಿ ( ಅವುಗಳನ್ನು ) ಕೆಡೆನೂಕಲು, ಅಗ ತುರುಕರ ಮಾರ್ಬಲ ಗೋಣಡಿಯಲಿ ( ತಲೆ-ಕೆಳಗಾಗಿ ) ಬಿದ್ದು ಪ್ರಾಣವ ನೀಗಾಡಿದುದು.”

“ ತೊಲೆಗಳೊಳಗೆ ದಸಿಗಳ ಪೆಟ್ಟಿ ( ಚೂಪಾದ ಗೂಟಗಳನ್ನು ಜಡಿದು ) ಕೋಟೆಯ ಲಂಘಿಪ ಬಲುಮೆಕಾರರ ಮೇಲೆ ನೂಕೆ, ತಲೆ-ಮೈ-ಕೈಕಾಲೊಳು ಗೂಟಗಳು ಮೂಡಿ ( ಹಲವರು ) ಜೀವಗಳನು ತೊರೆದರು.”

“ ಎತ್ತುಗಲ್ಲುಗಳೆಂಬ ಕಲ್ಲು, ಕವಣೆಗಲ್ಲು (ಇವು) ಒತ್ತಿದ ಗಾಯ-ಗಳಿಂದ ನೆತ್ತಿಗಳೊಡೆದು, ಕೈಕಾಲು ಉಡಿದು, ಅಗಳೊಳು ( ಬಿದ್ದು ) ಸತ್ತವರಿಗೆ ಲೆಕ್ಕವೆ ಇಲ್ಲ. ಖಂಡೆಯ (ಕತ್ತಿ) ಗಳ ಪೆಟ್ಟಿನೊಳಗೆ ಗುರಾಣಿ ( ಢಾಲು ) ಗಳ್ ತುಂಡಿಸಿ, ತಲೆ ಸೀಳಾಗಿ, ಸಿಂಗಾಡಿ (ಬಿಲ್ಲು) ಖಂಡಿಸಿ, ದೊಣೆಯ(ಬತ್ತಳಿಕೆ) ಅಂಬು ಪುಡಿಯೆದ್ದು ಖಾನರಾಜಿ ದಿಂಡುರುಳಿತು.”

“ ಕರಿಯ ಮದ್ದಿನ ಪೊಟ್ಟಣಗಳ ಹೊತ್ತಿಸಿ ಭರದಿಂದ ಮೇಲೆ ಇಡುತ್ತಿರಲು ಗಡ್ಡ, ಮಂಡೆ, ಮೇಲ್ಮೀಸೆ ಸೀಕರಿಯಾಗಿ, ನೆಲದೊಳಗೆ ಉರುಳಿಬಿದ್ದರು. ( ಅದರಂತೆಯೆ ) ಉಪ್ಪಿನ ತಿತ್ತಿಗಳನು ಬೇಗ ಹೊತ್ತಿಸಿ ತಪ್ಪದೆ ಆನೆಗಳ ಮೇಲೆ ಇಡಲು, ಕಪ್ಪಿನ ದೇಹಗಳ್ ಸೀದು, ಮುನ್ನೂರು ಆನೆ ಭೂಮಿಯಲಿ ಕುಪ್ಪಳಿಸಿದುವು.”

“ ತಳಿಗಳನು ಮುರಿದರು. ಮೇರುವೆಗಳನ್ನು ಸುಟ್ಟು, ಸುರಂಗ ಗಳ ದ್ವಾರದಲಿ ಕರಿಯ ಮದ್ದನು ತುಂಬಿ ಹೊತ್ತಿಸಿ, ಖಾನರನು ಕರಿಕು-ಮಾಡಿದರು.”

“ ನೆಲ್ಲಿಯಕಾಯ್ಗಳನು ಹೆಗ್ಗದಿಗೆಯೊಳಿಡೆ ಅವು ಚೆಲ್ಲವರಿದು ಬೀಳುವಂತೆ, ಖಿಲ್ಲೆದರಾದ ಖಾನರೆಲ್ಲರೂ ಹಲ್ಲು ಕಿರಿದು ಅಗಳೊಳಗೆ ಬಿದ್ದರು.”

ಆಗ ನಡೆದುದೇನೆಂದರೆ :—

“ ಲಗ್ಗೆಯನೇರುವೊಡ್ಡೆದಿದ ಖಳಬಲ-
ಮೊಗ್ಗರ ಮುರಿದು, ಹಿನ್ನೆಲೆಗೆ
ಜಗ್ಗನೆ ಜರಿದೋಡಿದರು ದೆಸೆದೆಸೆಗಾಗ
ದುರ್ಗದ ಭಟರ ಉರುಬಿಂದ! ”

೭—೧೨೨೨.



“ಎನ್ನ ಬಿಡೆಲೆ ಸ್ವಾಮೀ, ತನ್ನ ಬಿಡೀಕ್ಷಣ-
ವೆನ್ನುತ ಬಲು ತೀವ್ರದಿಂದ
ಮನ್ನೆಯರುಗಳು ಮೂದಲಿಸಿ, ಮುತ್ತಿದ ರಿಪು-
ಗುನ್ನಿಗಳನು ತೂರಿದರು.”



“ಪುರತಳ ಲಗ್ಗೆಗೇರಿದ ಖಾನ-ಖಾನರ
ಮುರಿಯಲಿರಿದು ಬೀಳಗೆಡಹಿ,
ದುರಗಲಿ ಕಂಠೀರವೇಂದ್ರ ಸುಭಟರನು
ಹೊರಕಾಹ ಬಲಿದ ಪಟ್ಟಣಕೆ.”



“ಬಳಸಿದ ತಳಿಯ ಮುರಿದು, ಮೋರುವೆಗಳ
ಬಲು ಶಿಖಿಗಾಹುತಿಯಿತ್ತು,
ಸಲೆ ಸುರಂಗದ ಘಾತವ ಹೂಳಿದರಾಗ
ತಳುವದೆ ಹೊರಕಾಹಿನವರು.”



ಹೆಣಗಳನೆತ್ತುವರುರುಬಿ ಚೌದೆಸೆಯಲಿ
ರಣಕಿದಿರಾದ ತುರುಕರ
ಕ್ಷಣದೊಳಗಿದಿರಾಗ ಬೀಳಗೆಡಹಿ, ಶೌರ್ಯ
ದಣಿಯೆ ಮೆರೆದರೇವೇಳ್ವೆ ?

ಹದಿನೇಳನೆಯ ಶತಮಾನದ ಮಧ್ಯದಲ್ಲಿ ಬಲುಬಂಟನಾದ ದೊರೆಯ ಸಾಮೀಪ್ಯದಲ್ಲಿಯೆ ಬದುಕಿ ಬಾಳಿದ ಗೋವಿಂದ ವೈದ್ಯನು, ನಿಜವಾಗಿಯೂ ಕನ್ನಡಿಗರೆ ಮಾಡಿದ ಕೋಟೆಗಾಳೆಗವನ್ನು ಬಣ್ಣಿಸಿದ ಬಗೆಯಿದು. ಇದನ್ನು ಓದುತ್ತಿರುವಾಗ ಆ ಕಾಳೆಗದ ಚಿತ್ರ ಕಣ್ಣೆದುರು ಕಟ್ಟಿ, ನಮ್ಮನ್ನು ನಾವೆ ಮರೆತು ಬಿಡುವಂತಹ ಉತ್ಸಾಹದಲ್ಲಿ—ಹೆಮ್ಮೆಯಲ್ಲಿ—ನಮ್ಮನ್ನು ಓಲಾಡಿಸುವನು ಕವಿ. ಈ ಗೋವಿಂದ ವೈದ್ಯನ ಕೋಟೆಗಾಳೆಗವನ್ನು ಓದಿದ ಮೇಲೆ,

ಇವನಿಗಿಂತ ಹಿಂದಿನ ಕವಿಗಳು ಹೇಳಿದ್ದ ಕೋಟೆಗಾಳೆಗದಲ್ಲಿಯ ವಾಸ್ತವಾಂಶಗಳೂ, ಕಲ್ಪನೆಗಳೂ ಗೊತ್ತಾಗುವುವೆಂದು ಹಿಂದೊಮ್ಮೆ ನಾನು ಹೇಳಿದ ಮಾತು ದಿಟವೆ ದಿಟವೆಂದು ಎನಿಸದಿರದು.

## ೭. ಪರಿಭಾಷಾ ಸ್ಪಷ್ಟೀಕರಣ

ಇದುವರೆಗಿನ ಈ ಬರೆಹದಲ್ಲಿ ಉಪಯೋಗಿಸಲಾದ ಕೋಟೆಯ ರಚನೆಗೆ ಸಂಬಂಧಿಸಿದ ಶಬ್ದಗಳೂ, ಕೋಟೆಗಾಳೆಗಕ್ಕೆ ಸಂಬಂಧಿಸಿದ ಶಬ್ದಗಳೂ ಅಲ್ಲಲ್ಲಿಯ ಸಂದರ್ಭಗಳಿಗೆ ಅನುಸಾರವಾಗಿ ಅರ್ಥವನ್ನು ಸೂಚಿಸಿಯೆ ಸೂಚಿಸುತ್ತವೆ. ಆದರೂ ಕೆಲವೊಂದು ಶಬ್ದಾರ್ಥಸ್ವರೂಪವನ್ನು ಸ್ಪಷ್ಟೀಕರಿಸಲೇ ಬೇಕಾಗುತ್ತದೆ. ನಮ್ಮಲ್ಲಿಯ ಬೇರೆ ಬೇರೆ ಪರಂಪರೆಗಳ ವಿಚ್ಛಿತ್ತಿಯ ಮೂಲಕ, ಇಂದು ಅಧಿಕೃತವೆಂದು ಮನ್ನಿಸಲಾಗುವ ನಿಘಂಟುಗಳಲ್ಲಿ ಕೂಡ ಅನೇಕ ಕನ್ನಡ ಶಬ್ದಗಳ ಸೇರ್ಪಡೆಯಿಲ್ಲ. ಸೇರ್ಪಡೆಯಾದ ಅನೇಕ ಶಬ್ದಗಳಿಗೆ ಸರಿಯಾದ ಅರ್ಥ ದೊರೆಯುವುದಿಲ್ಲ. ಆದುದರಿಂದ ಕೋಟೆಗಾಳೆಗಕ್ಕೆ ಸಂಬಂಧಿಸಿದ ಕೆಲವು ವಿಶಿಷ್ಟ ಶಬ್ದಗಳ ಅರ್ಥವನ್ನೂ, ಕೆಲವು ಯುದ್ಧೋಪಕರಣ ವಾಚಕಶಬ್ದಗಳ ಸ್ವರೂಪಪರಿಚಯವನ್ನೂ ಇಲ್ಲಿ ವಿವರಿಸಲಾಗಿದೆ.

### ಹುಲಿಮೊಗ

ಕೋಟೆಯ ಹೆಬ್ಬಾಗಿಲಿಗೆ '**ಹುಲಿಮೊಗ**' ಎಂಬ ಹೆಸರಿದೆ. ಇದು ರೂಪಕರಾಜ್ಯಕ್ಕೆ ಸೇರಿದ ಶಬ್ದ. ಕನ್ನಡದಲ್ಲಿ ಹುಲಿಗಿರುವ ವೀರಸ್ಥಾನವು ದೊಡ್ಡದು. ಕೋಟೆಯ ಭವ್ಯತೆ-ಭೀಕರತೆಗಳ ಮೂಲಕ ಅದನ್ನು ದೊಡ್ಡದಾದ ಹುಲಿಯೆಂದು ಕಲ್ಪಿಸಿ, ಅದರ ಹೆಬ್ಬಾಗಿಲನ್ನು 'ಹುಲಿಮೊಗ'ವೆಂದು ಕರೆದಿದ್ದಾರೆ. ಈ ಹೆಬ್ಬಾಗಿಲನ್ನು ಪ್ರವೇಶಿಸುವ ಶತ್ರುಸೈನಿಕರು ಹುಲಿಯ ಬಾಯಿಗೆ ಬಿದ್ದಂತೆಯೆ ಎಂದು ಭಾವನೆಯುಂಟಾಗುವಷ್ಟು ಅಲ್ಲಿ ಜಾಗೃತವಾದ ಕಾವಲೂ ತೀಕ್ಷ್ಣವಾದ ಶಸ್ತ್ರಾಸ್ತ್ರಗಳೂ ಇರುತ್ತಿದ್ದುವು. ಕನಕದಾಸರದೊಂದು ಪದ್ಯದಲ್ಲಿಯ ವರ್ಣನೆ ನೋಡಿದರೆ, ಹೆಬ್ಬಾಗಿಲಿನ ಎರಡೂ ಕಡೆಯ ಕೊತ್ತಳಗಳು ನಿಂತ ಎರಡು ಹುಲಿಗಳೆಂದೂ, ಅಗಸೆಬಾಗಿಲು ಅವುಗಳ ತೆರೆದ ಬಾಯಿಯೆಂದೂ ವರ್ಣನೆಯಿದೆ.

## ಅಂಬುಗಂಡಿ

ಕೊತ್ತಳಗಳಿಗೂ, ಅಟ್ಟಣೆಗಳಿಗೂ, ತೆನೆಗಳ ಮಧ್ಯದಲ್ಲಿಯೂ **'ಅಂಬುಗಂಡಿ'** ಗಳು ಇರುತ್ತಿದ್ದುವು. ಯುದ್ಧಕಾಲದಲ್ಲಿ ವೈರಿಗಳಿಂದ ತಮಗೆ ತೊಂದರೆಯಾಗದಂತೆ ಈ **ಕಂಡಿ**ಗಳ ಹಿಂದೆ ನಿಂತು **'ಅಂಬು'** (ಬಾಣ) ಗಳನ್ನು ಹೊಡೆಯಲು ಅನುಕೂಲವಾಗುತ್ತಿದ್ದಿತು. ತುಬಾಕಿ-ಕೋವಿಗಳು ಬಂದಮೇಲೆ, ಅವುಗಳನ್ನೂ ಈ ಅಂಬುಗಂಡಿಯ ಮೂಲಕ ಹೊಡೆಯುತ್ತಿದ್ದರು. ಇವುಗಳ ರಚನೆಯು ಇವುಗಳ ಮೂಲಕ ಗುರಿಯಿಟ್ಟು ಹೊಡೆದರೆ, ಮುತ್ತಿದ ಶತ್ರುಸೈನ್ಯದ ಮೇಲೆಯೆ ಅಸ್ತ್ರಗಳು ಬೀಳುವಂತೆ ಇರುತ್ತಿದ್ದಿತು.

## ಕುದುರೆಗಂಡಿ

ಶತ್ರುಗಳು ಮುತ್ತಿಗೆ ಹಾಕಿದಾಗ, ಕೋಟೆಯೊಳಗಿನವರು ಕುದುರೆಗಳನ್ನು ಹೊರಕ್ಕೆ ತಂದು ಅಗಳಿನಲ್ಲಿ ನೀರುಕುಡಿಸಲಿಕ್ಕೆಂದು—ಕೋಟೆಯ ಇಕ್ಕಟ್ಟಿನ ಸ್ಥಳದಲ್ಲಿ—ಮಾಡಿದ ಚಿಕ್ಕ ಬಾಗಿಲುಗಳು.

## ನೀರುಗಂಡಿ

ಈ **'ನೀರುಗಂಡಿ'** ಯನ್ನು **'ದಿಡ್ಡಿ'** ಯೆಂಬ ಹೆಸರಿನಿಂದಲೂ ಕರೆಯುವರು. ಕೋಟೆಯೊಳಗಿನವರು ನೀರನ್ನು ತರಲಿಕ್ಕೆಂದು ರಚಿತವಾದ ತೀರ ಚಿಕ್ಕ ಬಾಗಿಲುಗಳಿವು.

## ಚೋರಕಂಡಿ

ಸಂದರ್ಭಬಂದರೆ ಯಾರಿಗೂ ಕಾಣದಂತೆ ಕಳ್ಳತನದಿಂದ ಪಾರಾಗಿ ಹೋಗುವುದಕ್ಕೆ ರಚಿಸಿದ ಗುಪ್ತದ್ವಾರಗಳಿವು. ಇಂತಹ ಗುಪ್ತದ್ವಾರಗಳು ನೆಲದೊಳಗಿಂದ ಇದ್ದರೆ ಅವುಗಳನ್ನು **'ಸುರಂಗ'** ಎಂದೊ, **'ಬಿಲದ್ವಾರ'** ಎಂದೊ ಕರೆಯುತ್ತಿದ್ದರು.

## ಡೆಂಕಣಿ

ಕನ್ನಡದಲ್ಲಿಯ ಕೋಶಕಾರರೆಲ್ಲರೂ ಇದಕ್ಕೆ **'ಧ್ವಜಸ್ತಂಭ'** ಎಂದು ಅರ್ಥ ಹೇಳಿರುವರು. ಆದರೆ ಕೋಟೆಗಾಳೆಗದಲ್ಲಿ **'ಮಾರಿವೊಗದ ಡೆಂಕಣಿ'** ಮಾಡುವ ಹಿಂಸಾಕಾರ್ಯವನ್ನು ನೋಡಿದರೆ, ಅದೊಂದು

ಭವ್ಯವಾದ ಆಯುಧವಿಶೇಷವೇ ಎಂಬುದನ್ನು ಯಾರೂ ಒಪ್ಪಿಕೊಳ್ಳ ಬಹುದು. ಕೋಟೆಯ ಮೇಲೆ ಯಾವಾಗಲೂ ಇವು ಕಾಪಿನ ಎಚ್ಚರಿಕೆಯ ಚಿಹ್ನವನ್ನು ಸೂಚಿಸುತ್ತ ಸೆಡೆದುಕೊಂಡು ನಿಂತಿರುತ್ತಿದ್ದುವು. ಯುದ್ಧವಿಲ್ಲದ ಕಾಲದಲ್ಲಿ ಈ ಡೆಂಕಣಿಗಳಿಗೆ ಧ್ವಜಪಟಗಳನ್ನು ಕಟ್ಟುತ್ತಿದ್ದರೂ ಕಟ್ಟುತ್ತಿರ-ಬಹುದು. ಡೆಂಕಣಿಯೆಂಬುದು ಆಯುಧವೆ ಅಲ್ಲದೆ ಕೇವಲ ಧ್ವಜಸ್ತಂಭ ವಲ್ಲ. ಯುದ್ಧಕಾಲದಲ್ಲಿ ಇವುಗಳನ್ನು ನೆಲಕ್ಕೆ ಬಾಗಿಸಿರುತ್ತಿದ್ದರೆಂಬುದಾಗಿ **ಮಂಗರಸ**ನು ಹೇಳುವನು.

## ಮರುಳ್‌ಗೈ

ಡೆಂಕಣಿಯ ಜೊತೆಯಲ್ಲಿಯೆ ಇದನ್ನೂ ಹೇಳುವರು. 'ಮರುಳ್' ಎಂದರೆ ಭೂತ-ಪಿಶಾಚಿಗಳು. ಅವುಗಳ ಕೈಯೆಂದು ಇದಕ್ಕೆ ಹೆಸರಿದ್ದ ಮೇಲೆ ಇದು ತುಂಬ ಭೀಕರವಾಗಿರಬೇಕು; ಭವ್ಯವಾಗಿರಬೇಕು. **'ಮರುಳ್ಗೈ ಗಳಿಂ ತೂಂತರ್'** ಎಂದರೆ ಚುಚ್ಚಿದರು-ಎಂದು **ಚೆನ್ನಬಸವ ಪುರಾಣ** ದಲ್ಲಿ ಹೇಳಲಾಗಿದೆ.

## ಶತಘ್ನಿ

ಪ್ರಯೋಗಿಸಿದೊಡನೆಯೆ ನೂರಾರು ಜನರ ಪ್ರಾಣವನ್ನು ತೆಗೆದುಕೊಳ್ಳು ವಂತಹ ಮದ್ದುಗುಂಡಿನ ಆಯುಧವಿದು. ಬಹುಶಃ ತೋಫಿಗೇ ಸಂಸ್ಕೃತಜ್ಞರು ಈ ಹೆಸರನ್ನು ಇಟ್ಟಿರಬಹುದಾಗಿದೆ. **'ಫಿರಂಗಿ'** ಎಂದರೂ ತೋಫು. ಮಂಗರಸನು ಹೇಳಿದ **'ಲೋಹಯಂತ್ರ'** **'ಡೆಗ್ಗೆವರ'** ಗಳೂ ತೋಫು ಗಳೇ ಆಗಿರಬಹುದೆಂದು ಅವುಗಳ ಅಲ್ಲಿಯ ಸ್ವರೂಪಗಳ ಮೂಲಕ ಹೇಳ ಬಹುದು. **'ಜಬರುಜಂಗಿ'** ಯು **'ಜಬರ್‌ಜಂಗ್'** ಎಂಬ ಯಾವನೀ-ಶಬ್ದದ ಅಪಭ್ರಂಶರೂಪ. ದೊಡ್ಡ ತೋಫನ್ನು ಈ ಹೆಸರಿನಿಂದ ಕರೆಯು ತ್ತಿದ್ದರು.

## ಪಟಲು

ಇದು ಅನುಕರಣವಾಚಿಯಾಗಿ ಬಂದ ಶಬ್ದ. ಫಟಾಕಿಯಂತೆ ಇದು ಶಬ್ದಮಾಡುತ್ತಿದ್ದಿತು. ಇದೂ ಮದ್ದನ್ನು ಉಪಯೋಗಿಸಿ ಮಾಡಿದುದೆ. **'ಉಪ್ಪಿನ ತಿತ್ತಿ'** **'ಕರಿಯ ಮದ್ದಿನ ತಿತ್ತಿ'** ಇವೆಲ್ಲ ಇದೇ ಜಾತಿಯಲ್ಲಿ ಬರುವುವು. **'ಚೇಳುಬಾಣಗಳ ರಾಟಳ'** ವೂ ಮದ್ದಿನಿಂದ ಸಿದ್ಧಗೊಳಿಸಿ-ದುದೇ ಇರಬೇಕು.

## ಲಾಳಿ

ಜೇಡರ 'ಲಾಳಿ' ಯನ್ನು ಅನೇಕರು ನೋಡಿರಬಹುದು. ಹಾಗೆಯೆ ಸಿಡಿದಾಡುವ, ಒಂದು ಇಬ್ಬದಿ ಮೊನೆಯ ಜಡವಾದ ಚಿಕ್ಕ ಆಯುಧವಿದು.

## ಈಟಿಗಿರುವ ಬೇರೆ ಬೇರೆ ನಾವು-ರೂಪಗಳು

ಭಲ್ಲೆಯು, ಸೇಜೆಯು, ಕುಂತ, ಕೊಂತ, ಸಬಳ, ಇಟ್ಟಿ, ಹೇರಿಟ್ಟಿ, ಸಿಲುಕಿಟ್ಟಿ.

## ಕತ್ತಿಯ ಬೇರೆ ಬೇರೆ ನಾವು-ರೂಪಗಳು

ಕೈಗತ್ತಿ, ಖಂಡೆಯ, ಸೊರಟೆಯ ಕತ್ತಿ, ಬಾಳಗತ್ತಿ, ಕರಾಚೂರಿ, ಸುರಗಿ, ಕೈಸುರಗಿ, ಬಾಕು, ಕೊಂಬುಗತ್ತಿ (ಆನೆಯ ಕೋರೆಗಳಿಗೆ ಕಟ್ಟುವ ಕತ್ತಿ).

## ಪಂದಿದಲೆ

ಹಂದಿಯ ತಲೆಯ ಶಕ್ತಿಯೂ ಅವುಗಳ ಕೋರೆಹಲ್ಲುಗಳ ಮೊನೆಯೂ ಅದರಿಂದ ಏಟು ತಿಂದವರಿಗೇ ಗೊತ್ತು. ಅದೇ ಆಕಾರದ, ಅದೇ ಶಕ್ತಿ-ಗುಣಗಳುಳ್ಳ ಈ ಆಯುಧಗಳು, ಕೋಟೆಯ ಮೇಲೆ ಯಾವಾಗಲೂ ಇದ್ದೇ ಇರುತ್ತಿದ್ದುವು ಈ '**ಪಂದಿದಲೆ**' ಯಂತೆಯೆ '**ಮಕರಮುಖ**' (ಮೊಸಳೆಯ ಬಾಯಿ) ಎಂಬ ಆಯುಧವಿದ್ದುದೂ ಗೊತ್ತಾಗುವುದು.

## ಹಾವಿನ ಹೇಳಿಗೆ

'ಹೇಳಿಗೆ' ಎಂಬುದು 'ಪೇಟಿಕಾ' ಎಂಬುದರ ಅಪಭ್ರಂಶರೂಪ. ಮುತ್ತಿಗೆ ಹಾಕಿದವರನ್ನು ಕಚ್ಚಿ ಕೆಡಹುವಂತೆ, ಅನೇಕ ಹಾವುಗಳನ್ನು ಹಿಡಿದು ಹಿಡಿದು ಪೆಟ್ಟಿಗೆಗಳಲ್ಲಿ ಹಾಕಿ ಕೋಟೆಗಳ ಮೇಲೆ ಇಟ್ಟಿರುತ್ತಿದ್ದರು.

## ತಳಿ-ಮುಳುಮೇಲಿ

ಕೋಶಕಾರರು 'ತಟಿ' ಎಂಬುದಕ್ಕೆ 'ಸ್ಥೂಲದಾರು' ಎಂಬುದಾಗಿ ಹೆಸರನ್ನು ಕೊಟ್ಟಿದ್ದಾರೆ. ಎಂದರೆ ದೊಡ್ಡದಾದ ತೊಲೆ ಎಂದರ್ಥವಾಗುವುದು. 'ನೂಂಕುದಳಿ' ಎಂಬುದಿನ್ನೊಂದು 'ತಳಿ' ಯನ್ನೊಡ-

ಗೊಂಡ ಶಬ್ದವಿದೆ. ಕೋಟೆಯನ್ನೇರಿ ಬರುತ್ತಿರುವ ಶತ್ರುಸೈನಿಕರನ್ನು ಈ '**ನೂಂಕುದಳಿ**' ಗಳಿಂದ ನೂಕುತ್ತಿದ್ದರು. ಪಾಳೆಯಗಳ ಸಂರಕ್ಷಣೆಗಾಗಿ ಅಲ್ಲಲ್ಲಿ ದೊಡ್ಡ ದೊಡ್ಡ ತಳಿ (ಮರದ ದಿಮ್ಮಿ) ಗಳನ್ನು ಸುತ್ತಲೂ ನಿಲ್ಲಿಸಿ ಅವುಗಳಿಗೆ '**ಮುಳುವೇಲಿ**' ಗಳನ್ನು ಬಿಗಿಯುತ್ತಿದ್ದರು. ಈ ಮುಳುವೇಲಿ ಗಳು ಕಾಲಾನುಸಾರವಾಗಿ ಕಬ್ಬಿಣದ ಮುಳ್ಳಿನ ತಂತಿಯಿಂದ ಮಾಡಿದುವೂ ಆಗಿ ಇರಬಹುದು.

## ಸಾರ, ನಡೆಸಾರ, ಸಾರಮಾರಿ

ಕೋಟೆಯನ್ನು ಹತ್ತುವುದಕ್ಕೆ ಈ 'ಸಾರ' ಗಳನ್ನು ಕಟ್ಟುತ್ತಿದ್ದರು. ಈಗಲೂ ಮನೆ ಕಟ್ಟುವಾಗ ಎತ್ತರದ ಗೋಡೆಗಳು ಇರುವಲ್ಲಿ—ಸಾರ ಕಟ್ಟುವುದನ್ನು ಅನೇಕರು ನೋಡಿರಬಹುದು. 'ನಡೆಸಾರ' ಎಂಬುವು ಅಗಳನ್ನು ದಾಟಿ ಹೋಗುವುದಕ್ಕಾಗಿ ಉಪಯೋಗವಾಗುತ್ತಿದ್ದುವು. **ಜನ್ನ, ಮಂಗರಸ** ಕವಿಗಳು ಹೇಳುವ '**ಸಾರಮಾರಿ**' ಎಂಬ ಆಯುಧ-ವಿಶೇಷವು, ಹೀಗೆ ಕಟ್ಟಿದ ಸಾರಗಳನ್ನೆಲ್ಲ ಒಮ್ಮೆಲೆ ನಾಶಮಾಡುವಂತಹ ದಾಗಿದ್ದಿತೇನೊ !

## ಅಗಳನ್ನು ದಾಟುವ ಬೇರೆ ಸಾಧನಗಳು

ಗೆಗ್ಗ, (ಗಿಗ್ಗಿ ಇರಬಹುದೇನು?) **ನಡೆಚಪ್ಪರ** (ಸ್ಕೌಟುಗಳು ತಮ್ಮ ಕೈಯಲ್ಲಿಯ ದೊಣ್ಣೆ-ಹಗ್ಗಗಳಿಂದ ಅಣಿಗೊಳಿಸುವಂತಹ ಹಂದರದ ಸೇತುವೆ), **ವೀರಸೇತು** (ಯುದ್ಧದಲ್ಲಿ ಸತ್ತ ವೀರರನ್ನು ಅಗಳಿನಲ್ಲಿ ಹಾಕಿ ರಚಿಸುತ್ತಿರಬಹುದೆ?), ಇವಲ್ಲದೆ '**ಪುಲ್ಲೊರೆ**' '**ಸದೆಸಟ್ಟು**' '**ಕೊರಡು**' **ಮಣ್ಣು-ಕಲ್ಲು**' ಗಳಿಂದ ಅಗಳನ್ನು ತುಂಬಿ, ನೆಲಸಮ ನಾಗಿಯೂ ಮಾಡುತ್ತಿದ್ದರು.

## ಶತ್ರುಗಳ ಮೈಮೇಲೆ ಉಗ್ಗುವ ಪದಾರ್ಥಗಳು

**ಸಜ್ಜಿ** (ಹಿಟ್ಟನ್ನು ಕುದಿಸಿ ಮಾಡಿದ ಅಂಟು), **ಕಾಸುವಂಬಲಿ, ಬಿಸಿಯೆಣ್ಣೆ, ಸಾಸಿವೆಯ ಬಿಸಿಗದಡು, ಬಿಸಿಯ ಮೇಣ, ಕುದಿಯುವ ಸುಣ್ಣ, ಹುರಿಮಳಲು ಹುಲ್ಲಕಿಚ್ಚು, ಬೇಳುವೆಗಳ ಭಸ್ಮ** (ಮಂಕು ಬೂದಿ), **ವಿಷದ ಜೀರ್ಕೊಳವೆ.**

## ಹಗ್ಗದಿಂದ ಮಾಡಿದ ಆಯುಧಗಳು

ಪಾಶ, ಬೀಸುವಲೆ, ಜೊತ್ತಿಗೆ, ಬೀರ್ವಗ್ಗ, ಕವಣೆ, ಗಾಳ, ನೂಲೇಣಿ-

## ಮರದ ಆಯುಧಗಳು

ಬೇರ್ಕೆ, ಬಿರಿಕೊರಡು, ಕೈಗುದಿಗೆ, ಒಳರುಗುದಿಗೆ, ನೆಲಗುಮ್ಮ ಮುದ್ಗರ, ಮುಸಲ, ಕವೆಗೋಲು, ದಸಿ ( ಗೂಟ ), ಅಡ್ಡವಲಗೆ, ಬಲ್ದೊಲೆ, ಸಾಜುರ್ಗಂದೊಲೆ, ತೂಗುದೊಲೆ, ನಿಚ್ಚಣಿಕೆ.

## ಕಲ್ಲುಗಳ ಉಪಯೋಗ

ಮೊನೆಗಲ್ಲು, ಗುಂಡುಕಲ್ಲು, ದಸುಗುಂಡು ( ಮುಳ್ಳುಮುಳ್ಳಾಗಿರುವ ಕಲ್ಲು ) ಒಡ್ಡುಗಲ್ಲು, ಎತ್ತುಗಲ್ಲು, ಏರುಗಲ್ಲು, ಅರೆಗಲ್ಲು, ಕವಣೆಗಲ್ಲು.

## ಬೇರೆ ಆಯುಧಗಳು

ಬಿಲ್ಲು, ಅಂಬು, ಶೂಲ, ಅಡ್ಡಾಯುಧ ( ಕಲ್ಲುಗಳನ್ನು ಒಡೆಯುವ ಆಯುಧ ) ಗರಗಸ, ಕೀಲಾಯುಧ, ಜವದಾಡೆ, ಕತ್ತಳಿಕೆ, ಕೊಡಲಿ, ಗದೆ, ಕತ್ತರಿ, ಹಾರೆ, ತಿರುಗಣೆ, ಗಂಡಗತ್ತರಿ, ಗುದ್ದಲಿ.

## ಬದ್ದರ

ಇದನ್ನು ಕುರಿತು ತುಂಬ ಚರ್ಚಿಸಬೇಕಾಗಿದೆ. ಇದುವರೆಗೆ ಇದರ ಅರ್ಥವನ್ನು ಹೇಳುವವರೆಲ್ಲರೂ ಇದು 'ಭದ್ರ' ಎಂಬ ಸಂಸ್ಕೃತದ ಅಪ-ಭ್ರಂಶರೂಪವೆಂದೂ 'ಬದ್ದರ' ಎಂದರೆ 'ಆನೆ' ಎಂದೊ 'ಎತ್ತು' ಎಂದೊ ಅರ್ಥವಾಗುವುದೆಂದೂ ಹೇಳಿರುವರು. ಆದರೆ ಹನ್ನೆರಡನೆಯ ಶತಮಾನದಿಂದ ಹದಿನೇಳನೆಯ ಶತಮಾನದ ವರೆಗೂ ಬೇರೆ ಬೇರೆ ಕಾವ್ಯಗಳಲ್ಲಿ ಈ 'ಬದ್ದರ' ವನ್ನು ಬಳಸಲಾದ ಸಂದರ್ಭಗಳನ್ನು ನೋಡಿದರೆ, ಈ ಶಬ್ದದ ಅರ್ಥ ಬರಿಯ '**ಆನೆ**' ಇಲ್ಲವೆ '**ಎತ್ತು**' ಎಂದು ಆಗಲಾರದು. **ಅಗ್ಗಳನು** ( ೧೨ನೆಯ ಶತಮಾನ ) 'ಕೊತ್ತಳದ ಅಂಬುಗಂಡಿಯಿಂ ಪಾಯ್ವ ಕೂರ್ಗಣಿಗೆ **ಬದ್ದರ**ವೊಡ್ಡಿಪ' ಎಂದು ಹೇಳಿದ್ದಾನೆ. 'ಬದ್ದರ' ವು ಆನೆಯೋ ಎತ್ತೋ ಆಗಿದ್ದಲ್ಲಿ, ಕೂರ್ಗಣೆಯ ಮೊನೆಗಳಿಗೆ ಅವುಗಳನ್ನು

ಒಡ್ಡುವುದರಿಂದ ಪ್ರಯೋಜನವೇನು ? **ಜನ್ನ ಕವಿಯು** (೧೩ನೆಯ ಶತಮಾನ) '.. ಸಾಚರ್ಯಂದೊಲೆ, ವೀರಸೇತು, ನಡೆಸಾರಂ, **ಬದ್ದರಂ,** ಗೆಗ್ಗೆ..' ಎಂದು ಯುದ್ಧೋಪಕರಣಗಳ ಪಟ್ಟಿಯಲ್ಲಿ ಅದನ್ನು ಹೇಳುತ್ತಾನೆ. **ಮಂಗರಸನು** (೧೫ನೆಯ ಶತಮಾನ) 'ಕೋಂಟೆಯಾಳು ತಲೆಯೆತ್ತ ಲೊಡನೆ **ಬದ್ದರ**ದ ಮರೆಯೊಳಿದ್ದ ಬಿಲ್ಲಾಳ್ಗಳೆಲ್ಲ....' ಎಂದೂ, '**ಬದ್ದರ** ಗಳೊಳಗಡಗಿ ಗುದ್ದಲಿ ಹಾರೆಯಿಂದಗೆವ ರಭಸಕೆ....' ಎಂದೂ ಹೇಳಿರುವನು. ಇಲ್ಲಿ '**ಬದ್ದರದ ಮರೆಯೊಳಿದ್ದ**' '**ಬದ್ದರಗಳೊಳಗಡಗಿ**' ಎಂದು ಹೇಳಿರುವುದರಿಂದಲೂ '**ಬದ್ದರ**'ವೆಂದರೆ ಆನೆ ಅಥವಾ ಎತ್ತು ಅಲ್ಲವೆಂಬ ಮಾತು ತಾನೆ ಸಿದ್ಧವಾಗುತ್ತದೆ. ವಿರೂಪಾಕ್ಷ ಪಂಡಿತನು (೧೬ನೆಯ ಶತಮಾನ) '**ಬದ್ದರ**ದ ಬಂಡಿವಿಂಡೈದಿದುವು' ಎಂದೂ 'ಬಲಿದ **ಬದ್ದ**ರಗಳಂ ಮುರೆಗೊಂಡರ್' ಎಂದೂ ಹೇಳಿರುವನು. ಇಲ್ಲಿ 'ಬದ್ದರದ ಬಂಡಿವಿಂಡು' ಎಂಬುದನ್ನು ನೋಡಿ, ಬದ್ದರಕ್ಕೆ 'ಎತ್ತು' ಎಂಬ ಅರ್ಥವನ್ನು ಕಲ್ಪಿಸಬೇಕೇನೋ ಎಂದು ಎನಿಸುವುದು. ಆದರೆ ಮತ್ತೊಂದೆಡೆಯಲ್ಲಿ 'ಬಲಿದ (ಕುಂಬಿಯುಂ ಬಲಿ=ಗೋಡೆಕಟ್ಟು) ಬದ್ದರ' ಎಂದರೆ 'ಕಟ್ಟಿ ಅಣಿಗೊಳಿಸಿದ ಬದ್ದರ' ಎಂಬ ಮಾತು ಬಂದು, ಆ ಎನಿಸಿಕೆಗೆ ತಡೆಹಾಕುವುದು. ಹಾಗಾದರೆ ಬದ್ದರವೆಂದರೆ ಏನು? ಅದರ ಸ್ವರೂಪ ಎಂತಹದಾಗಿರಬಹುದು ?

'ಬದ್ದರ' ಎಂಬುದು 'ಭದ್ರ' ಎಂಬುದರ ಅಪಭ್ರಂಶವೆಂಬುದನ್ನು ನಾನೂ ಒಪ್ಪುತ್ತೇನೆ. ಆದರೆ ಈ 'ಭದ್ರ' ಕ್ಕೆ ಆನೆಯೆಂದೊ ಎತ್ತೆಂದೊ ಅರ್ಥವನ್ನು ಮಾಡುವುದಿಲ್ಲ ನಾನು. ನಮ್ಮ ಭಾಷಾಸಂಪ್ರದಾಯದಲ್ಲಿ 'ಇದನ್ನು **ಭದ್ರ**ವಾಗಿ ತೆಗೆದುಕೊಂಡು ಹೋಗು !' 'ಈ ರೂಪಾಯಿಗಳನ್ನು ಪೆಟ್ಟಿಗೆಯಲ್ಲಿ **ಭದ್ರ**ವಾಗಿ ಇಡು' ಎನ್ನುವ ರೂಢಿಯಿದೆಯಲ್ಲವೆ? ಈ ಸಂಪ್ರದಾಯದಲ್ಲಿಯ '**ಭದ್ರ**' ಎಂಬುದು 'ಸುರಕ್ಷಿತ' ಎಂಬ ಅರ್ಥವನ್ನು ಕೊಡುವುದು. ಕೋಟೆಗಾಳೆಗದಲ್ಲಿಯ '**ಬದ್ದರ**' ಗಳು ಈ 'ಭದ್ರ' ಎಂಬುದರ ವಿಕೃತರೂಪವಾಗಿವೆ. ಕೋಟೆಯ ಮೇಲಿನಿಂದ ಬೀಳುವ ಬೇರೆ ಬೇರೆ ಆಯುಧಗಳ ಆಘಾತಗಳನ್ನು ತಡೆಯುವುದಕ್ಕೆ ವ್ಯಕ್ತಿಗೆ '**ತಲೆವರಿಗೆ** (ತಲೆಯ ಹರಿಗೆ=ಢಾಲು)' ಇದ್ದಂತೆ, ಸಮೂಹಕ್ಕೆ 'ಬದ್ದರ' ವು ಸಂರಕ್ಷಣೆಯ ಸಾಧನವಾಗಿದ್ದಿತು. ಇದರ ಮರೆಯಲ್ಲಿ ನಿಂತು ಕೋಟೆಯನ್ನು ಅಗೆದು ಕೆಡಹುವ ಕೆಲಸವನ್ನು ಶತ್ರುಗಳು ಮಾಡುತ್ತಿದ್ದರು. ಮೇಲಿನವರ ಸಾಧನಗಳನ್ನು ತೀರಿಸುವುದಕ್ಕಾಗಿ ಆಗಾಗ ಹೊರಕ್ಕೆ ಬಿದ್ದಂತೆ ತೋರಿಸಿ,

ಮತ್ತೆ ಮತ್ತೆ 'ಬದ್ದರ' ದ ಮರೆಗಳಲ್ಲಿ ಅಡಗಿಕೊಳ್ಳುತ್ತಿದ್ದರು. **ರೆವರೆಂಡ್ ಕಿಟೆಲ್** ಅವರು ತಮ್ಮ ಕೋಶದಲ್ಲಿ '**ಬದ್ದರ** ಎಂದರೆ **ಆನೆ** ಅಥವಾ **ಎತ್ತು**' ಎಂಬುದಾಗಿ ಬರೆದಿರುವರು. ಹೆಚ್ಚಿನ ವಿಚಾರವಾವುದನ್ನೂ ಮಾಡದೆ ಇದುವರೆಗೂ ನಮ್ಮಲ್ಲಿಯ ಪಂಡಿತವರ್ಗವು ರೆ. ಕಿಟೆಲ್ ಅವರನ್ನು ಅನು-ಸರಿಸಿಕೊಂಡು ಬಂದುಬಿಟ್ಟಿದೆ. 'ಡೆಂಕಣಿ' ಯ ವಿಚಾರವಾದರೂ ಹೀಗೆಯೆ ಆಗಿದೆ. ಸಂಸ್ಕೃತಿವಿಚ್ಛಿತ್ತಿಯ ಮೂಲಕ ಹೀಗಾಗುವುದು ಸಹಜವೆ

## ಸಂರಕ್ಷಕ ಸಾಧನಗಳು

ಹರಿಗೆ, ತಲೆವರಿಗೆ, ಮೈಜೋಡು, ಜೋಡುಸವಗ, ಕುಪ್ಪಸ, ಸೀಸಕ ತೋಳಪಾವುಡೆ.

## ಬೆಳಕಿನ ಸಾಧನಗಳು

ಹುಲ್ಲದೊಂದೆ, ಪೆರ್ಜೊಡರು, ಪಂಜು, ದೀವಟಿಗೆ.

## ರಣವಾದ್ಯಗಳು

ಪಱೆ (ಹರೆ), ಭೇರಿ, ದುಂದುಭಿ, ಕೋಂಟೆವರೆ, ಹೆಬ್ಬರೆ, ಢಕ್ಕೆ. ಮೃದಂಗ, ಡಮಾಮಿ, ಚಂಬಕ, ಡವುಡೆ, ಡೋಳು, ಬುರುಗು, ತಂಬಟೆ, ನಿಸ್ಸಾಳ (ಣ), ಸಪಿರಿ, ಮುವುರಿಯ, ಕಹಳೆ, ಕೊಂಬು, ಬೊಗ್ಗುಗಹಳೆ, ಹೆಗ್ಗಾಳೆ, ಜಾವಗಹಳೆ (ಬ್ಯುಗಲ್).

## ಸನ್ನಾಹವಾಚಕ ಶಬ್ದ

**ಗುಳ** (ಆನೆಯ ಸನ್ನಾಹ ಸಾಮಗ್ರಿ), **ಪಲ್ಲಣ** (ಕುದುರೆಯ ಸನ್ನಾಹ ಸಾಮಗ್ರಿ) **ಸಂಜೋಗ** (ಸೈನಿಕರ ಸನ್ನಾಹಸಾಮಗ್ರಿ)

## ನಡೆಗೋಂಟೆ, ಪಡಿಗೋಂಟೆ

ದಾಳಿಯಿಕ್ಕುವುದಕ್ಕೆ ಹೊರಟ ಸೈನ್ಯದ ಸಂರಕ್ಷಣೆಗಾಗಿ ರಚಿಸಿದ ಕೃತ್ರಿಮದುರ್ಗಗಳಿವು. 'ಬದ್ದರದ ಬಂಡಿ' ಗಳಂತೆ ಈ 'ನಡೆಗೋಟೆ' 'ಪಡಿಗೋಟೆ' ಗಳನ್ನೂ ಗಾಲಿಗಳ ಸಹಾಯದಿಂದ ಸಾಗಿಸುತ್ತಿರಬಹುದು.

## ಪಡಿಯಟ್ಟಣೆ ಮೇರುವೆ

ಮುತ್ತಿಗೆಯಿಕ್ಕಿದ ಸೈನ್ಯದಲ್ಲಿಯ ಬೇರೆ ಬೇರೆ ಅಧಿಕಾರಿಗಳಿಗೆ, ನಿಂತು ಎಲ್ಲವನ್ನೂ ನೋಡಲಿಕ್ಕೆ ಅನುಕೂಲವಾಗಬೇಕೆಂದು ರಚಿಸಿದ ಕೃತ್ರಿಮ

ಗೋಪುರಗಳಿವು. ೧೭ನೆಯ ಶತಮಾನದಲ್ಲಿ ಮಾತ್ರ ಇವುಗಳ ಹೆಸರು ಮುಂದೆ ಬಂದಿರುತ್ತದೆ.

## ಕೊನೆಯ ಮಾತು

ಸರಿ, ಆಯಿತು ! ಹದಿನೇಳನೆಯ ಶತಮಾನದ ಕೊನೆಯೊಂದಿಗೆ ಕನ್ನಡಿಗರ ಇದ್ದಬಿದ್ದ ವೈಭವದ ಕೊನೆಯೂ ಆಯಿತು. ಇಂತಹ ವೇಳೆಯಲ್ಲಿ ಕನ್ನಡಿಗರ ಕೋಟಿಗಾಳಿಗ ನಡೆಯಬೇಕೆಲ್ಲಿ? ಅದನ್ನು ವರ್ಣಿಸಬೇಕು ಯಾರು ? ಕೋಟಿಗಾಳಿಗವನ್ನು ಅರಿತ ಜನರೆ ಕಣ್ಣುಮರೆಯಾಗಲು ತೊಡಗಿದರು. ಕೋಟಿಗಾಳಿಗದ ಪರಂಪರೆಗೆ ವಿಚ್ಛಿತ್ತಿ ಬಂದು ಒದಗಿತು. ಎಂತಲೆ ಇಂದು ಆ ಕಾಳಿಗದ ಪರಿಭಾಷೆಗಳಿಗೆ ಸರಿಯಾದ ಅರ್ಥಗಳನ್ನು ಹೇಳುವವರಿಲ್ಲ. ನಮ್ಮ ಪ್ರಾಚೀನ ಸಾಹಿತ್ಯದ ಮುಖಾಂತರ ಹೆಸರಷ್ಟೆ ಗೊತ್ತಾಗುತ್ತಿರುವ ಕೋಟಿಗಾಳಿಗದ ಅನೇಕ ಶಸ್ತ್ರಾಸ್ತ್ರಗಳೂ, ಬೇರೆ ಯುದ್ಧೋಪಕರಣಗಳೂ, ವಿಶಿಷ್ಟ ರಣವಾದ್ಯಗಳೂ ಹೇಗೆ ಹೇಗೆ ಇರುತ್ತಿದ್ದುವೆಂಬುದನ್ನು ಇಂದು ತೋರಿಸಿಕೊಡುವವರಿಲ್ಲ. ಈ ಮಾತು ನಮ್ಮ ಸುಶಿಕ್ಷಿತ ತರುಣವರ್ಗಕ್ಕೆ ಗೊತ್ತಾಗಿ, ಕೋಟಿಗಾಳಿಗದ ವಿಚಾರದಲ್ಲಿ ಇನ್ನೂ ತಿಳಿಯದಿರುವ ಅನೇಕ ವಿಷಯಗಳು ನಮಗೆ ತಿಳಿಯುವಂತೆ, ಅವರು ಈ ದಾರಿಯಲ್ಲಿ ಕೆಲಸಮಾಡಬೇಕೆಂಬ ಅಪೇಕ್ಷೆಯಿಂದ, ನಾನು ನನ್ನ ಅಭ್ಯಾಸದಲ್ಲಿ ಕಂಡ ಕೆಲವು ಸಂಗತಿಗಳನ್ನು—ಒಂದು ಬಗೆಯಲ್ಲಿ—ಇಲ್ಲಿ ಕೂಡಿಸಿ ಇರಿಸಿರುವೆನು. ಕನ್ನಡಕ್ಕೆ ಇದರಿಂದೇನಾದರೂ ಪ್ರಯೋಜನವಾದರೆ ತುಂಬ ಸಂತೋಷಪಡುವೆನು.

**ಜಯ ಕರ್ಣಾಟಕ ದೇವಿ !**

# ೨

# ಕನಕದಾಸರು ಕಂಡ ವಿಜಯನಗರ

ನ ಲ್ಲೆ :—

" ವಾಣಿಯು ಧವನೆಂಬ ವ್ಯವಹಾರಿ ಪಟ್ಟಿಯ
ಗೋಣಿಯೋಳ್ ತುಂಬಿದ ರತ್ನ
ಓಣಿಯೊಳ್ ಚೆಲ್ಲಿದಂತಿದೆ ನಿನ್ನ ಕೃತಿಯೆಂಬ
ಮಾಣಿಕ ಮನ್ಮನೋನಾಥ | "

ಕ ಬ್ಬಿ ಗ :—

" ನಾಡೊಳಗುಳ್ಳ ಜಾಣರು ಜಾಣೆಯರೊಡ-
ನಾಡುವ ಸವಿಮಾತುಗಳ
ಪಾಡುಗಬ್ಬವ ಪರುಠವಿಸಿದ ಬಗೆಯ ನೀ-
ನೋಡು ಮಾನಿನಿ ಮುಂದೆ ಮುಂದೆ ! "

—ಮೋಹನತರಂಗಿಣಿ

# ಸಂದರ್ಭಗ್ರಂಥಗಳು


| | | |
|---|---|---|
| ಮೋಹನತರಂಗಿಣಿ | | ( ಕನಕದಾಸ ವಿರಚಿತ ) |
| ನಳಚರಿತ್ರೆ | | ( ,, ) |
| ಹರಿಭಕ್ತಿಸಾರ | | ( ,, ) |
| ಕನಕದಾಸರ ಕೀರ್ತನೆಗಳು | ಭಾಗ ೧ | ( ಉಡುಪಿಯ ಪಾವಂಜೆ ಗುರುರಾಯರ ಪ್ರಕಟನೆ ) |
| ಪುರಂದರದಾಸರ ಕೀರ್ತನೆಗಳು | ಭಾಗ ೧ | ( ಶ್ರೀ. ಪಾವಂಜೆಯವರ ಪ್ರಕಟನೆ ) |
| ಕನ್ನಡ ಕವಿಚರಿತೆ— | ಭಾಗ ೧ | (ಪ್ರಾ. ವಿ. ವಿ. ಆರ್. ನರಸಿಂಹಾಚಾರ್ಯ) |
| ,, | ಭಾಗ ೨ | ( ,, ) |
| ಕರ್ಣಾಟಕ ಭಕ್ತವಿಜಯ | ಭಾಗ ೧ | ( ಶ್ರೀ. ಬೇಲೂರ ಕೇಶವದಾಸ ಕೃತ ) |
| ವಿಜಯನಗರ | | ( ಶ್ರೀ. ಪಾಂ. ಭೀ. ದೇಸಾಯಿಯವರು ಬರೆದುದು |
| ಜಗನ್ನಾಥ ವಿಜಯ | | ( ರುದ್ರಭಟ್ಟ ಕೃತ; ಮೈಸೂರಿನ ಓರಿಯೆಂಟಲ್ ಲಾಯಬ್ರರಿಯವರ ಪ್ರಕಟನೆ ). |
| A Forgotten Empire | | ( ಆರ್. ಸಿವೆಲ್ ವಿರಚಿತ ) |


ಇವುಗಳಲ್ಲದೆ ಕನಕದಾಸರಿಗೆ ಸಂಬಂಧಿಸಿದ ಪರಂಪರೆಯ ಲೋಕಕಥೆಗಳನ್ನೂ ಇದಕ್ಕೆ ಉಪಯೋಗಿಸಿಕೊಳ್ಳಲಾಗಿದೆ.

# ಕನಕದಾಸರು ಕಂಡ ವಿಜಯನಗರ

೧. ಕನ್ನಡನಾಡಿನಲ್ಲಿ ಆಗಿಹೋದ ವೈಷ್ಣವದಾಸರಲ್ಲಿ **ಕನಕದಾಸರ** ವ್ಯಕ್ತಿತ್ವವು ಅನೇಕ ವೈಶಿಷ್ಟ್ಯಗಳಿಂದ ತುಂಬಿನಿಂತಿರುವುದು. ಇವರು ಬರೆದ ಹಾಡುಗಳ ರೀತಿ-ಶೈಲಿಗಳೆ ಅದೊಂದು ಬಗೆ. ಮಿಕ್ಕ ದಾಸರು ರಚಿಸಿರುವಂತೆ **ಸುಳಾದಿ, ಉಗಾಭೋಗ, ಗುಂಡಕ್ರಿ**ಗಳನ್ನು ಇವರು ರಚಿಸಿಲ್ಲ. ಸಮಾಜದಲ್ಲಿಯ ಕುಂದು-ಕೊರತೆಗಳೆ ಇವರ ಅನೇಕ ಹಾಡು ಗಳಿಗೆ ವಿಷಯಗಳನ್ನು ಒದಗಿಸಿಕೊಟ್ಟಿವೆ. ಭಕ್ತಕವಿಗಳಾಗಿ ಕೀರ್ತನೆ ಗಳನ್ನು ರಚಿಸಿದಂತೆಯೆ, ಲೌಕಿಕಕವಿಗಳಾಗಿ ವರ್ಣಕಕಾವ್ಯಗಳನ್ನೂ ರಚಿಸಿದ್ದಾರೆ. ಮಿಕ್ಕ ದಾಸರ ಕೃತಿಗಳಲ್ಲಿ ರಾಶಿರಾಶಿಯಾಗಿ ಕಂಡುಬರುವ **'ಪಂಚಭೇದ' 'ದೇವತಾರತಮ್ಯ' 'ಜೀವತಾರತಮ್ಯ' 'ವಾಯು-ಜೀವೋತ್ತಮತ್ವ'** ಮುಂತಾದ ಮಾಧ್ವತತ್ತ್ವಜ್ಞಾನದ ಪ್ರಮೇಯ ಗಳನ್ನು, ಕನಕದಾಸರು ಚರ್ಚಿಸುವ ಇಲ್ಲವೆ ಪ್ರಸ್ತಾಪಿಸುವ ಗೊಡವೆಗೆ ಹೋದಂತಿಲ್ಲ.* ಮಾಧ್ವಸಾಂಪ್ರದಾಯಿಗಳಂತೆ ಮೂರು ಅವತಾರಗಳಲ್ಲಿ ಹನುಮಂತನನ್ನು ಹಾಡಿಹೊಗಳಿದುದು (ಹನುಮ, ಭೀಮ, ಮಧ್ವ), ಈ ದಾಸರ ಸಾಹಿತ್ಯದಲ್ಲಿ ಕಂಡುಬರುವುದಿಲ್ಲ.† ಮಾಧ್ವ ಸಾಂಪ್ರದಾಯಿ ಗಳಾದ ದಾಸರ ಪರಂಪರೆಯು, ಶ್ರುತಿ-ಸ್ಮೃತಿಯಲ್ಲಿ ಹೇಳಿದಂತೆ ವರ್ಣಾಶ್ರಮ ಧರ್ಮಗಳನ್ನು ಸಂರಕ್ಷಿಸಿಕೊಂಡು ಭಕ್ತರಾಬೇಕೆಂದು ಹೇಳಿದರೆ,

---

* 'ಕನಕದಾಸರ ಕೀರ್ತನೆಗಳು (ಭಾಗ ೧)' ಎಂಬ ಸಂಗ್ರಹದಲ್ಲಿ 'ಅಂಧಂ-ತಮಸು ಮತ್ತಿನ್ನಾರಿಗೆ ಗೋವಿಂದನ ನಿಂದಿಸುವವರಿಗೆ' ಎಂಬುದೊಂದು ಹಾಡಿದೆ. ಅದನ್ನು ಬೇರೆಯವರ ಅಂಕಿತದಲ್ಲಿಯೂ ಹಾಡುವುದನ್ನು ಕೇಳಿರುವೆನು. 'ಬಲ್ಲವರೆ ಬಲ್ಲರು ಎಲ್ಲರರಿಯರು' ಎಂಬ ಹಾಡಿನಲ್ಲಿ 'ದೇವತಾತಾರತಮ್ಯ'ದ ಛಾಯೆಯಿದೆ. 'ಅರಿತವರ್ಯ್ಯಾರಯ್ಯಾ ರಂಗಯ್ಯ ನಿನ್ನ' ಎಂಬುದರಲ್ಲಿ ಆನಂದತೀರ್ಥರ ಮತದ ಮೇಲ್ಮೆಯಿದೆ. ಆದರೆ ಈ ಪದ್ಯಗಳ ಭಾಷೆ ಕನಕದಾಸರದೇ ?— ಎನಿಸುವುದು.

† ಉಡುಪಿಯಲ್ಲಿ ಪ್ರಕಟವಾದ 'ಕನಕದಾಸರ ಕೀರ್ತನೆ' ಗಳಲ್ಲಿ 'ಪರಮ ಪದವೀವ ಗುರು ಮುಖ್ಯಪ್ರಾಣಾ!' ಎಂಬುದೊಂದೂ 'ಶರಣು ಶರಣು ದಶರಥ ರಾಮದೂತಗೆ' ಎಂಬುದೊಂದೂ ಹನಮಂತನ ಮೂರವತಾರಗಳ ಸ್ತುತಿಯನ್ನೊಳ ಗೊಂಡಿವೆ. ಭಾಷೆ-ಶೈಲಿಗಳನ್ನು ನೋಡಿದರೆ ಅವು ಕನಕದಾಸರವಲ್ಲವೆಂದು ಹೇಳ ಬೇಕಾಗುವುದು.

ಕನಕದಾಸರು 'ನಿಜವಾದ ಭಕ್ತನಿಗೆ ಯಾವ ವರ್ಣಾಶ್ರಮಧರ್ಮಗಳೂ ಜಾತಿಕುಲಗಳೂ ಏತಕ್ಕೆ ಬೇಕಾಗುವುವು?' ಎಂಬರ್ಥದಿಂದ ಹಲವು ಸಲ ಹಾಡಿರುವರು. ಇವೆಲ್ಲ ಕನಕದಾಸರ ಸಾಹಿತ್ಯದ ವೈಶಿಷ್ಟ್ಯಗಳಾದುವು. ಇನ್ನು ಅವರ ವೈಯಕ್ತಿಕ ಜೀವನವನ್ನು ಕುರಿತು ವಿಚಾರಮಾಡತೊಡಗಿದರೆ, ಅನೇಕ ತೊಡಕುಗಳಿಂದ ಕೂಡಿದುದರಿಂದ ಅದೂ ವೈಶಿಷ್ಟ್ಯಪೂರ್ಣವೆನಿಸುವುದು.

೨. ಕನಕದಾಸರು ಹುಟ್ಟಿದುದು **ಬೇಡರ** ಜಾತಿಯಲ್ಲಿ ಎಂದು ಕೆಲವು ಜನರು ಹೇಳುವರು. '**ಕುರುಬರೊ, ಅಂಡೆಗುರುಬರೊ**' ಎಂದು ಕೆಲವು ಜನರು ಹೇಳುವರು. ಇವರ ವಿಷಯಕವಾದ ದಂತಕಥೆಗಳನ್ನು ಕೇಳಿ; '**ಶ್ರೀವ್ಯಾಸರಾಯ**ರಲ್ಲಿಯೂ (ಸೋಸಲೆಮಠ) **ಶ್ರೀವಾದಿರಾಜ**ರಲ್ಲಿಯೂ (ಸೋದೆಮಠ) ಕನಕದಾಸರು ಶಿಷ್ಯತ್ವಮಾಡಿಕೊಂಡಿದ್ದು, ದ್ವೈತಮತಾನುವರ್ತಿಗಳಾಗಿಯೇ ಕೊನೆಯ ವರೆಗೆ ಬದುಕಿದರು' ಎಂಬ ಮಾತು ನೂರಕ್ಕೆ ನೂರು ಕಥೆಗಳಲ್ಲಿ ಗೊತ್ತಾಗುತ್ತದೆ. ಇಷ್ಟೇ ಅಲ್ಲ, ಕನಕದಾಸರಿಗೆ **ದಾಸದೀಕ್ಷೆ** ದೊರೆತುದೆ ಶ್ರೀವ್ಯಾಸರಾಯರಿಂದ ಎಂಬ ಪರಂಪರೆಯ ಕಥೆ ಮಾಧ್ವರಲ್ಲಿ ಇದೆ * ಕನಕದಾಸರಿಗೂ ಶ್ರೀವ್ಯಾಸರಾಯರಿಗೂ ಸಂಬಂಧಿಸಿದ ವಿಷಯುವನ್ನೊಳಗೊಂಡ ಕೀರ್ತನೆಯೊಂದು ಪುರಂದರದಾಸರ ಅಂಕಿತದಲ್ಲಿದ್ದುದು ಪ್ರಚಾರದಲ್ಲಿದೆ; ಅದಾವುದೆಂದರೆ:

"ಕನಕದಾಸನ ಮ್ಯಾಲೆ ದಯಮಾಡಲು–ವ್ಯಾಸ–
ಮುನಿಯ ಮಠದವರೆಲ್ಲ ದೂರಿಕೊಂಬುವರು || ಪಲ್ಲ ||

ತೀರ್ಥವನು ಕೊಡುವಾಗ ಕನಕನನು ಕರೆಯೆನಲು
ಧೂರ್ತರಾಗಿದ್ದ ವಿದ್ವಾಂಸರೆಲ್ಲ ||
ಸಾರ್ಥಕಾಯಿತು ಇವರ ಸಂನ್ಯಾಸಿತನವೆಲ್ಲ
ಪೂರ್ತ್ಯಾಯಿತೆಂತೆನಲು ಯತಿಯು ನಗುತಿದ್ದ || ೧ ||

ಮರುದಿನ ಅವರವರ ಪರಿಕ್ಷಿಸಬೇಕೆಂದು
ಕರೆದು ವಿದ್ವಾಂಸರನು ಕನಕ ಸಹಿತ |
ತ್ವರಿತದಲಿ ಕರದಲ್ಲಿ ಕದಲಿಫಲ ಕೊಟ್ಟು ಯಾ-
ರಿರದ ಸ್ಥಳದಲಿ ಮೆದ್ದು ಬನ್ನಿರೆನಲು || ೨ ||

* ಕರ್ಣಾಟಕ ಭಕ್ತವಿಜಯ ( ಭಾಗ ೧ ) ಪುಟ ೧೪೬, ೧೫೫, ೪೭೦ ನೋಡಿ.

ಊರ ಹೊರಗೆ ಹೋಗಿ ಬೇರೆ ಬೇರೆ ಕುಳಿತು
ತೋರದಲೆ ಎಲ್ಲರೂ ಮೆದ್ದು ಬರಲು ||
ತೋರಲಿಲ್ಲವು ಎನಗೆ ಏಕಾಂತ್ಸ್ಥಳವೆನುತ
ಸಾರಿ ಕದಳೀಫಲವ ತಂದು ಮುಂದಿಟ್ಟ. || ೩ ||

ಡಿಂಭದೊಳು ಶಬ್ದವಾಗಾದಿ ಶ್ರೋತ್ರಗಳಲ್ಲಿ
ಇಂಬಾಗಿ ತತ್ತ್ವೇಶರೆಲ್ಲ ತುಂಬಿಹರೊ! ||
ತಿಂಬುವದು ಹ್ಯಾಂಗೆನುತ ವ್ಯಾಸರಾಯರ ಕೇಳೆ
ಸಂಭ್ರಮದಲವರೆಲ್ಲ ಕುಳಿತು ಕೇಳಿದರು. || ೪ ||

ಕರದಲ್ಲಿ ಮೂರ್ತಿಯನು ಪಿಡಿದು ಕೇಳುತ್ತಿರಲು
ಅರಿಯದಜ್ಞಾನದಲಿ ಪೇಳುತಿರಲು ||
ತ್ವರದಿ ಕನಕನು ಬಂದು ವಾಸುದೇವನ ರೂಪ
ಪರಬೊಮ್ಮ ಪುರಂದರಾ ವಿಠಲನೆಂದು ಪೇಳಿದನು. || ೫ ||

ಇದರಲ್ಲಿ ಕನಕನಾಸರ ಎರಡು ಪವಾಡಗಳಿವೆ: ಮೊದಲನೆಯ ಬಾಳೆಯ ಹಣ್ಣಿನ ಕಥೆಯನ್ನು ಪವಾಡವೆಂದು ಹೇಳಲಿಕ್ಕೆ ಬಾರದಿದ್ದರೂ, ಎರಡನೆಯ 'ಮುಷ್ಟಿಪ್ರಶ್ನೆ' ಯಂತೂ ಹೇಳಿಕೇಳಿ ಪವಾಡ. ಈ ಪದ್ಯವು ಪುರಂದರ ದಾಸರದೇ ಆಗಿರಬಹುದೆಂದು ಗ್ರಹಿಸಿದರೂ, ಈ ಪದ್ಯದಿಂದ ಕನಕದಾಸರು ವ್ಯಾಸರಾಯರಿಗೆ ಶಿಷ್ಯರಾಗಿದ್ದರೆಂದೇನೂ ಸಿದ್ಧವಾಗುವುದಿಲ್ಲ.

ಸಾಂಪ್ರದಾಯಿಕ ದಂತಕಥೆಗಳೆ ಹಲವುಸಲ. ಕನಕದಾಸರು, ವ್ಯಾಸರಾಯರು, ವಾದಿರಾಜರು ಇವರಲ್ಲಿಯ ಸಂಬಂಧವನ್ನು ಒಂದ ಕ್ಕೊಂದು ವಿರೋಧರೀತಿಯಲ್ಲಿ ಹೇಳುತ್ತವೆ. ಇಬ್ಬರೂ ಗುರುಪೀಠದಲ್ಲಿ ಕುಳಿತವರಾದುದರಿಂದ, ಕನಕದಾಸರು ಅವರಿಬ್ಬರನ್ನೂ ಗೌರವಿಸುತ್ತಿರುವು ದೇನೋ ಸಹಜ ; ಆದರೆ ಆ ಇಬ್ಬರು ಸ್ವಾಮಿಗಳಿಗೂ ದೇವರನ್ನು ಸಾಕ್ಷಾ-ತ್ಕರಿಸಿ ತೋರಿಸಿದವರು ಕನಕದಾಸರು.*

---

* "ಮಗುವು ಕಾಣಿರಯ್ಯ ಮಾಯದ ಮಗುವು ಕಾಣಿರಯ್ಯ । ಸುಗುಣ ವಾದಿರಾಜರೆ" ಎಂಬುದೊಂದು ಕೀರ್ತನೆ ಕನಕದಾಸರದೆಂದು ಪ್ರಸಿದ್ಧವಾಗಿದೆ. ಇದರ ಅಂಕಿತ 'ವೇಲಾಪುರದ ಪತಿ ವೈಕುಂಠ ಕೇಶವ' ಎಂದಿರುವುದರಿಂದ, ಇದನ್ನು ಕನಕದಾಸರದೇ ಎಂದು ಒಪ್ಪುವಂತಿಲ್ಲ; ಒಪ್ಪಿದರೂ ಈ ಪದ್ಯದಿಂದ ವಾದಿರಾಜರ ಗುರುತ್ವವು ಸಿದ್ಧವಾಗುವಂತಿಲ್ಲ.

೩. ಈಗ ಸದ್ಯ ಕನಕದಾಸರಿಗೆ ಹೆಚ್ಚಿನ ಗೌರವದ ಸ್ಥಾನವಿರುವುದು-ಕರ್ಣಾಟಕದಲ್ಲಿ-ಮಾಧ್ವಸಾಂಪ್ರದಾಯಿಗಳಲ್ಲಿ ಮಾತ್ರವೆ. ಕನಕದಾಸರು '**ಯಮಧರ್ಮಾಂಶರು**' ಎಂಬ ಭಾವನೆ ಮಾಧ್ವಸಮಾಜದ ಭಾವುಕರಲ್ಲಿ ಈಗಲೂ ಇರುವುದು. ಆದರೆ ಮಾಧ್ವಸಮಾಜದಲ್ಲಿಯೂ ಕನಕದಾಸರು ಅಧಿಕೃತವಾದಸ್ಥಾನವನ್ನು ಪಡೆದಿಲ್ಲ.

**'ನಮಃ ಶ್ರೀಪಾದರಾಜಾಯ । ನಮಸ್ತೇ ವ್ಯಾಸಯೋಗಿನೇ**
**ನಮಃ ಪುರಂದರಾರ್ಯಾಯ । ವಿಜಯರಾಜಾಯತೇ ನಮಃ ॥**

ಎಂಬ ಈ ದಾಸಕೂಟದ ಪ್ರಾರ್ಥನೆಯ ಶ್ಲೋಕವನ್ನು ನೋಡಿದರೆ, ದಂತ-ಕಥೆಗಳಲ್ಲಿದ್ದಷ್ಟು ಕನಕದಾಸರ ಮಾಹಾತ್ಮ್ಯವು, ಈ ಶ್ಲೋಕನಿರ್ಮಿತಿಯ ಕಾಲದ ಜನರ ಭಾವನೆಯಲ್ಲಿ ಇರಲಿಲ್ಲವೆಂದು ತೋರುತ್ತದೆ. ಇದ್ದಿತಾದರೆ ಖಂಡಿತವಾಗಿ ಈ ಮಾಲೆಯಲ್ಲಿ ಅವರ ಹೆಸರಿನ ಹೂವೊಂದು ಸೇರಬೇಕಾಗಿದ್ದಿತು. ಸೇರದೆ ಇದ್ದುದಕ್ಕೆ ಕಾರಣವೇನಾದರೂ ಇರಬೇಕಲ್ಲವೆ? ಕನಕದಾಸರು ಶೂದ್ರಜಾತಿಯವರೆಂಬುದಿರಬಹುದೊ, ಹರಿದಾಸರಾದರೂ ಮಾಧ್ವಮತಾನುವರ್ತಿಗಳು ಅಲ್ಲವೆಂಬುದಿರಬಹುದೊ ಆ ಕಾರಣ? ಮಾಧ್ವ-ಮತಾನುವರ್ತಿಗಳವರು ಇರಲಿಲ್ಲವಾದರೆ, ಈ ದಂತಕಥೆಗಳು ಹುಟ್ಟಿಕೊಂಡು ಇದುವರೆಗೆ ಉಳಿದಿವೆಯೇಕೆ?

೪. ಸಾಂಪ್ರದಾಯಿಕ ದಂತಕಥೆಗಳೆಲ್ಲ ಕನಕದಾಸರನ್ನು ದ್ವೈತಿಗಳನ್ನಾಗಿ ಮಾಡುತ್ತಿವೆಯಲ್ಲವೆ? ಹಾಗಾದರೆ ಇದೇ '**ಕಾಗಿನೆಲೆಯ ಕನಕದಾಸೋತ್ತಮನು**'ನೇ ರಚಿಸಿದ '**ಮೋಹನ ತರಂಗಿಣಿ**' ಎಂಬ ಗ್ರಂಥದ ಪೀಠಿಕೆಯಲ್ಲಿ :

**ಶ್ರೀಮದ್ಗುರುರಾಯ ದುರಿತವಿಜೇಯ ದು-**
**ಷ್ಕಾಮ ವಿಚ್ಛೇದನಾಲ್ಹಾದ ॥**
**ತಾಮಸಗುಣನಾಶ, ಸಾತ್ತ್ವಿಕೋಲ್ಲಾಸ ಶ್ರೀ-**
**ರಾಮಾನುಜಮುನಿ ಶರಣು! ॥** (ಸಂಧಿ ೧, ಪದ್ಯ ೨.)

ಎಂದು ರಾಮಾನುಜಾಚಾರ್ಯರನ್ನು ನಿಸ್ಸಂದಿಗ್ಧವಾದ ಭಾಷೆಯಲ್ಲಿ ಸ್ತುತಿಸಿರುವನು. ಇಷ್ಟೇ ಅಲ್ಲ, ಮುಂದೆ ತುಂಬ ಅಹಂಕಾರಾಭಿಮಾನಗಳಿಂದ :

" ಅರ್ಕನೊಳಾಟವೆ ತಮಕೆ ? ತಾರ್ಕ್ಷ್ಯನ ಕೂಡೆ
ಕಾರ್ಕೋಟಕ ಮೇಳವಿಪುದೇ ?
ತರ್ಕಕೆ ರಾಮಾನುಜರೊಳು ವಾದಿ ಸಂ-
ಪರ್ಕನಿಲ್ವುದೆ ? ನಿಲ್ವುದರಿದು! " || (ಸಂಧಿ ೧, ಪದ್ಯ ೩.)

ಎಂಬುದಾಗಿ **ರಾಮಾನುಜ**ರನ್ನು ಕೊಂಡಾಡಿ ಕೊನೆಯುವನು. ಬಳಿಕ ತಾನು ಯಾರ ಬಳಿಯಲ್ಲಿ ಶಿಷ್ಯನಾಗಿ '**ರಾಮಾನುಜ ಸಮಾಮ್ನಾಯು**' ವನ್ನು ಅರಿತುಕೊಂಡನೊ ಆ **ತಾತಾಚಾರ್ಯ**ರನ್ನು ಹೀಗೆ ನಮಸ್ಕರಿಸಿರುವನು :

" ಈ ರೀತಿಯು ಪೆಂಪುವಡೆದ ಸದ್ಗುರಕರ-
ವಾರಿಜೋದ್ಭವ, ಶಿಷ್ಯಜನರ
ಪೇರಿಸಿ ನಾಲ್ವಗೆ ಫಲವೀವ ತಾತಾ-
ಚಾರಿಯರಡಿಗೆರಗುವೆನು ! " || (ಸಂಧಿ ೧, ಪದ್ಯ ೪)

ಪೀಠಿಕಾಸಂಧಿಯು ಬೇರೆಬೇರೆ ದೇವತೆಗಳ ಪ್ರಾರ್ಥನಾಪರಂಪರೆಯಲ್ಲಿ ಗರುಡ-ಶೇಷರುಗಳಿಗಿದ್ದ ಸ್ಥಾನ ವಾಯುವಿಗಿಲ್ಲ. ವಾಯುವು ಬರಿಯೆ ಅಷ್ಟದಿಕ್ಪಾಲಕರಲ್ಲಿ ಒಬ್ಬನಾಗಿ ದಾಸರಿಂದ ಪ್ರಾರ್ಥಿಸಿಕೊಂಡಿರುತ್ತಾನೆ. ನಡುವೆ ಒಂದು ಸ್ಥಳದಲ್ಲಿಯಂತೂ '**ರಾಮಾನುಜಾಗಮವ ಸ್ಮರಿಸಿ ಮನೋನು-ರಾಗವನಾಂತು ಕೃತಿಯು ಬಿತ್ತರಿಸುವೆ ( ಸಂಧಿ ೨೬ ಪದ್ಯ ೨ )**' ಎಂದು ಪ್ರತಿಜ್ಞೆ ಮಾಡಿದಂತೆ ಮಾತನಾಡಿರುತ್ತಾನೆ. ಅಲ್ಲದೆ ಈ ವರ್ಣಕಕಾವ್ಯದಲ್ಲಿ ಪೂಜೆ-ಗೊಳ್ಳಲಿಕ್ಕೂ ಪುರೋಹಿತರಾಗಿಯೂ ಬರುವ ಬ್ರಾಹ್ಮಣರೆಂದರೆ '**ತಳಿರು ಗಾಸೆಯು ಧೋತ್ರ, ಬಹಿರ್ವಾಸ, ಮೂಗಿನಿಂದಿಳಿವ ನಾಮಗಳ ವೈಷ್ಣವರು**' ಎಂದರೆ ರಾಮಾನುಜೀಯ ಮತಾನುವರ್ತಿಗಳಾದ ಬ್ರಾಹ್ಮಣರು. ಇವೆಲ್ಲ ಪ್ರತ್ಯಕ್ಷ ಪ್ರಮಾಣಗಳನ್ನು ನೋಡುತ್ತ ಹೋದರೆ, ತಳೆ-ಬುಡವು ಗಟ್ಟಿಯಿಲ್ಲದೆ ನಿಂತಿದ್ದ ಸಾಂಪ್ರದಾಯಿಕ ದಂತಕಥೆಗಳ ಮೇಲೆ ಚಿಕಿತ್ಸಕರ ವಿಶ್ವಾಸ ಹೇಗೆ ಕುಳಿತುಕೊಳ್ಳಬೇಕು ?

**೫.** ಕನಕದಾಸರ ವೈಶಿಷ್ಟ್ಯವಿನ್ನೊಂದೆಂದರೆ ಇವರಿಗೆ ಬರೆಯಲಿಕ್ಕೂ ಓದಲಿಕ್ಕೂ ಬರುತ್ತಿದ್ದಿಲ್ಲವೆಂಬುದು. ಜನವಾರ್ತೆಯೂ ಹೀಗೆಯೆ ಹೇಳುವುದು ; '**ಮೋಹನತರಂಗಿಣಿ**' ಯಲ್ಲಿ '**ಬರೆಹವ ತಿಳಿಯಬೇಡೆನುತೆನ್ನ**

**ನೊಸಲೊಳು ಬರೆದು ನಿರ್ಮಿಸಲು, ಆದರಿಂದ ಬರೆಹವನು ಅರಿಯೆ ನಾ, ಪದವಿಟ್ಟು ಕಡಿತದೊಳ್ ಬರೆದು ಮಾಡಿದ ಕೃತಿಯಲ್ಲ**' ಎಂಬುದಾಗಿ ತಾವೂ ಹೇಳಿರುವರು. ದಾಸರ ಕಾವ್ಯ, ಕೀರ್ತನೆಗಳ ವಿಶೇಷಗುಣಗಳನ್ನು ಅರಿತವ ರಾರೂ, ಕನಕದಾಸರು ಬರೆಹವನ್ನು ಅರಿತಿರದೆ ಇರಲಾರರೆಂದು ಖಂಡಿತವಾಗಿ ಹೇಳಬಹುದು. **ಕುಮಾರವ್ಯಾಸ**ನೂ ಹೀಗೆಯೆ 'ಹಲಗೆ ಬಳಪವ ಪಿಡಿಯ ದೊಂದಗ್ಗಳಿಕೆ....' ಮೊದಲಾಗಿ ಹೇಳಿರುವನು. ಬಹುಶಃ ಆ ಕಾಲದ ವರ್ಣಕ ಕವಿಗಳದಿದೊಂದು ಸಮಯವಾಗಿರಬೇಕು. ಆ ಸಮಯ ತಮ್ಮ ಗೌರವವನ್ನು ಹೆಚ್ಚಿಸುವುದೆಂಬ ಕಲ್ಪನೆ ಅವರಿಗಿರಬೇಕು.

**೬.** ಏವಂಗುಣವಿಶಿಷ್ಟವಾದ ಕನಕದಾಸರ ವ್ಯಕ್ತಿತ್ವವು, ಅವರನ್ನು ತಿಳಿದುಕೊಳ್ಳಬೇಕೆನ್ನುವವರನ್ನು ತುಂಬ ಗೊಂದಲದಲ್ಲಿ ಕೆಡಹುವುದು. ಕನಕದಾಸರ ಜೀವನದ ಈ ಚರ್ಚಾತ್ಮಕವಾದ ವಿಷಯವು ನಮಗೆ ಪ್ರಸ್ತುತ ವಲ್ಲ; ಅವರು ತಮ್ಮ ಪೂರ್ವವಯಸ್ಸಿನಲ್ಲಿ **ದಂಡನಾಯಕ**ರಾಗಿದ್ದುದ ರಿಂದ, ಆಗಾಗ ಅವರಿಗೆ **ವಿಜಯನಗರ**ಕ್ಕೆ ಹೋಗುವ ಸಂದರ್ಭವೊದಗು- ತ್ತಿರಬಹುದು. ಮುಂದೆ ದಾಸರಾದ ಮೇಲೆ ಅವರು —**ಶ್ರೀವ್ಯಾಸರಾಯ ರಿಂದ** ದೀಕ್ಷೆ ಪಡೆದಿರಲಿ, **ಶ್ರೀತಾತಾಚಾರ್ಯ**ರಿಂದ ದೀಕ್ಷೆ ಪಡೆದಿರಲಿ— **ವಿಜಯನಗರ**ದಲ್ಲಿಯೆ ಬಹುಕಾಲ ನೆಲಸಿರಬಹುದು. ಅಂತೂ ಅವರು ವಿಜಯನಗರವನ್ನು ಸಾಕಷ್ಟು ಚೆನ್ನಾಗಿ ಕಂಡುದು ಖಂಡಿತ! ಹಾಗಿದ್ದರೆ ಅವರು ತಾವು ಕಂಡ ವಿಜಯನಗರವನ್ನು ಕುರಿತು ಎಲ್ಲಿಯಾದರೂ ಏನನಾ ದರೂ ಹೇಳಿರುವರೆ? ಯಾವ ಕೃತಿಯಲ್ಲಾದರೂ ಶಬ್ದಚಿತ್ರ ತೆಗೆದಿರುವರೆ?

**೭.** ಕನಕದಾಸರು '**ಮೋಹನತರಂಗಿಣಿ**' '**ನಳಚರಿತ್ರೆ**' '**ರಾಮಧಾನ್ಯಚರಿತೆ**' ಎಂಬ ವರ್ಣಕಕಾವ್ಯಗಳನ್ನೂ, '**ಹರಿಭಕ್ತಿಸಾರ**' ಎಂಬ ಸ್ತೋತ್ರಶತಕವನ್ನೂ ಬರೆದಿರುವರು. 'ನೃಸಿಂಹಸ್ತವ' ಎಂಬ ಇನ್ನೊಂದು ಸ್ತೋತ್ರಗ್ರಂಥವನ್ನೂ ಇವರೇ ರಚಿಸಿರಬಹುದೆಂದು ಕವಿಚರಿತ ಕಾರರಾದ ದಿವಂಗತ ಆರ್. ನರಸಿಂಹಾರ್ಯರು ಹೇಳಿರುವರು. ಕಾವ್ಯ ಗಳಲ್ಲಿ '**ರಾಮಧಾನ್ಯಚರಿತೆ**' ಮುದ್ರಿತವಾಗಿಲ್ಲ; ಅದರ ಮೂಲಪ್ರತಿ ಯನ್ನು ಕಂಡವರೂ ಬಹಳ ಜನರಿಲ್ಲ. '**ನಳಚರಿತ್ರೆ**' ಕನ್ನಡನಾಡಿನಲ್ಲಿ ಪ್ರಚಾರದಲ್ಲಿದ್ದು ಬಹುಜನಪ್ರಿಯವಾಗಿದೆ. ಇದು ಕೇವಲ ನಳರಾಜನ ಕರುಣಾರಸಪೂರ್ಣವಾದ ಕತೆಯನ್ನೇ ಹೇಳಲು ಹೊರಟುದು. ಎಂತಲೆ ಪ್ರತಿ ಪದ್ಯಪದ್ಯಕ್ಕೂ ಕತೆ ಮುಂದೆ ಮುಂದೆ ಓಡಿ, ತನ್ನೊಡನೆ ವಾಚಕ

ರನ್ನೂ ಓಡಿಸಿಕೊಂಡು ಒಯ್ಯುತ್ತದೆ. ಎಂತಲೆ ವರ್ಣಕಕಾವ್ಯಗಳ ಜೀವಾಳ ವಾಗಿದ್ದ ವಾಸ್ತವಜೀವನದ ವರ್ಣನೆಗೆ ಈ ಪುಟ್ಟಕಾವ್ಯದಲ್ಲಿ ಅವಕಾಶವೆ ಇಲ್ಲ. ಇನ್ನುಳಿಯಿತು '**ಮೋಹನತರಂಗಿಣಿ**'. ಈ ಗ್ರಂಥ ಮುದ್ರಿತ ವಾಗಿದೆಯಾದರೂ ಸಾಂಗತ್ಯದಲ್ಲಿ ರಚಿತವಾದ ಈ **ಮಹಾಕಾವ್ಯವು**, ಸಾಂಪ್ರ- ದಾಯಿಕ ಪಂಡಿತರ ಮನ್ನಣೆಗೆ ಪಾತ್ರವಾಗಿಲ್ಲ. ಆದುದರಿಂದಲೆ ಇದರ ಹೊಗಳಿಕೆ ನಮ್ಮ ಸಾಹಿತ್ಯಪ್ರಪಂಚದಲ್ಲಿ ಅಷ್ಟೊಂದು ಬೆಳೆದುಬಂದಿಲ್ಲ. ಎಂತಲೆ ಇದನ್ನು ಓದಿನೋಡಬೇಕೆಂಬ ಬುದ್ಧಿ ಬಹುಜನರಿಗಾಗಿಲ್ಲ. ಈ ಕಾರಣಕ್ಕಾಗಿಯೆ ಬಹುಜನರಿಗೆ '**ಮೋಹನತರಂಗಿಣಿ**' ಯ ವಿಶೇಷ ಪರಿಚಯುವಿಲ್ಲ.

೮. '**ಮೋಹನತರಂಗಿಣಿ**' ಸಂಪೂರ್ಣವಾಗಿ **ದೇಸಿಯನ್ನನು**- ಸರಿಸಿ ಬರೆದ ಕಾವ್ಯ. ಪೀಠಿಕೆಯಲ್ಲಿ ಕವಿಯು :

> **"ನಾಡೊಳಗುಳ್ಳ ಜಾಣರು ಜಾಣೆಯರೊಡ-**
> **ನಾಡುವ ಸವಿಮಾತುಗಳ ।**
> **ಪಾಡುಗಬ್ಬವ ಪರುಠವಿಸಿದ ಬಗೆಯ ನೀ**
> **ನೋಡು ಮಾನಿನಿ ಮುಂದೆ ಮುಂದೆ!"**
>
> (ಸಂಧಿ ೧, ಪದ್ಯ ೩೫)

ಎಂದು ಹೇಳಿದ ಮಾತನ್ನು ಸಂಪೂರ್ಣವಾಗಿ ಸತ್ಯಮಾಡಿ ತೋರಿಸಿದ್ದಾನೆ. ಇದರಲ್ಲಿ ಬರುವ ಪಾತ್ರಗಳು ಪೌರಾಣಿಕ ಕಾಲದುವೂ ದೇವದಾನವಕುಲಕ್ಕೆ ಸೇರಿದುವೂ ಆಗಿದ್ದರೂ, ಅವೆಲ್ಲ ಮಾನವರ ರೂಪ-ಮನಸ್ಸು-ಹೃದಯಗಳನ್ನೆ ಅಳವಡಿಸಿಕೊಂಡು ಬಂದಿರುವುವು; ಬರಿಯೆ ಮಾನವರವೆಂದಿಷ್ಟೆ ಅಲ್ಲ, ಕನ್ನಡಿಗರ ರೂಪ-ವೇಷ-ಬುದ್ಧಿ-ಭಾವನೆ-ಮನಸ್ಸುಗಳನ್ನು ಅಳವಡಿಸಿ ಕೊಂಡು ನಿಂತಿರುವುವು, ಮೂಲಕಥೆಯಲ್ಲಿಯ ಕೆಲವೊಂದು ಅಸ್ವಾಭಾವಿಕ ಸಂಗತಿಗಳನ್ನು ಬಿಟ್ಟರೆ, ಕೃತಿಯ ರಚನೆ. ಸಂವರ್ಧನೆಗಳಲ್ಲಿ ಸ್ವಲ್ಪವೂ ಅಸ್ವಾಭಾವಿಕತನವಿಲ್ಲ. ಕನಕದಾಸರು ಕಂಡು ಬಣ್ಣಿಸಿದ ವಿಜಯನಗರ ವನ್ನು ನಾವು ಇದೇ ಗ್ರಂಥದಲ್ಲಿಯೆ ಕಾಣಬಹುದಾಗಿದೆ.

೯. ಕನಕದಾಸರು ಬದುಕಿ ಬಾಳಿದ ಕಾಲವೆಂದರೆ (೧೫೫೦) ಕರ್ನಾ- ಟಕದ ನಂದಲಿರುವ ವೈಭವಜ್ಯೋತಿ-ನಂದುವುದಕ್ಕಿಂತ ಮೊದಲು ದೀಪವು

ದೊಡ್ಡದಾಗುವಂತೆ—ಉಜ್ವಲವಾಗಿ ಬೆಳಗುತ್ತಿದ್ದ ಕಾಲ. ಹದಿನಾರನೆಯ ಶತಮಾನದ ಪೂರ್ವಾರ್ಧದಲ್ಲಿ ಕರ್ಣಾಟಕವು ಕೃಷ್ಣೆಯಿಂದ ಕನ್ಯಾಕುಮಾರಿಯ ವರೆಗೆ ತನ್ನ ಅಖಂಡಸಾಮ್ರಾಜ್ಯವನ್ನು ಕಟ್ಟಿ ವೈಭವದಿಂದ ಆಳುತ್ತಿದ್ದಿತು. ಜಗತ್ತಿನಲ್ಲಿಯ ಎಲ್ಲಭಾಗದ ಜನರನ್ನೂ ತನ್ನ ರಾಜಧಾನಿಯಾದ ವಿಜಯನಗರಕ್ಕೆ ಬರಮಾಡಿಕೊಂಡು, ತನ್ನ ಸಾಮ್ರಾಜ್ಯಸಂಪತ್ತನ್ನು ತೋರಿಸಿ, ಅವರನ್ನು ಬೆರಗುವಡಿಸುತ್ತಿದ್ದಿತು. **ಪೋರ್ತುಗಾಲ್, ಇಟಲಿ, ಇರಾಣ** ಮೊದಲಾದ ಪರದೇಶದ ಪ್ರವಾಸಿಕರು ಇಲ್ಲಿಗೆ ಬಂದು, ಕನ್ನಡ ನಾಡಿನ ರಾಜಧಾನಿಯನ್ನು ಕಣ್ಣಾರೆ ಕಂಡು, ಅದನ್ನು ಮನವಾರೆ ಹೊಗಳಿದುದು ಹೆಚ್ಚಾಗಿ ಇದೇ ಕಾಲದಲ್ಲಿಯೆ. **ಶ್ರೀಕೃಷ್ಣದೇವರಾಯ**ನ ಶೌರ್ಯ-ಪ್ರತಾಪಗಳು ವಿಜಯನಗರರಾಜ್ಯದ ಜನ್ಮಶತ್ರುಗಳನ್ನು ತಲೆಯೆತ್ತದಂತೆ ಮಾಡಿದ್ದುವು. ಸಾಮ್ರಾಜ್ಯಸಂರಕ್ಷಕ ಯುದ್ಧಗಳು ಕಡಿಮೆಯಾದುದರಿಂದ, ರಾಜ್ಯದಲ್ಲಿ ಶಾಂತತೆ ಹೆಚ್ಚಿತು; ಜನರು ಸುಖಸಮಾಧಾನಗಳಿಂದ ಇರಲು ತೊಡಗಿದರು. **'ಕೂಳು ಹೆಚ್ಚಿದ್ದಲ್ಲಿ ಕುಲಾಚಾರ ಹೆಚ್ಚುವುವು' 'ಅನ್ನವಿದ್ದಾಗಲೆ ತನ್ನನ್ನಾತೋಂ'** ಎಂಬ ದೇಸಿನುಡಿಯಂತೆ, ಆಗ ಧಾರ್ಮಿಕ ವಿಚಾರಗಳಿಗೆ ಕಳೆಯೇರೀತು; ಕಲಾಜೀವನಕ್ಕೆ ಪರಿಪುಷ್ಟಿ ದೊರೆಯಿತು. ರಾಜಧಾನಿಯಲ್ಲಿ ವೈದಿಕಧರ್ಮದ ಮತ-ಪಂಥಗಳಿಗೆಲ್ಲ ಆಶ್ರಯದೊರೆಯಿತು. ಎಂತಲೆ ಅಂದು ಎಂದರೆ ೧೬ನೆಯ ಶತಮಾನದ ಪೂರ್ವಾರ್ಧದಲ್ಲಿ, ವಿಜಯನಗರದಲ್ಲಿ ಎಷ್ಟೊಂದು ಜನ ಸಾಧು-ಸತ್ಪುರುಷರು ವಾಸಿಸುತ್ತಿದ್ದರು ? ಶ್ರೀಕೃಷ್ಣದೇವರಾಯನ ಕುಹುಯೋಗವನ್ನು ನಿವಾರಣೆ ಮಾಡಿ, ರಾಜಗುರುಗಳ ಸ್ಥಾನವನ್ನು ಪಡೆದ **ಶ್ರೀವ್ಯಾಸರಾಯ**ರು, ವಿಜಯನಗರವನ್ನೆ ತಮ್ಮ ನೆಲೆಯನ್ನಾಗಿ ಮಾಡಿಕೊಂಡಿದ್ದರು. ತರ್ಕ, ವೇದಾಂತ ಮೊದಲಾದ ಶಾಸ್ತ್ರಗಳಲ್ಲಿ ಅವರು ಪ್ರವೀಣರಾದುದರಿಂದ, ಶಿಷ್ಯಕೋಟಿ ಎಷ್ಟೋ ಅಲ್ಲಿ ಬಂದು ನೆಲಸಿರುತ್ತಿದ್ದಿತು. ಇವರಲ್ಲಿ **ಶ್ರೀವಾದಿರಾಜ**ರಂತಹ ಯೋಗ್ಯತೆಯವರೂ ಇರುತ್ತಿದ್ದರು. ಅಲ್ಲದೆ **ಶ್ರೀಪಾದರಾಯ**ರಿಂದ **ಶ್ರೀವ್ಯಾಸರಾಯ**ರು ದಾಸಕೂಟ ದೀಕ್ಷೆಯನ್ನು ಪಡೆದುದರಿಂದ, ಶಾಸ್ತ್ರ-ವ್ಯಾಸಂಗದ ಸಂಸ್ಕೃತಶಿಷ್ಯರಂತೆ ದಾಸಕೂಟದ ಕನ್ನಡ ಶಿಷ್ಯಸಮೂಹವೂ ಅಲ್ಲಿ ಬೆಳೆಯುತ್ತಿದ್ದಿತು. ಈ ಸಮೂಹದಲ್ಲಿ ಹೆಸರುಪಡೆದವರೆಂದರೆ **ಪುರಂದರದಾಸರು**. ದಂತಕಥೆಗಳನ್ನು ನಂಬುವುದಾದಲ್ಲಿ **ಕನಕದಾಸರೂ** ಅಹುದು. ರಾಮಾನುಜೀಯ ಸಂಪ್ರದಾಯದ ವಿದ್ವಾಂಸರಿಗಂತೂ ವಿಜಯನಗರದಲ್ಲಿ ಮೊದಲಿನಿಂದಲೂ ತುಂಬ ಪ್ರಾಶಸ್ತ್ಯವಿದ್ದಿತು. ರಾಜಪೌರೋಹಿತ್ಯ

ಮೊದಲಾದ ಸನ್ಮಾನದ ಧಾರ್ಮಿಕ ಸಂಸ್ಥೆಗಳೆಲ್ಲ ಅಂದು ರಾಮಾನು-
ಜೀಯ ಪಂಥದ ಬ್ರಾಹ್ಮಣರ ಅಧೀನದಲ್ಲಿಯೆ ಇದ್ದುವೆಂದು ನಿಸ್ಸಂದಿಗ್ಧವಾಗಿ ಹೇಳಬಹುದು. ಏಕೆಂದರೆ **ಸಂಗಮವಂಶ**ದ ಕೊನೆಯ ರಾಜನಾದ **೨ನೆಯ ವಿರೂಪಾಕ್ಷ**ನ ಕಾಲದಲ್ಲಿಯೆ, ಅರಮನೆಯಲ್ಲಿ ರಾಮಾನುಜೀಯರಿಗೆ ಪ್ರವೇಶ ದೊರೆಯಿತು. ಮುಂದೆ **ಸಾಳುವ**, **ತುಳುವ** ವಂಶದವರ ಕಾಲದಲ್ಲಿ ಅವರಿಗೆ ಹೆಚ್ಚಿನ ಪ್ರಾಶಸ್ತ್ಯದೊರೆಯಿತು. ತಮ್ಮ ಗುರುಗಳೆಂದು **ಕನಕದಾಸ**ರು ಹಾಡಿ ಹೊಗಳಿದ **ತಿರುಮಲೆ ತಾತಾಚಾರ್ಯ**ರು, ಆ ಕಾಲದಲ್ಲಿ ವಿಶಿಷ್ಟಾದ್ವೈತ ವೇದಾಂತದಲ್ಲಿ ವಿಶಾರದರು ; ಇವರು **ಅಳಿಯ ರಾಮರಾಯ**ನಿಗೆ ಎಂದರೆ **ಅರವೀಡುವಂಶ**ದವರಿಗೆ ಗುರುಸ್ಥಾನದಲ್ಲಿ ಇದ್ದವರು. ಇವರೂ ವಿಜಯ ನಗರದಲ್ಲಿಯೆ ಇರುತ್ತಿದ್ದರು. **ತುಳುವ**ವಂಶದ ರಾಜರ ಆಂಧ್ರಭಾಷೆಯ ಪ್ರೀತಿಯ ಮೂಲಕ, ತೆಲುಗುದೇಶದ ಪಂಡಿತರೂ, ಕವಿಗಳೂ ಅಲ್ಲಿ ಹಿಂಡು ಹಿಂಡಾಗಿ ಇದ್ದರು. ರಾಜ್ಯವೆ ಕನ್ನಡಿಗರದಾದುದರಿಂದ ಕನ್ನಡ 'ಕವಿ-ಗಮಕಿ-ವಾದಿ-ವಾಗ್ಮಿ' ಗಳಿಗೆ ಅಲ್ಲಿ ಕಡಿಮೆಯಿರಲಿಲ್ಲ. ಇಂತಹ ಸುಸಂಸ್ಕೃತ ವಾತಾವರಣದಲ್ಲಿ ಇದ್ದುದರಿಂದಲೆ ಇರಬಹುದು—ಬರೆಹಬಾರದ ಕನಕ-ದಾಸರು, ಬರೆಹಬಂದವರಿಗಿಂತ ಹೆಚ್ಚಿನ ರಸಿಕತೆಯಿಂದ—'**ಮೋಹನ ತರಂಗಿಣಿ**' ಯನ್ನು ಬರೆದಿದ್ದಾರೆ. ದೇಸಿಯನ್ನನುಸರಿಸಿದ ತಮ್ಮ ಕಾವ್ಯ ದಲ್ಲಿಯೂ ಸಂದರ್ಭೋಚಿತವಾಗಿ '**ಅಷ್ಟಾದಶವರ್ಣನೆ**' ಗಳನ್ನು ಕೂಡಿಸಿ, ದೇಸಿಯನ್ನು ಮಾರ್ಗಕ್ಕೆ ತಿರುಗಿಸಲು ಹವಣಿಸಿದ್ದಾರೆ.

೧೦. '**ಮೋಹನತರಂಗಿಣಿ**' ಕಾವ್ಯವು ಶೃಂಗಾರರಸಪ್ರಧಾನ ವಾದುದು. ವೀರರಸವೂ ವ್ಯಭಿಚಾರಿಯಾಗಿ ವರ್ಣಿತವಾಗಿದೆ. ಈ ಕಾವ್ಯದಲ್ಲಿ ಅಡಕವಾಗಿರುವ ವಿಷಯವೆಂದರೆ :

**"ಪೂಸರದಹನ, ಕಾಮೋತ್ಪತ್ತಿ, ವರಶಂಬರಾಸುರವಧೆ, ಕಂತುಸುತನ ಭೂಸುರಲೀಲೆ, ಬಾಣನಗೆದ್ದ ಜಯಲಕ್ಷ್ಮೀಶನ ಕೃತಿ. . . ."**

ಇದೆಲ್ಲವನ್ನು ಒಳಗೊಂಡಿರುವುದು. '**ಮೋಹನತರಂಗಿಣಿ**' ಎಂದಲ್ಲದೆ ಈ ಪ್ರಬಂಧಕ್ಕೆ '**ಶ್ರೀಕೃಷ್ಣಚರಿತೆ**' (ಸಂಧಿ ೧; ಪದ್ಯ ೩೯) ಎಂಬ ಇನ್ನೊಂದು ಹೆಸರೂ ಇದೆ. . ಲಕ್ಷಣಶಾಸ್ತ್ರಜ್ಞರ ಮತದಂತೆ, ಗ್ರಂಥವು ಯಾವನ ಚರಿತೆಯೊ ಅವನೆ ನಾಯಕನಾಗಿ ಇರುವನು. ಮಹಾಕಾವ್ಯದ ಲಕ್ಷಣ ಗಳಾದ ಅಷ್ಟಾದಶ ವರ್ಣನೆಗಳು, ಆ ಒಬ್ಬನೆ ನಾಯಕನ ವ್ಯಕ್ತಿತ್ವ ಪರಿಪುಷ್ಟಿ

ಗಾಗಿಯೆ ಆಳವಟ್ಟಿರುವುವು. ಆದರೆ '**ಮೋಹನತರಂಗಿಣಿ**' ಗೆ '**ಶ್ರೀಕೃಷ್ಣಚರಿತೆ**' ಎಂಬ ಹೆಸರಿದ್ದರೂ, ಲಕ್ಷಣಶಾಸ್ತ್ರದ ಒರೆಗಲ್ಲಿಗೆ ಹಚ್ಚಿನೋಡಿದರೆ ಈ ಕಾವ್ಯದ ನಾಯಕ **ಶ್ರೀಕೃಷ್ಣ**ನೊಬ್ಬನೆ ಅಲ್ಲವೆಂದು ಎನಿಸುವುದು. ಮೊದಲಿನಿಂದ '**ಅನಿರುದ್ಧ ಜನನ**' ದ ವರೆಗೆ **ಕಾಮನು** ನಾಯಕನಾಗಿ ತೋರುವನು ; ಮುಂದೆ **ಅನಿರುದ್ಧ**ನು ನಾಯಕನಾಗಿ ತೋರುವನು. ಶ್ರೀಕೃಷ್ಣನು ಕಾವ್ಯದ ಪ್ರಾರಂಭದಲ್ಲಿ ಕಾಮಜನಕನಾಗಿ ಬರುವನು; ಕಾವ್ಯದ ಕೊನೆಯಲ್ಲಿ ಅನಿರುದ್ಧನಿಗೆ ಸಹಾಯಕನಾಗಿ ಶೋಣಿತ ಪುರಕ್ಕೆ ಬಂದು, ಬಾಣಾಸುರನೊಂದಿಗೆ ಕಾಳಗವನ್ನಾಡಿ ಅವನನ್ನು ಜಯಿಸು ವನು. ನಡುವೆ ಒಂದೆರಡು ಸಲ ಅಮುಖ್ಯ ಸಂದರ್ಭದಲ್ಲಿ ನಮಗೆ '**ಕೃಷ್ಣ-ರಾಯ**'ನ ಮುಖದ ದರ್ಶನವಾಗುವುದು. ಕಾವ್ಯದ ಬೆಳೆವಣಿಗೆಯನ್ನು ನೋಡಿದರೆ ಪೂರ್ವಾರ್ಧ, **ರತಿ-ಮನ್ಮಥ**ರ ಕತೆಯಿಂದ ಎಂದರೆ '**ಪೂಸರದಹನ, ಕಾಮೋತ್ಪತ್ತಿ, ವರ ಶಂಬರಾಸುರ ವಧೆ**' ಯಿಂದ ಕೂಡಿದೆ; ಉತ್ತರಾರ್ಧವು, **ಉಷಾ-ಅನಿರುದ್ಧ**ರ ಕತೆಯಿಂದ ಎಂದರೆ '**ಕಂತುಸುತನ ಭಾಸುರಲೀಲೆ**' ಯಿಂದ ಕೂಡಿದೆ. ವಿಮರ್ಶಕರು ಹೇಳಬೇಕಾದರೆ 'ಎರಡು ಬೇರೆ ಬೇರೆ ಶೃಂಗಾರ ರಸಪ್ರಧಾನವಾದ ಕಥಾವಸ್ತುಗಳನ್ನು ಕೂಡಿಸಿ ಒಂದೆ ಗ್ರಂಥದಲ್ಲಿ ಹೆಣೆಯಲಾಗಿದೆ' ಎಂದು ಹೇಳಬಹುದು. ಕನಕದಾಸರು ಇವೆರಡೂ ಕತೆ ಗಳನ್ನು ಕೂಡಿಸಿ ಹೆಣೆಯುವುದಕ್ಕೆ. ಶ್ರೀಕೃಷ್ಣನನ್ನು ಸೂತ್ರಧಾರನನ್ನಾಗಿ ಮಾಡಿಕೊಂಡಿರುವರು. ಈ ಸೂತ್ರಧಾರಿತ್ವದ ಕಾರಣದಿಂದಲೆ '**ಕೃತಿಗೆ ಕರ್ತನು ಕಾಗಿನೆಲೆಯಾದಿ ಕೇಶವ**' ಎಂದು ಹೇಳಿರುವರು. '**ಚತುರಾಸ್ಯ ಬೊಮ್ಮ**'ನನ್ನು ಪ್ರಾರ್ಥಿಸುವಾಗ '**ನಿಮ್ಮಯ ಪಿತ ಕೃಷ್ಣರಾಯನ ಮಹಿಮೆಯ ಹೆಮ್ಮೆಯರಿದು ಕೀರ್ತಿಪೊಡೆ ನಮ್ಮ ಅಳವು ಅಲ್ಲ**' ಎಂದು ವಿನಯದಿಂದ ಕೈಯೂರಿರುವನು. ಒಳಗಿನ ವಿಷಯವನ್ನು ನೋಡಿದರೆ ಇದಕ್ಕಿದ್ದ '**ಕೃಷ್ಣಚರಿತೆ**' ಎಂಬ ಹೆಸರು ಎಳೆದು ತಂದು ಇಟ್ಟಂತಾಗಿದೆ ಯೆಂದು ಯಾರಾದರೂ ಹೇಳಬಹುದು. ಕನಕದಾಸರು ಇಲ್ಲಿ ಔಚಿತ್ಯವನ್ನು ಮೀರಿ ನಡೆದಿದ್ದಾರೆಯೆಂದು ಹೇಳಲಿಕ್ಕೂ ಹಿಂಜರಿಯದಿರಬಹುದು. ಹಾಗಾದರೆ ಈ ಔಚಿತ್ಯಭಂಗಕ್ಕೆ ಕಾರಣವಿಶೇಷವೇನಾದರೂ ಇರ ಬಹುದೇ ?

**೧೧.** ಕನಕದಾಸರು ಭಕ್ತಕವಿಗಳು ; ಅವರು ಶ್ರೀಹರಿಯ ಚರಿತ್ರೆ ಯನ್ನಲ್ಲದೆ ಇನ್ನೊಂದನ್ನು ಕಥಾವಸ್ತುವನ್ನಾಗಿ ಸ್ವೀಕರಿಸರು- ಎಂತಲೆ ತಮ್ಮ ಈ ಪೌರಾಣಿಕ ಕಥೆಗೆ ಶ್ರೀಕೃಷ್ಣನನ್ನೆ ನಾಯಕನನ್ನಾಗಿ ಮಾಡಿ-

ಕೊಂಡಿರುವರು ' ಎಂದು ಕೆಲವು ಜನರು ಕನಕದಾಸರ ಕೃತಿಯನ್ನು ಸಮರ್ಥಿಸಲು ಸಮಾಧಾನ ಹೇಳಬಹುದು; ಆದರೆ ' ಮೋಹನತರಂಗಿಣಿ ' ಯನ್ನು ಓದಿದವರಿಗೆ ಖಂಡಿತವಾಗಿ ಹೀಗೆ ಎನಿಸುವುದು :

" ಕನಕದಾಸರಿಗೆ ಶ್ರೀಕೃಷ್ಣಚರಿತ್ರೆಯನ್ನೆ ಪ್ರಬಂಧವನ್ನಾಗಿ ರಚಿಸಬೇಕಿದ್ದಲ್ಲಿ, ಈ ಕಾಮನ ಕಥೆಯನ್ನೂ ಕಾಮನ ಮಗನ ಕಥೆಯನ್ನೂ ಏತಕ್ಕೆ ಆರಿಸಬೇಕಾಗಿತ್ತು ? ಆರಿಸಿದರೂ ಆರಿಸಿದರು ; ಭಕ್ತಿಮಾರ್ಗಪ್ರಚಾರಕರಾದ ದಾಸರು ತಮ್ಮ ಕಾವ್ಯದಲ್ಲಿ ಬರಿಯೆ ಶೃಂಗಾರವನ್ನಲ್ಲ, ಉತ್ತಾನಶೃಂಗಾರ-ರಸವನ್ನು ಏತಕ್ಕೆ ಪ್ರಾಧಾನ್ಯವಾಗಿ ಇರಿಸಬೇಕಾಗಿತ್ತು? ಈ ಕಾವ್ಯವನ್ನು ಓದಿದವರಲ್ಲಿ ಒಬ್ಬನೂ ಎಂದೂ, ತಾಳ ತಂಬೂರಿಗಳನ್ನು ತೆಗೆದುಕೊಂಡು ದಾಸಯ್ಯನಾಗಿ ಹೊರಡಲಾರ ; ವಾಚಕನು ಬ್ರಹ್ಮಚಾರಿಯಾಗಿದ್ದರೆ ಹೊಸ ಹೆಣ್ಣಿನ ಕೈಯನ್ನು ಹಿಡಿಯಲು ಬಯಸಬಹುದು. ಸಂನ್ಯಾಸಿಯಾಗಿದ್ದರೆ ಮರಳಿ ಮನೆಯ ಕಡೆಗೆ ಮುಖತಿರುಗಿಸಬಹುದು. ಇಂತಹ **' ಶ್ರೀಕೃಷ್ಣ-ಚರಿತೆ '** ಯಿಂದ ದಾಸರು ತಮ್ಮ ಗುರಿಯನ್ನು ಹೇಗೆ ಸಾಧಿಸಿಕೊಳ್ಳಬೇಕೆಂದರು ? ಎಲ್ಲವೂ ಆಶ್ಚರ್ಯ ! "

**೧೨.** ಹಾಗಿದ್ದರೆ ಕನಕದಾಸರ ಈ ' ಶ್ರೀಕೃಷ್ಣಚರಿತೆ ' ಯ ರಚನೆಗೆ ಉಚಿತವಾದ ಬೇರೆಯ ಸಮಾಧಾನವೇನಾದರೂ ಇದೆಯೆ. .? ಇದೆ ; ಅದು ಕನಕದಾಸರ ಈ ಕೃತಿಯಲ್ಲಿ ಅಸ್ಪಷ್ಟವಾಗಿ ಮೂಡಿದೆ. ಕನ್ನಡ ಕವಿಗಳದೊಂದು ವಿಶಿಷ್ಟ ಪರಂಪರೆಯ ಬೆಳಕಿನಲ್ಲಿ ಅದನ್ನು ನೋಡಿದರೆ ಅದು ಸ್ಪಷ್ಟವಾಗಿ ಕಾಣುವಂತಿದೆ :

(i) ಮೊದಲನೆಯದಾಗಿ ಕನಕದಾಸರು ಆರಿಸಿದ ಕಥಾವಸ್ತು ಭಾಗವತ ಪುರಾಣದೊಳಗಿನದಾದರೂ ಅದು ಶೃಂಗಾರರಸಪೂರಿತವಾದ ಕಾಮನ ಕತೆ. ದಾಸರು ಅದನ್ನು ತಮ್ಮ ವರ್ಣಕದ ಧಾಟಿಯಿಂದಲೂ ದೇಸಿಯ ಜಾಣ್ನುಡಿಗಳಿಂದಲೂ ಆ ಶೃಂಗಾರರಸವನ್ನು ಇನ್ನಿಷ್ಟು ಉದ್ದೀಪನಗೊಳಿಸಿರುವರು. ಕಾವ್ಯಕ್ಕೆ ಉಪಯೋಗಿಸಿದ ವೃತ್ತ ಶುದ್ಧ ದೇಶೀಯ ವೃತ್ತ; ಕನ್ನಡದ ಜಾನಪದ ವೃತ್ತವಾದ ಸಾಂಗತ್ಯ. ಹೋಳಿಯ ಹುಣ್ಣಿಮೆಯಲ್ಲಿ ಹೇಳುವ ಕಾಮನ ಪದಗಳೆಲ್ಲ ಇದೇ ದೇಶೀಯ ಛಂದದಲ್ಲಿರುವುವು.

(ii) ಎರಡನೆಯದಾಗಿ ಇದು **' ಕೃಷ್ಣರಾಯನ ಚರಿತೆ '! ' ಕೃಷ್ಣ-ರಾಯನ ಮಹಿಮೆ '** ಯನ್ನು ಹೇಳುವುದಕ್ಕಾಗಿ ಹೊರಟುದು. ಪೀಠಿಕಾ-

ಸಂಧಿಯಲ್ಲಿ ಎಲ್ಲರಿಗಿಂತ ಮೊದಲು '**ಕಾಗಿನೆಲೆಯರಂಗ**'ನನ್ನು ಸ್ಮರಿಸಿಯಾದ ಮೇಲೆ, **ಶ್ರೀರಾಮಾನುಜ**ರನ್ನೂ **ತಾತಾಚಾರ್ಯ**ರನ್ನೂ ಸಮು-ಸ್ಕರಿಸುವರು; ತರುವಾಯ ಮುಂದಿನ ಎರಡು ಪದ್ಯಗಳಲ್ಲಿ '**ಕೃಷ್ಣ**' ನನ್ನು ಬೇಡಿಕೊಂಡಿರುವರು. ಅಲ್ಲದೆ ಕಾವ್ಯದಲ್ಲಿ ಉದ್ದಕ್ಕೂ—ಅಲ್ಲಲ್ಲಿ ಶ್ರೀಕೃಷ್ಣನ ಹೆಸರನ್ನು ಹೇಳಬೇಕಾದ ಸಂದರ್ಭ ಬಂದಾಗ— '**ಕೃಷ್ಣರಾಯ**' '**ದೇಶಾಧಿಪ ಕೃಷ್ಣರಾಯ**' '**ದೊರೆರಾಯ ಶ್ರೀಕೃಷ್ಣ**' ಎಂದು ಹಲವಾರು ಸಲ ಬಂದಿರುವುದು. ಕಾವ್ಯದಲ್ಲಿಯ ಬೇರೆ ಬೇರೆ ವರ್ಣನಾ ಪ್ರಸಂಗಗಳು, ಕನಕದಾಸರ ಸಮಕಾಲೀನವಾದ ರಾಜಕೀಯ ಸಾಮಾಜಿಕ ಸಂಸ್ಕೃತಿಗಳನ್ನೆ ಎತ್ತಿ ತೋರಿಸುವುವು. '**ಅಚ್ಯುತ**' ಎಂಬ ಹೆಸರನ್ನೂ-ಕಾವ್ಯನಾಯಕನನ್ನು ಕುರಿತು ಹೇಳುವಾಗ-ಅನೇಕಸಲ ಬಳಸಲಾಗಿದೆ.

(iii) ಮೂರನೆಯದೆಂದರೆ ಕನಕದಾಸರು ತಮ್ಮ ನಲ್ಲೆಗೆ ಈ ಕಾವ್ಯವನ್ನು ಬಣ್ಣಿಸಿ ಹೇಳಿರುವುದು. ಪ್ರತಿಯೊಂದು ಸಂಧಿಯ ಪ್ರಾರಂಭದಲ್ಲಿ ನಲ್ಲ-ನಲ್ಲೆಯರಿಬ್ಬರಲ್ಲಿಯೂ ತಪ್ಪದೆ ಮಾತುಗಳು ನಡೆಯುವುವು. ಆಗ ಕನಕದಾಸರು ಬೇರೆ ಬೇರೆ ಸಂಬೋಧನೆಗಳಿಂದ ತಮ್ಮ ನಲ್ಲೆಯನ್ನು ಕರೆದುದನ್ನು ನೋಡಿದರೆ ತಾಳ, ತಂಬೂರಿ, ತಿರುನಾಮಗಳಿಂದೊಡಗೂಡಿದ ಕನಕದಾಸರ ಚಿತ್ರವೇನೂ ನಮ್ಮ ಕಣ್ಣೆದುರು ಬಂದು ನಿಲ್ಲುವುದಿಲ್ಲ; ಶೃಂಗಾರವಿಲಾಸಿಯಾದ ರಸಿಕ ಕವಿಯೊಬ್ಬನು ಬಂದು ನಿಲ್ಲುವನು. ಆ ಸಂಬೋಧನೆಗಳ ನಾಲ್ಕಾರು ಮಾದರಿಗಳನ್ನಿಲ್ಲಿ ಕೊಡುವೆನು :

"**ಎಲೆ ಎನ್ನ ಕಣ್ಗೆ ಮಂಗಳವಪ್ಪ ಬಟ್ಟಬಲ್ಮೊಲೆಯ ಮಂಗಳರತ್ನೆ!**"

"**ಕಣ್ಣ ಮನವನಿರ್ಕಳಿಗೊಳ್ವ ಕಡುಜಾಣವೆಣ್ಣುಗಳ ಅಧಿದೇವಿ!**"

"**ಬಾಳಿನ್ನ ಭಾಗ್ಯದ ನಿಧಿಯೆಂದೆನಿಪ ಸುಡಾಳ ಬಲ್ಮೊಲೆವೆತ್ತ ನೀರೆ!**"

"**ಬಡನಡುವಿನ ಚೆನ್ನೆ! ಭಾಮಿನಿಯರ ರನ್ನೆ! ಕೊಡನೊಲೆವೆಣ್ಣೆ!**"

"**ಎನ್ನೆದೆಯ ಅಲರ್ದುಂಬಿಕುರುಳಾಂತ ಪೆಣ್ದಲೆ ರನ್ನೆ!**"

ಒಂದು ಎಡೆಯಲ್ಲಿಯಂತೂ ದಾಸರು '**ಸಿಂಗರದೋಟದ ಸಿರಿಗಂಪ ಸುಜನರ್ಗೆ ತಂಗಾಳಿ ತಂದೀವ ತೆರದಿ, ಮಂಗಳ ಹರಿಕಥಾಮೃತವ ನಾನಿನ್ನ ಕರ್ಣಂಗಳಿಗೆರೆವೆ**' ಎಂದು ಹೇಳಿರುವರು. ಪೀಠಿಕಾಸಂಧಿಯಲ್ಲಿ ತಮ್ಮ ಕೃತಿಯ ಗುಣವನ್ನು ಹೇಳಿಕೊಳ್ಳುವಾಗ :

" ತೆಂಗಿನಕಾಯ ತೋರದ ಮೊಲೆವೊತ್ತ ಲತಾಂಗಿಯ ಬಂದುಗೆವಾಯ
ರಂಗಿಪ ಚೆಂದುಟಯಿಸಿದೆನೆ ' ಮೋಹತರಂಗಿಣಿ ' ವೇಳ್ವೆ ಕೇಳಬಲಿ ! "

ಎಂದು ಹೇಳಿರುವರು. ಇಂತಹ ಕಾವ್ಯದಿಂದಲೂ ಭಕ್ತಿಪಂಥವನ್ನು ಪ್ರಚಾರ ಗೊಳಿಸಲಿಕ್ಕಾದೀತೆಂದು ಕನಕದಾಸರಿಗೆ ನಂಬಿಗೆಯಿರಬಹುದೇ ? ಹಾಗೆ ಯಾರಾದರೂ ಹೇಳಲು ಬಂದರೆ, ಕನಕದಾಸರು ಇದ್ದಲ್ಲಿಂದಲೆ ಉಪಹಾಸದ ನಗೆಯನ್ನು ನಕ್ಕುಬಿಡಬಹುದಿಷ್ಟೆ !

೧೩. ಈ ಎಲ್ಲ ಸಂಗತಿಗಳ ಮೇಲೆ **ಪಂಪ, ಪೊನ್ನ, ರನ್ನ, ರುದ್ರಭಟ್ಟ** ಇವರ ಕಾವ್ಯಸಂಪ್ರದಾಯದ ವಿದ್ಯುಜ್ಯೋತಿಯ ಕಿರಣಗಳನ್ನು ಪಸರಿಸೋಣ ! ಪಂಪನು ಮಹಾಭಾರತದಂತಹ ಪೌರಾಣಿಕ ಕಥಾವಸ್ತು ವನ್ನು ತೆಗೆದುಕೊಂಡು **' ವಿಕ್ರಮಾರ್ಜುನ ವಿಜಯ '** ವನ್ನು ಬರೆದ. ಪೊನ್ನನು ರಾಮಾಯಣದಂತಹ ತ್ರೇತಾಯುಗದ ಕಥೆಯನ್ನು ತೆಗೆದು ಕೊಂಡು **' ಭುವನೈಕ ರಾಮಾಭ್ಯುದಯ '** ವನ್ನು ಬರೆದ. ರನ್ನನು ಭೀಮ-ದುರ್ಯೋಧನರ ಕಥೆಯನ್ನು ತೆಗೆದುಕೊಂಡು **' ಸಾಹಸ ಭೀಮ ವಿಜಯ '** ವನ್ನು ಬರೆದ. ರುದ್ರಭಟ್ಟನು **' ತ್ರಿಣೇತ್ರ '** ನನ್ನು ಹೊಗ ಳುವೆನೆಂದು **' ಯುದ್ಧರಂಗತ್ರಿಣೇತ್ರ- ಅರಿಕಾಮಧ್ವಂಸಿ '** ಯನ್ನು ಹೊಗಳಿದ. ಪಂಪನ ' ವಿಕ್ರಮಾರ್ಜುನ ' ನೆಂದರೆ ಪುಲಿಗೆರೆಯ ದೊರೆ— ಚಲುಕ್ಯವಂಶೋತ್ಪನ್ನನಾದ— **ಅರಿಕೇಸರಿ.** ಪೊನ್ನನ ' ಭುವನೈಕರಾಮ ' ನೆಂದರೆ ಆ ಕವಿಗೆ ಆಶ್ರಯವನ್ನಿತ್ತ ರಾಷ್ಟ್ರಕೂಟ ದೊರೆ—**೩ನೆಯ ಕೃಷ್ಣನೆ** ಆಗಿರಬಹುದು. ರನ್ನನ ' ಸಾಹಸಭೀಮ ' ನೆಂದರೆ ಚಳುಕ್ಯವಂಶೋತ್ಪನ್ನನಾದ **ಸತ್ಯಾಶ್ರಯನು.** ಅದರಂತೆಯೆ ರುದ್ರಭಟ್ಟನ ಯುದ್ಧರಂಗತ್ರಿಣೇತ್ರನೆಂದರೆ ಹೊಯ್ಸಳ ವೀರಬಲ್ಲಾಳನ ಬಳಿಯಲ್ಲಿ ಮಂತ್ರಿಯಾಗಿದ್ದ **ಚಂದ್ರಮೌಳಿ** ಎಂಬ **' ಸಮುಲ್ಲತ ತೇಜೋನಿಲಯಂ, ವಿರೋಧಿ ಸಚಿವೋನ್ಮತ್ತೇಭಪಂಚಾ- ನನಂ '** ! ಈ ಪರಂಪರೆಯಂತೆ ನೋಡಿದರೆ ಕನಕದಾಸರ **' ದೇಶಾಧಿಪ ಕೃಷ್ಣರಾಯನು '** ಆ ಕವಿಯ ಕಾಲದ ದೊರೆಯೊಬ್ಬನು ಏಕಾಗಿರಬಾರದು ?

೧೪. ಕನಕದಾಸರು ಹುಟ್ಟಿದ-ತೀರಿದ ಕಾಲವು ನಿಶ್ಚಿತವಾಗಿ ತಿಳಿಯದು. ಶ್ರೀವ್ಯಾಸರಾಯರೂ, ಪುರಂದರದಾಸರೂ, ಶ್ರೀವಾದಿರಾಜರೂ ಇವರ ಸಮಕಾಲೀನರಾಗಿದ್ದುದರಿಂದ, ಕನಕದಾಸರು ಬೆಳೆದು ಬಾಳಿದ ಕಾಲ ವನ್ನು ಸಹಜವಾಗಿ ಕಂಡುಹಿಡಿಯಲಿಕ್ಕಾಗುವುದು. ಸುಪ್ರಸಿದ್ಧ ಇತಿಹಾಸ

ಸಂಶೋಧಕರಾದ ಶ್ರೀಮಾನ್ ಸ್ವಾಮಿಕಣ್ಣು ಪಿಳ್ಳೆಯವರು, ಶ್ರೀವ್ಯಾಸ-ರಾಯರ ಜನ್ಮದಿನವು ಕ್ರಿ. ಶ. ೧೪೪೭ನೆಯ ಎಪ್ರಿಲ್ ೨೨ನೆಯ ತಾರೀಖು ಎಂದು ನಿರ್ಣಯಿಸಿರುವರು. ಕ್ರಿ. ಶಕದ ೧೫೦೯ ರಿಂದ ೧೫೨೯ ರ ವರೆಗೆ ಆಳಿದ ವಿಜಯನಗರದ ಶ್ರೀಕೃಷ್ಣದೇವರಾಯನಿಂದ ಮನ್ನಣೆ ಪಡೆದು, ಕೊನೆಯ ವರೆಗೂ ಆತನ ರಾಜಧಾನಿಯಲ್ಲಿಯೆ ಇದ್ದರೆಂದು ಇತಿಹಾಸವು ಹೇಳುತ್ತದೆ. ಮುಂದೆ ಶಾಲಿವಾಹನ ಶಕದ ೧೪೬೧ನೆಯ ವಿಳಂಬಿ ಸಂವತ್ಸರದ ಫಾಲ್ಗುಣ ಬಹುಳ ಚತುರ್ಥಿಯ ದಿನ ಎಂದರೆ ಕ್ರಿ. ಶಕದ ೧೫೩೯ನೆಯ ವರ್ಷ ಅವರು ವೃಂದಾವನಸ್ಥರಾದರೆಂಬುದು, ಅವರ ಬೇರೆ ಬೇರೆ ಚರಿತ್ರಗಳಿಂದಲೂ ಸೋಸಲೆ ಮಠದ ಕಾಗದಪತ್ರಗಳಿಂದಲೂ ಗೊತ್ತಾಗುತ್ತದೆ. ಸುಮಾರು ಎಂಭತ್ತು ವರ್ಷಗಳ ಕಾಲ ಜೀವಿಸಿದ ಪುರಂದರದಾಸರು, ಶಾಲಿವಾಹನ ಶಕ ೧೪೮೬ ನೆಯ ರಕ್ತಾಕ್ಷಿ ಸಂವತ್ಸರದ ಪುಷ್ಯ ಬಹುಳ ಅಮಾವಾಸ್ಯೆಯ ದಿನ ಎಂದರೆ ಕ್ರಿ. ಶಕದ ೧೫೬೫ನೆಯ ಇಸ್ವಿಯ ಜನವರಿ ತಿಂಗಳಲ್ಲಿ ಕಾಲಾಧೀನರಾದರು. ಪುರಂದರದಾಸರ ತರುವಾಯ ಕನಕದಾಸರು ಅವರ ತಂಬೂರಿಯನ್ನೊಯ್ದು ತಿರುಪತಿಯಲ್ಲಿರಿಸಿದರೆಂಬ ಸಾಂಪ್ರದಾಯಿಕರ ವಾರ್ತೆಯನ್ನು ನಂಬುವುದಾದರೆ, ೧೫೬೫ ನೆಯ ಇಸವಿಗೆ ಮುಂದೆಯೂ ಕೆಲವು ವರ್ಷ ಕನಕದಾಸರು ಬದುಕಿದ್ದರೆಂದು ಒಪ್ಪಬೇಕಾಗುವುದು. ಪುರಂದರದಾಸರೂ ಕನಕದಾಸರೂ, ಸಮಸಾಮಯಿಕರೂ ಸಮವಯಸ್ಕರೂ ಇದ್ದಿರಬಹುದೆಂದು ಭಾವಿಸಲಿಕ್ಕೆ ಅಡ್ಡಿಯಿಲ್ಲ. ಆದುದರಿಂದ ಕನಕದಾಸರು ಕ್ರಿ. ಶಕದ ೧೪೮೫ ರಲ್ಲಿಯೊ ೮೬ ರಲ್ಲಿಯೊ, ಅದಕ್ಕೂ ಒಂದೆರಡು ವರ್ಷ ಹಿಂದೊ ಮುಂದೊ ಜನ್ಮಿಸಿರಬಹುದು. **ಶ್ರೀಕೃಷ್ಣದೇವರಾಯ**ನ ಸಂಪತ್-ಪ್ರಪೂರ್ಣವಾದ ಆಳಿಕೆಯನ್ನು ದಾಸರು ಸಂಪೂರ್ಣವಾಗಿ ಕಂಡಿದ್ದಾರೆ; **ಅಚ್ಯುತದೇವರಾಯ**ನ ಸುಪ್ತಜ್ವಾಲಾಮುಖಿಯಂತಿದ್ದ ಸಂಕ್ರಮಣ ಕಾಲದ ಆಡಳಿತವನ್ನೂ ನೋಡಿದ್ದಾರೆ; ಅಳಿಯ ರಾಮರಾಜನ ವೀರಪ್ರತಾಪದ ಆಡಳಿತವನ್ನೂ ಅನುಭವಿಸಿದ್ದಾರೆ. ವಿಜಯನಗರದ ಸಾಮ್ರಾಜ್ಯ ಸಂಸ್ಕೃತಿಯನ್ನೂ, ಸಮಾಜಸಂಪ್ರದಾಯಗಳನ್ನೂ ಕನಕದಾಸರು ಕಣ್ಣಾರೆ ಕಂಡಿದ್ದಾರೆ.

**೧೫.** ಸಂಗಮವಂಶದ ಮೊದಲನೆಯ ದೇವರಾಯನ ಆಳಿಕೆಯಲ್ಲಿ ಎಂದರೆ ಕ್ರಿ. ಶಕದ ೧೪೨೦-೨೧ ರಲ್ಲಿ, **ಇಟಲಿ**ಯ ಪ್ರವಾಸಿಯೊಬ್ಬನಾದ ' **ಪಾವ್ಲೊಲೋ ನಿಕೋಲೊ** ' ಎಂಬವನು ವಿಜಯನಗರಿಗೆ ಬಂದಿದ್ದನೆಂಬುದನ್ನು ಇತಿಹಾಸವನ್ನರಿತವರೆಲ್ಲರೂ ಬಲ್ಲರು. ಅವನು ವಿಜಯನಗರದ

ವಿಷಯವನ್ನು ಕುರಿತು ವಿಶದವಾದ ವರದಿಯೊಂದನ್ನು ಬರೆದಿಟ್ಟಿರುವನು. ಅದರಲ್ಲಿ ವಿಜಯನಗರದ ರಾಜರು ವೈಭವದಿಂದ ಜರುಗಿಸುವ ಸಾರ್ವಜನಿಕ ಉತ್ಸವಗಳನ್ನೂ ಕುರಿತು ಬರೆಯಲಾಗಿದೆ. ಮೊದಲನೆಯದಾಗಿ ಹೇಳಿದ ಉತ್ಸವವು **ಮಕರಸಂಕ್ರಮಣ**ವಿರಬಹುದಾಗಿದೆ. ದೀಪಾವಳಿ, ನವರಾತ್ರಿಗಳನ್ನೂ ಅವನು ಹೇಳಿರುವನು. ಇವುಗಳಲ್ಲದೆ ಇನ್ನೊಂದು-ಮೂರುದಿನಗಳದೊಂದು-ಹಬ್ಬವನ್ನವನು ಹೀಗೆ ವಿವರಿಸಿರುವನು :—

**“ ಈ ದಿವಸಗಳಲ್ಲಿ ಇಲ್ಲಿಯ ಜನರು ಬೀದಿಯಲ್ಲಿ ಹೋಗಿಬರುವವರ ಮೇಲೆಲ್ಲ—ಸ್ವತಃ ರಾಜರಾಣಿಯರ ಮೇಲೆ ಕೂಡ—ಕೆಂಪು, ಕೇಸರಿ ಬಣ್ಣಗಳನ್ನು ಜೀಕುಳಿಗಳಿಂದ ಎರಚುವರು. ಇಂತಹ ಈ ಬಣ್ಣದಿಂದ ತುಂಬಿದ ಹಂಡೆ-ಹಂಡೆಗಳನ್ನು ದಾರಿಯಮೇಲೆಯೇ ಇರಿಸಿರುವರು. ಈ ಬಣ್ಣದ ಎರಚಾಟದಲ್ಲಿ, ನಗುತ್ತ ಕೆಲೆಯುತ್ತ ಆನಂದದಿಂದ ಎಲ್ಲರೂ ಭಾಗವಹಿಸುತ್ತಾರೆ.”**

೧೬. ಹೀಗೆ ವರ್ಣಿತವಾಗಿರುವ ಹಬ್ಬವು ಯಾವುದೆಂಬುದನ್ನು ಕನ್ನಡಿಗರಿಗೆ ಬೇರೆಯಾಗಿ ಹೇಳಲೆ ಬೇಕಾಗಿಲ್ಲ. **ಕಾಮನ ಹಬ್ಬವದು**; ಹೋಳಿಯ ಹುಣ್ಣಿಮೆಯ **ವಸಂತೋತ್ಸವ.** ವಿಜಯನಗರದಲ್ಲಿ ಈ ವಸಂತೋತ್ಸವವು ತುಂಬ ವಿಜೃಂಭಣೆಯಿಂದ ನಡೆಯುತ್ತಿತ್ತೆಂಬುದಕ್ಕೆ ಪ್ರಮಾಣವಾಗಿ, ಮೇಲಿನ **ನಿಕೋಲೋಕೊಂಟಿಯ** ಬರೆಹವಲ್ಲದೆ ಲೋಕ-ಕಥೆಗಳೂ ಇವೆ. ಕನಕದಾಸರ ಮೋಹನತರಂಗಿಣಿಯಲ್ಲಿ ‘ ವಸಂತಪೂಜೆ ’ಯ ಸಂದರ್ಭವು ವಿಶದವಾಗಿ ವರ್ಣಿತವಾಗಿದೆ. ಶಂಬರಾಸುರನನ್ನು ವಧಿಸಿ ಬಂದಮೇಲೆ ರತಿ-ಮನ್ಮಥರ ಮದುವೆಯಾಗುವುದು; ಆ ಆನಂದದ ಪುರ-ಸ್ಕಾರಕ್ಕಾಗಿ ವಸಂತಪೂಜೆಯಾಗುವುದು. ಕನಕದಾಸರ ವಸಂತಪೂಜೆಯ ವರ್ಣನೆಯನ್ನು ನೋಡಿದರೆ, ಅದು ವಿಜಯನಗರದ ವಸಂತೋತ್ಸವದ ವಾಸ್ತವಚಿತ್ರವೆಂಬುದನ್ನು ಯಾರೂ ಊಹಿಸುವಂತಿದೆ. ಮಿಕ್ಕ ಅನೇಕ ಕಾವ್ಯಗಳಲ್ಲಿ ಜಲಕೇಳಿಯಾಟ ಬಂದಿರುವುದಾದರೂ, ಈ ಕಾವ್ಯದಲ್ಲಿಯ ವಸಂತೋತ್ಸವದ ವೈಶಿಷ್ಟ್ಯ ಅವುಗಳಲ್ಲಿ ಕಂಡುಬರುವುದಿಲ್ಲ.

**೧೭.** ಕನಕದಾಸರ ಅಭಿಪ್ರಾಯದಂತೆ ಕಾವ್ಯನಾಯಕನಾದ ‘**ಕೃಷ್ಣ**’ನು ‘ ಕ್ರೀಡಾಕುಲ ಮಂಟಪವನು ಸಾರ್ದನು ’. ಸಾರಿ ನೋಡಿದರೆ ಅಲ್ಲಿ :

ನೋಡಲು ಕಣ್ಗೆಸೆದುವು ಚಂದ್ರಕಾಂತದ
'ಕ್ರೀಡಾಕುಳಿ' ಗಳಲ್ಲಲ್ಲಿ ।
ಜೋಡಣೆಗೆಯ್ದ ಸುವರ್ಣಮಂಟಪದ ಕೈ-
ವಾಡವನೇನ ಬಣ್ಣಿಪೆನು ! (ಸಂಧಿ ೧೪ ಪದ್ಯ ೨೮)

ನರ್ತನ, ಕೋಲಾಟ, ಹೊನ್ನಂಡೆಗಳನಾಂತು
ಪುತ್ತಳಿ ಮದನ ಕೈಯೆಡೆಯ ।
ಚಿತ್ತರಗೈದಿರ್ದ ಬಿನ್ನಾಣಗಳ ನೋಡಿ,
ಚಿತ್ತೈಸಿದನು ಕೃಷ್ಣ ನಗುತ ॥ (ಸಂಧಿ ೧೪ ಪದ್ಯ ೩೦)

ಶಾಲೆಗಳಿಂದೆ, ಕುಚ್ಚುಗಳಿಂದೆ, ಕಮ್ಮಲರ್
ಮಾಲೆ-ಝಲ್ಲರಿ-ಝಲ್ಲಿಯಿಂದೆ ।
ಬಾಲೆಯರುಗಳ ಕಣ್ಮನಕೆ 'ರಾಟಣದು-
ಯ್ಯಾಲೆ' ನಾಲ್ದೆಸೆಯೊಳೊಪ್ಪಿದುವು ॥ (ಸಂಧಿ ೧೪ ಪದ್ಯ ೩೧)

'ರಾಟಣದುಯ್ಯಾಲೆ' ಎಂದರೆ ನಮ್ಮಲ್ಲಿ ಈಗಲೂ ಪ್ರಚಾರದಲ್ಲಿದ್ದ ತೊಟ್ಟಿಲುಜೋಕ. 'ಇಂತಪ್ಪ ಕ್ರೀಡಾಕೊಳವಿರಲು' ಶ್ರೀಕೃಷ್ಣನು ನಗು ನಗುತ್ತ ನೋಡಿ, ಅವುಗಳಲ್ಲಿ 'ಒಂದೊಂದನು ಬಲರಾಮ-ಸಾತ್ಯಕಿ-ಪ್ರದ್ಯುಮ್ನಗೆ ಇತ್ತ'; ಆಗ :

ಅವರವರುಗಳು ತಮ್ಮಯ ಪ್ರಾಣಕಾಂತರ
ನಿವಹವೊಂದಾಗಿ ಆ ಕೊಳದಿ ॥
ವ್ಯವಹರಿಸಿದರಾಯತಿವೆತ್ತು ; ಧರಣೀ-
ಧವನೋಕುಳಿಗೆ ನೇಮಿಸಿದ."

೧೮. 'ಓಕುಳಿ' ಎಂದರೆ '**ವಸಂತೋತ್ಸವ**'. ಶ್ರೀಕೃಷ್ಣನು ಓಕುಳಿಗೆ ಆಜ್ಞೆಮಾಡಿದೊಡನೆಯೆ 'ಲೀಲೆಗಾರ್ತಿಯರು ಅಚ್ಯುತನ ಆಜ್ಞೆಯಿಂದ ಪೆರ್ಗಾಲ ಹೊಂದೂಂಬನು ನೆಗಹೆ, ಕೀಲಣೆಗೆಯ್ದ ಸುವರ್ಣ-ವೇತಂಡ ಶುಂಡಾಲದೊಲ್ ಸಲಿಲ ಸುರಿದುದು'. ಇಲ್ಲಿ 'ಹೊಂದೂಂಬು' ಎಂದರೆ ಚಿನ್ನದ ಜೀಕುಳಿ. ಹೆಂಗುಸರೆಲ್ಲ ಮೆಲಕ್ಕೆತ್ತಿದ ಚಿನ್ನದ ಜೀಕುಳಿಯನ್ನೆತ್ತಿ ನಿಂತುದನ್ನು ಕವಿ, ಚಿನ್ನದಾನೆಗಳು ತಮ್ಮ ಸೊಂಡಿಲುಗಳನ್ನೆತ್ತಿ ನೀರೆರಚುವ ಚಿತ್ರಕ್ಕೆ ಹೋಲಿಸಿದ್ದಾನೆ. ಮೊದಮೊದಲು ಬರಿಯೆ ನೀರಾಟ

ವನ್ನಾಡಿದ ಆ ಎಲ್ಲ ಜನರೂ, ಚಂದ್ರಕಾಂತ ಶಿಲೆಗಳಿಂದ ನಿರ್ಮಿತವಾದ ಆ '**ಕ್ರೀಡಾಕುಳಿಗೆ ಕುಂಕುಮದ ಅಲರ ತುಳಿದು ಒಡೆಗಲಸಿದರು**'. ಆಗ ಆ ಕುಳಿಗಳಲ್ಲಿ '**ಕೆನ್ನೀರು ರಮಣೀಯವಾಯ್ತು**'. ಆಗಲೆ ಹೆಂಗುಸರೂ ಗಂಡುಸರೂ ವಸಂತೋತ್ಸವಕ್ಕೆ ತಕ್ಕುವಾದ ಉಡಿಗೆ-ತೊಡಿಗೆಗಳನ್ನು ಮಾಡಿಕೊಳ್ಳುವರು. ವಸಂತೋತ್ಸವವನ್ನು ಪ್ರಾರಂಭಿಸುವರು. ಶ್ರೀಕೃಷ್ಣನು ರುಕ್ಮಿಣಿ-ಸತ್ಯಭಾಮೆಯರಿಗೆ '**ವರವಧೂಟಿಯರ ಹಂಚಿಕೊಂಡು ಇರ್ವರೂ ಓಕುಳಿಯಾಡಿ!**' ಎನ್ನಲು, ಅವರು '**ತೋಳ ಮೂಲಗಳು ಒಡೆವಂತೆ ಪೆರ್ಮೊಲೆಯ ಚಡಾಳದಿ ಮೆರೆವ ಹೆಣ್ಣು**' ಗಳಲ್ಲಿ '**ಮೇಳಕೆ ತಕ್ಕತಕ್ಕವರ ಆಳ ಹಂಚಿದರು**'. ಬಳಿಕ ಎರಡು ಪಂಗಡದವರೂ '**ಕೊಂಬು ಜೀರ್ಕೊಳವಿಗಳಿಂದ ಓಕುಳಿಯ ಎಚ್ಚಾಡುತಿರ್ದರು**'. ಓಕುಳಿಯಾಟವು ರಭಸದಿಂದ ನಡೆಯಿತು. ಆಗ 'ಭೇರಿ, ಮದ್ದಳೆ, ಶಂಖ, ಪಟಹ, ಡಿಂಡಿಮ, ಡೋಳು' ಮೌರಿ, ತಂಬಟ ಇವುಗಳ ದನಿಗಳೂ ಲಗ್ಗೆವರೆಗಳೂ 'ಭೂರಿನಾದದೆ ಮೊಳಗಿದುವು'. ಆಗ ಓಕುಳಿಯಾಡುವ '**ಕಮ್ಮಲರ್‌ಗಂಧಿಯರು ನಮ್ಮೊಳು ನಾವೆ ಪೊಯ್ದಾಡುವುದೇಕೆಂದು ತಮ್ಮನು ಆಳುವ ಕೃಷ್ಣರಾಯನ**' ತುಡುಕಿದರು. ಅವನ ಮೇಲೆ '**ಹೊಸ ಹೊನ್ನಬಿಂದಿಗೆದುಂಬಿ**' ಓಕುಳಿಯು ಚೆಲ್ಲಿದರು; ಇತ್ತ

> "**ನಿಜಲೀಲೆಯೊಳಗಿರೆ ಶ್ರೀಕೃಷ್ಣರಾಯನಗ್ರಜ ಕನಿಷ್ಠರುಗಳು ತಮ್ಮ**
> **ಗಜಗಮನೆಯರೊಂದುಗೂಡಿ ಕ್ರೀಡಾಕುಲವ್ರಜದೊಳ್ ಓಕುಳಿಯನಾಡಿದರು.**
> **( ಸಂಧಿ ೧೪ ಪದ್ಯ ೭೪ )**

ಆಗ ಕಾಮನೂ ರತಿದೇವಿಯೊಂದಿಗೆ ಒಂದೆಡೆಯಲ್ಲಿ ಓಕುಳಿಯಾಡುತ್ತಿದ್ದನು. '**ಎಡಬಲದೊಳು, ಪಿಂತೆ, ಮುಂತೆ, ಶೋಭಿಸುವ ಪೊಂಗೊಡವೊಲೆಯವರು, ಎಡೆವಿಡದೆ ಒಬ್ಬರೊಬ್ಬರ ಮೇಲೆ ಓಕುಳಿಯ ಚೆಲ್ಲುವ ಸಡಗರವ ಏನ ಬಣ್ಣಿಪೆನು?**' ಎಂದು ಕನಕದಾಸರು ಈ '**ವಸಂತೋತ್ಸವ**' ವನ್ನು ಪೂರಯಿಸಿದ್ದಾರೆ.

**೧೯.** ಕಾಮನಹಬ್ಬದ ಪ್ರಧಾನದೇವತೆ **ಕಾಮ.** ಅವನಿಗೆ ಪ್ರಿಯವಾದ ರಸ ಶೃಂಗಾರ-ಉತ್ತಾನಶೃಂಗಾರ. '**ಮೋಹನತರಂಗಿಣಿ**' ಯ ಮುಖ್ಯಭಾಗವು ಕಾಮನ ಕಥೆಯಿಂದಲೆ ಕೂಡಿದೆ. ಮಿಕ್ಕಭಾಗವು ಕಾಮನ ಮಗನಿಗೆ ಮೀಸಲಾಗಿದ್ದರೂ ಅಲ್ಲಿಯೂ ಶೃಂಗಾರಕ್ಕೇ ಪ್ರಾಮುಖ್ಯಸ್ಥಾನವಿದೆ. ಈ ಕಾವ್ಯದ ವೃತ್ತ ಜಾನಪದವೃತ್ತ. ಭಾಷೆ '**ನಾಡೊಳಗುಳ್ಳ**

**ಜಾಣರು ಜಾಣೆಯರೊಡನಾಡುವ ಸವಿಮಾತು**'! ಇದನ್ನೆಲ್ಲ ನೋಡಿದರೆ ಕನಕದಾಸರು '**ಮೋಹನತರಂಗಿಣಿ**' ಯನ್ನು, ವಿಜಯನಗರದ ಜಾನಪದ ಉತ್ಸವವಾದ ಹೋಳಿಯ ಹಬ್ಬದ ಕಾಲಕ್ಕೆ ಓದಲಿಕ್ಕೂ ಹಾಡಲಿಕ್ಕೂ ಅನು-ಕೂಲವಾಗುವಂತೆ, '**ಪಾಡುಗಬ್ಬ**' ವನ್ನಾಗಿ '**ಪರುಠವಿಸಿರ**' ಬಹುದೆಂದು ಊಹಿಸಲು ಬರುವಂತಿದೆ. ಇಷ್ಟೇ ಅಲ್ಲ. ಇದರಲ್ಲಿ ಆಗಾಗ ಉಪಯೋಗಿಸ ಲಾಗಿರುವ ವಿಶೇಷಣ ಸಹಿತವಾದ '**ಕೃಷ್ಣರಾಯ**' ನ ಹೆಸರನ್ನು ನೋಡಿ ದರೆ, ಈ ಊಹೆ ಸಾಕಷ್ಟು ಪರಿಪುಷ್ಟಿ ಹೊಂದುತ್ತಲಿದೆ. **ತಿಮ್ಮಣ್ಣ**ಕವಿ ಯಿಂದ—ಕುಮಾರವ್ಯಾಸನು ಬರೆದು ನಿಲ್ಲಿಸಿದ—ಭಾರತವನ್ನು ಮುಂದೆ ಬರೆಯಿಸಿದಂತೆ '**ವಸಂತೋತ್ಸವ**' ಕ್ಕೆ ಅನುಕೂಲವೆನಿಸುವಂತಹ ಈ **ಜಾನಪದಮಹಾಕಾವ್ಯ**ವನ್ನು, ಕೃಷ್ಣದೇವರಾಯನೊ—ಆತನ ತರು-ವಾಯದ ದೊರೆ ಅಚ್ಯುತರಾಯನೊ— **ಕನಕದಾಸ**ರಿಂದ ಬರೆಯಿಸಿರ ಬಹುದು. ಯಾವ ದೊರೆ ಬರೆಯಿಸಿರಬಹುದು ಹಾಗಾದರೆ?

೨೦. '**ಮೋಹನತರಂಗಿಣಿ**' ಯನ್ನು ಸೂಕ್ಷ್ಮವಾಗಿ ಅವಲೋಕಿ ಸುತ್ತ ಹೋದರೆ, ಅದನ್ನು ಕನಕದಾಸರು ತಮ್ಮ ತಾರುಣ್ಯದಲ್ಲಿಯೆ ಬರೆ ದಿರುವರೆಂಬುದು ಸ್ಪಷ್ಟವಾಗಿ ಕಂಡು ಬರುತ್ತದೆ. ತಮ್ಮ ಭಕ್ತಿಯ ಮಹಿಮೆ ಗಳನ್ನು ಅನೇಕ ಬಗೆಯಿಂದ ಪ್ರಕಟಿಸಿದರೆಂಬ ಲೋಕಕಥಾ ಪ್ರಸಿದ್ಧರಾದ ಕನಕದಾಸರು, ತಮ್ಮ ಇಳಿವಯಸ್ಸಿನಲ್ಲೇನೂ ಇದನ್ನು ಬರೆದಿರಲಾರರು. ಮನಶ್ಶಾಸ್ತ್ರದ ದೃಷ್ಟಿಯಿಂದ ನೋಡಿದರೆ ಕನಕದಾಸರಂತಹರ ಇಳಿ ವಯಸ್ಸು, ಸಾಂಪ್ರದಾಯಿಕ ಆಚಾರ-ವಿಚಾರಗಳಿಗೆ ಕಟ್ಟುಬಿದ್ದು ಭಕ್ತಿ-ವೈರಾಗ್ಯಗಳೊಂದಿಗೆ ಮುಳುಗಿ ಮುಂದುವರಿದಿರಬಹುದಾಗಿದೆ. ಅಂತಹ ಕಾಲದಲ್ಲಿ ಇಂತಹ ಶೃಂಗಾರ ಕಾವ್ಯವನ್ನು ಬರೆಯುವುದು ಶಕ್ಯವೆ ಇಲ್ಲ.

ಭಕ್ತಿಪಂಥದ ದೀಕ್ಷೆ ಪಡೆದಿದ್ದರೇನು; ತಾರುಣ್ಯದ ಕಸುಕುತನವು ಎಲ್ಲಿ ಹೋಗುತ್ತದೆ? ಇದರ ಮೂಲಕವಾಗಿಯೆ ಕನಕದಾಸರು ಈ ಕಾವ್ಯ ದಲ್ಲಿ ಭಕ್ತಿಗೂ ಶೃಂಗಾರಕ್ಕೂ ತಳಕುಹಾಕಿದ್ದಾರೆ. ಈ ಕಾವ್ಯದಲ್ಲಿ ಕನಕ-ದಾಸರ ಮನಸ್ಸು ಹೃದಯಗಳು ಶೃಂಗಾರವನ್ನು ಮೆಚ್ಚಿ, ತಕ್ಕ ಪ್ರಯೋ ಜನವನ್ನು ಪಡೆದಿವೆ; ಬುದ್ಧಿ, ಬಹಿಸ್ಸಂಸ್ಕಾರಗಳು ಭಕ್ತಿಯ ಬೆನ್ನನ್ನು ಹತ್ತಿ ಅಯಶಸ್ವಿಗಳಾಗಿವೆ. 'ಶ್ರೀಕೃಷ್ಣಚರಿತ್ರೆಯನ್ನು ಹೇಳುವುದೇ ತನ್ನ ಗುರಿ' ಎಂಬ ಹೊರಮಾತುಗಳಿಂದ ಸಂಪ್ರದಾಯ ಪ್ರೀತಿಯ ಜನರನ್ನು ಮಂಕು-

ಗೊಳಿಸುತ್ತ ಕನಕದಾಸರು, ಭಕ್ತಿಯ ತೆರೆಯ ಮರೆಯಲ್ಲಿ ತಮ್ಮ ಶೃಂಗಾರ-ಹೃದಯವನ್ನು ತೆರೆದು ಹಿಡಿದಿದ್ದಾರೆ. ದಾಸನಾಗಿ ತನ್ನ ಭಕ್ತಿಯ ಪರಿಪಕ್ವತೆಯಿಂದ ಸಾಕ್ಷಾತ್ಕಾರ ಹೊಂದಿದವನ ಗಾಂಭೀರ್ಯಕ್ಕೆ ಈ ರೀತಿ ಸ್ವಲ್ಪವೂ ಹೊಂದಿಕೆಯೆನಿಸದು. ಎಂತಲೆ ಕನಕದಾಸರು ತಮ್ಮ ತಾರುಣ್ಯದಲ್ಲಿಯೆ — ದಾಸ ದಿಕ್ಷೆಯನ್ನು ಪಡೆದ ಹೊಸದರಲ್ಲಿಯೆ — ಈ ಕಾವ್ಯವನ್ನು ಬರೆದಿರಬಹುದೆಂಬುದು, ಯಾವ ಮನೋವಿಜ್ಞಾನಿಯೂ ಒಪ್ಪತಕ್ಕವಮಾತು. ಈ ಮೊದಲು ಸಿದ್ಧ ಮಾಡಿದಂತೆ ಕನಕದಾಸರು ೧೪೮೪-೮೭ ನೆಯ ಇಸವಿಯಲ್ಲಿ ಹುಟ್ಟಿರಬಹುದಾದುದರಿಂದ, ತಮ್ಮ ವಯಸ್ಸಿನ ೩೦-೩೫ನೆಯ ವರ್ಷ ಈ ಕಾವ್ಯವನ್ನು ಬರೆದಿರಬಹುದೆಂದರೆ ಕ್ರಿ. ಶಕದ ೧೫೧೫-೨೦ ನೆಯ ಇಸವಿಯಾಗುವುದಾಗ. ವಿಜಯನಗರದ **ಕೃಷ್ಣದೇವರಾಯ**ನು ೧೫೦೯ ರಿಂದ ೧೫೨೯ ರ ವರೆಗೆ ರಾಜ್ಯವನ್ನಾಳುತ್ತಿದ್ದನಾದುದರಿಂದ, ಆತನ ಆಳಿಕೆಯಲ್ಲಿಯೆ ದಾಸರು '**ಮೋಹನತರಂಗಿಣಿ**' ಯನ್ನು ಬರೆದರೆಂದು ಹೇಳಬೇಕಾಗುವುದು. ಕೃಷ್ಣದೇವರಾಯನ ಪಾಂಡಿತ್ಯಪ್ರೀತಿಯೂ, ಸಾಹಿತ್ಯಮಮತೆಯೂ ಈ ಮಾತನ್ನು ಪುಷ್ಟೀಕರಿಸುತ್ತದೆ. ಕನಕದಾಸರು ಕಾವ್ಯದ ಹೆಸರನ್ನು '**ಶ್ರೀಕೃಷ್ಣಚರಿತೆ**'ಯೆಂದು ಇಟ್ಟುದೂ, ಕಾವ್ಯದ ತುಂಬ ಅಲ್ಲಲ್ಲಿ ಸಲುಗೆಯಿಂದಲೂ ಪ್ರೀತಿಯಿಂದಲೂ '**ಕೃಷ್ಣರಾಯ**'ನ ಹೆಸರನ್ನು ಹೇಳುತ್ತಿದ್ದುದೂ ಈ ಮಾತಿಗೆ ಪ್ರಮಾಣಗಳನ್ನೊದವಿಸಿ ಕೊಡುತ್ತಲಿದೆ. ಕಾಮನೊ ಅನಿರುದ್ಧನೊ ನಾಯಕನೆನಿಸಬಹುದಾದ ಕಾವ್ಯಕ್ಕೆ '**ದೇಶಾಧಿಪ ಕೃಷ್ಣ-ರಾಯ**'ನು ಏತಕ್ಕಾಗಿ ನಾಯಕನಾದನೆಂಬುದರ ರಹಸ್ಯ ಬಯಲಿಗೆ ಬಂದು ನಿಲ್ಲುತ್ತದೆ. 'ಇಷ್ಟೆಲ್ಲವಾಗಿ ಕನಕದಾಸರು ಕೃಷ್ಣರಾಯನ ಹೆಸರನ್ನು ಪ್ರತ್ಯಕ್ಷವಾಗಿ ಏಕೆ ಹೇಳಬಾರದಾಗಿದ್ದಿತು ?' ಎಂದು ಕೆಲವರು ಸಂದೇಹವನ್ನು ಎತ್ತಬಹುದು. ಆದರೆ ಭಕ್ತಕವಿಗಳು 'ನರಸ್ತುತಿ' ಮಾಡುವುದೆಂದರೆ ಅದೊಂದು ದೊಡ್ಡ ಅಪರಾಧ. ಎಂತಲೆ ಕುಮಾರವ್ಯಾಸ, ಕುಮಾರ-ವಾಲ್ಮೀಕಿ, ಭಾಗವತದ ಕವಿಗಳು, ಲಕ್ಷ್ಮೀಶ ಇವರಲ್ಲಿಯ ಯಾರೊಬ್ಬರೂ, ತಮಗೆ ಆಶ್ರಯವನ್ನಿತ್ತ ದೊರೆಗಳ ಹೆಸರನ್ನು ಕೂಡ ಹೇಳಿಲ್ಲ. ಕುಮಾರ-ವ್ಯಾಸ, ಕುಮಾರವಾಲ್ಮೀಕಿಯರ ಪರಂಪರೆಯನ್ನೇ ಎತ್ತಿದ* ಕನಕದಾಸರೂ ತಮ್ಮ ದೊರೆಯ ಹೆಸರನ್ನು ಬಿಚ್ಚುಮಾತಿನಲ್ಲಿ ಹೇಳಿಲ್ಲ, ಬಿಚ್ಚುಮಾತಿನಲ್ಲಿ

---

* ಉರಗಾಲಯವೆ ಪೆಸರ್ವಡೆದನ, ಮತ್ಸ್ಯೋದರ ಜಾತೆಯಾತ್ಮಸಂಭವನ
ವರಪುರಾಣಂಗಳ ಕನ್ನಡಿಸಿದ ಕವಿವರರ ಕೊಂಡಾಡುವೆ ಮುದದಿ ! ॥

(ಸಂಧಿ ೧ ಪದ್ಯ ೧೭)

ಹೇಳಿಲ್ಲವಾದರೂ ಮುಚ್ಚುಮಾತಿನಲ್ಲಿ ತುಂಬ ಹೇಳಿದ್ದಾರೆಂಬುದನ್ನು, ಈ ಕಾವ್ಯವನ್ನೋದಿದವರು ಸ್ಪಷ್ಟವಾಗಿ ಕಂಡುಕೊಳ್ಳಬಹುದು.

**೨೧.** ಇಲ್ಲಿಯ ವರೆಗಿನ ವಿವರಣೆಯಿಂದ ಸಿದ್ಧಮಾಡಬೇಕಾಗಿದ್ದ ಮಾತೆಂದರೆ: ಕನಕದಾಸರು ಶ್ರೀಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರದಲ್ಲಿಯೆ ಇದ್ದರು; ವಿಜಯನಗರದಲ್ಲಿ ರಾಜಕೀಯವಾಗಿ ನಡೆಯುತ್ತಿದ್ದ '**ವಸಂತೋತ್ಸವ**'ಕ್ಕೆಂದು* ಕಾಮನ ಕಥೆಯು ಪ್ರಧಾನವಾಗಿದ್ದ '**ಮೋಹನತರಂಗಿಣಿ**'ಯನ್ನವರು ಶ್ರೀಕೃಷ್ಣದೇವರಾಯನ ಪ್ರೋತ್ಸಾಹನೆಯಿಂದಲೆ ರಚಿಸಿದರು; ಎಂತಲೆ ಅವರ ಈ ವರ್ಣಕಕಾವ್ಯದಲ್ಲಿ ಎಲ್ಲೆಲ್ಲಿಯೂ—ಯಾವಯಾವ ಸಂದರ್ಭದಲ್ಲಿಯೂ—ವಿಜಯನಗರದ ವೈಭವದ ಕಾಲದ ಜನಜೀವನವೇ ಪಡಿಮೂಡಿರುತ್ತದೆ. ಈ ಕಾವ್ಯದಲ್ಲಿಯೇ ನಾವು ಕನಕದಾಸರು ಕಂಡ ವಿಜಯನಗರದ ಚಿತ್ರವನ್ನು ಸ್ಪಷ್ಟವಾಗಿ ನೋಡುವೆವು; ಶ್ರೀಕೃಷ್ಣದೇವರಾಯನೇ ಕಥಾನಾಯಕನಾದ 'ಕೃಷ್ಣರಾಯ'ನಾಗಿ ವರ್ಣಿತನಾಗಿರುವನೆಂದು ಹೇಳುವ ಎದೆಗಾರಿಕೆಯುಳ್ಳವರಾಗುವೆವು

**೨೨.** ಮಹಾಕವಿಗಳ ಸಂಪ್ರದಾಯದಂತೆ ಕನಕದಾಸರೂ ಕಾವ್ಯ-ಪ್ರಾರಂಭದಲ್ಲಿ ಕಾವ್ಯನಾಯಕನ ದೇಶವನ್ನೂ ಪಟ್ಟಣವನ್ನೂ ವರ್ಣನೆ ಮಾಡಿರುವರು. ಈ ದೇಶವರ್ಣನೆಯೆಂದರೆ ಕನ್ನಡನಾಡಿನ ಎಂದರೆ ವಿಜಯ-ನಗರ ಪ್ರಾಂತ್ಯದ ವರ್ಣನೆಯೂ, ಪಟ್ಟಣದ ವರ್ಣನೆಯೆಂದರೆ ವಿಜಯನಗರದ ರಾಜಧಾನಿಯ ವರ್ಣನೆಯೂ ಆಗಿವೆ. ಈ ವರ್ಣನೆಗಳು ಕವಿಯ ಅಸ್ವಾಭಾವಿಕ ವರ್ಣನೆಗಳಾಗಿಲ್ಲ; ಇತಿಹಾಸಕಾರನ ವಾಸ್ತವ ವರ್ಣನೆಗಳಂತಿವೆ.

ವಿಜಯನಗರವನ್ನು ಕಣ್ಣಾರೆ ಕಂಡು ತುಂಬ ಬಣ್ಣಿಸಿದ ಪರದೇಶದ ಪ್ರವಾಸಿಗಳು ಎಷ್ಟೋ ಜನರು. ಅವರೆಲ್ಲ ವಿಜಯನಗರದಲ್ಲಿ ಸಾಕಷ್ಟು ದಿನ ಇದ್ದು ಹೋದವರು. ಅವರಲ್ಲಿ ಇಟಲಿಯ ಪ್ರವಾಸಿಯಾದ **ನಿಕೋಲೊ ಕೊಂಟಿ** (೧೪೨೧), ಇರಾಣದಿಂದ ರಾಯಭಾರಿಯಾಗಿ ಬಂದ **ಅಬ್ದುಲ್ ರಝಾಕ್** (೧೪೪೩), ಇಟಲಿಯ ಇನ್ನೊಬ್ಬ ಪ್ರವಾಸಿ-

* ಪುಣೆಯ ಭಾಂಡಾರಕರ ಓ. ರಿ. ಇನ್‌ಸ್ಟಿಟ್ಯೂಟಿಗೆ, ತಂಜಾವರದ ಲೈಬ್ರರಿಯಿಂದ "ಆಕಾಶಭೈರವಕಲ್ಪ" ಎಂಬ ಗ್ರಂಥವೊಂದು ಬಂದಿರುವುದೆಂದೂ, ಅದು ವಿಜಯನಗರದ ರಾಜರ ಕಾಲದ ಸಾಮ್ರಾಜ್ಯಸಂಪ್ರದಾಯಗಳನ್ನು ಸೂಚಿಸುವುದಕ್ಕಾಗಿ ರಚಿತವಾದ ಗ್ರಂಥವೆಂದೂ, ಆ ಗ್ರಂಥದ ಒಂದು 'ಪಟಲ'ವು ಫಾಲ್ಗುಣಮಾಸದಲ್ಲಿಯ 'ಕಾಮ-ವ್ರತ'ದ ವಿವರಣೆಯಿಂದ ಕೂಡಿರುವುದೆಂದೂ ಕೇಳಿದ್ದೇನೆ; ಗ್ರಂಥವನ್ನು ನೋಡಿಲ್ಲ.

ಯಾದ **ವರ್ಥೇಮ್** (೧೫೦೫), **ಪೋರ್ತುಗೀಜ್** ಪ್ರವಾಸಿಗಳಾದ **ಬಾರ್ಬೋಸಾ** (೧೫೧೪) **ಡಾಮಿಂಗೊ ಪಾಯೆಸ್** (೧೫೨೦) **ಫರನಾವೊ ನೂನಿಝ್** (೧೫೩೫–೩೭) ಇವರೆಲ್ಲ ಬರೆದಿಟ್ಟ ವಿಜಯನಗರದ ವರ್ಣನೆಗೆ ಕನಕದಾಸರ ರಾಜಧಾನಿಯ ವರ್ಣನೆಯನ್ನು ಹೋಲಿಸಿನೋಡಿದರೆ, ಕನಕದಾಸರು ಹೇಳಿದ '**ಶ್ರೀಕೃಷ್ಣನ ದ್ವಾರಾವತಿಯು**' ಶ್ರೀಕೃಷ್ಣದೇವರಾಯನ ವಿಜಯನಗರ ಎಂಬುದು ಗೊತ್ತಾಗದಿರದು. ಅದರಂತೆಯೆ ದ್ವಾರಾವತಿಯಿದ್ದ ಸೌರಾಷ್ಟ್ರದೇಶವು **ಕರ್ಣಾಟಕ**ವೆ ಎಂದು ಎನಿಸದಿರದು. ಕಾವ್ಯಸಾಂಪ್ರದಾಯಿಕವಾದ ಅಲಂಕಾರಗಳನ್ನೂ ಭಾಷಾರೀತಿಯನ್ನೂ ಬಿಟ್ಟರೆ, ಈ '**ಮೋಹನತರಂಗಿಣಿ**' ಯಲ್ಲಿಯ ವಿಜಯನಗರದ ವರ್ಣನೆಗೂ ಕಣ್ಣಾರೆ ಕಂಡವರ ಐತಿಹಾಸಿಕ ವರ್ಣನೆಗೂ ವಿಶೇಷ ವ್ಯತ್ಯಾಸವೇನೂ ಇಲ್ಲ. ಇಷ್ಟೇ ಅಲ್ಲ, ಸೂಕ್ಷ್ಮದೃಷ್ಟಿಯ ಕನಕದಾಸರು ಕೆಲಕೆಲವು ವಾಸ್ತವಸಂಗತಿಗಳನ್ನು ಆ ಪರದೇಶದ ಯಾತ್ರಿಕರಿಗಿಂತ ಹೆಚ್ಚು ವಿಶದವಾಗಿ ವಿವರಿಸುತ್ತಾರೆ. ಕನಕದಾಸರ ಈ ವರ್ಣನಾಭಾಗವು ಅಂದಿನ ವಿಜಯನಗರದ ಕನ್ನಡ ಜನಜೀವನವನ್ನು **ಕಿರಣಚಿತ್ರಯಂತ್ರ**(ಕ್ಯಾಮೆರಾ)' ದಂತೆ ಅಚ್ಚುಕಟ್ಟಾಗಿ ಹೇಗೆ ಮೂಡಿಸಿಕೊಂಡಿದೆಯೆಂಬುದನ್ನು ದಾಸರ ಮಾತುಗಳಿಂದಲೆ ಹೇಳುವುದು ಹೆಚ್ಚು ಒಳ್ಳೆಯದು.

**೨೩.** '**ಮೋಹನತರಂಗಿಣಿ**' ಕಾವ್ಯಪ್ರಾರಂಭದ '**ದೇಶ-ಪುರ**' ವರ್ಣನೆಯಲ್ಲಿ ಕನಕದಾಸರು, ತಮ್ಮೊಂದಿಗೆ ಓದುಗರನ್ನೂ ವಿಜಯನಗರದ ರಾಜ್ಯದೊಳಗೆಲ್ಲ ಸುತ್ತಾಡಿಸುತ್ತ ಪಟ್ಟಣಕ್ಕೆ ಕರೆದುಕೊಂಡು ಬರುವರು. ಅವರು ಹೊರಟ ದಾರಿಯಲ್ಲಿ ಎಲ್ಲೆಲ್ಲಿಯೂ ನಗರ, ಪಟ್ಟಣ, ಖೇಡ, ಖರ್ವಡ, ಪುರ, ಗ್ರಾಮಗಳೆಂಬುವೇ ನಾನಾ ಹೆಸರುಗಳನ್ನಾಂತು ಸೊಗಯಿಸುತ್ತಿರುವುವಲ್ಲದೆ, ಹಾಳಾದ ಪಾಳುಹಳ್ಳಿಗಳು ಇರಲೆ ಇಲ್ಲ. ಅಲ್ಲಲ್ಲಿ ಹೊಳೆ-ಹಳ್ಳಗಳು; ಅವುಗಳ ತೀರದಲ್ಲಿ 'ಷಡ್ದರ್ಶನಾರ್ಯ' ರಾದ ಬ್ರಾಹ್ಮಣರ ಅಗ್ರಹಾರಗಳು, ವೀರರಿಗೆ 'ವೀರಮಾನ್ಯ' ವಾಗಿ ಕೊಟ್ಟ ಪುರಗಳು ಒಪ್ಪುತ್ತಿರುವುವು. ಯಾವ ಯಾವ 'ಗ್ರಾಮ ಅನುಗ್ರಾಮ' ಗಳಲ್ಲಿಯೂ ಶಿವ-ವಿಷ್ಣುದೇವಾಲಯಗಳೂ, 'ಪಾತ್ರಭೋಗ ತೀವಿದ ವೃಷ್ಟಾನ್ನಸತ್ರ' ಗಳೂ, ಅವುಗಳಿಗೆ ಹತ್ತಿರದಲ್ಲಿಯೆ ಕೊಳಗಳೂ ಇರುವುವು. ಎಲ್ಲ ಕಡೆಯಲ್ಲಿಯೂ 'ಸಮಯನಿಷ್ಠರೂ, ಉನ್ನತಕೀರ್ತಿವಿದರೂ, ವಿಕ್ರಮ-ವಿದ್ಯಾ-ಭಾಗ್ಯಾಧಿಪರೂ (ಪರಾಕ್ರಮ ವಿದ್ಯೆ ಧನಸಂಪತ್ತಿಗಳುಳ್ಳವರೂ), ಸುಮತಿಗಳೂ, ಅಭವಾಚ್ಯುತ (ಶಿವ-ವಿಷ್ಣು) ಭಕ್ತರೂ' ವಾಸಿಸುತ್ತಿರುವರು.

ಕನಕದಾಸರು ಹೊರಟ ದಾರಿಯಲ್ಲಿ ಅಲ್ಲಲ್ಲಿ 'ಕೆರೆಬಾವಿಗಳಿಲ್ಲದ ಅಗ್ಗಡದ ಎಡೆಗಳು' ಇದ್ದುವು. ಅಂತಹ ಸ್ಥಳಗಳಲ್ಲಿ ಧರ್ಮಿಷ್ಠರು 'ಕಂಬಿಯೊಳ್ (ಕಾವಡಿಗಳಲ್ಲಿ) ತೊರೆನೀರ ತರಿಸಿ' ನಿರ್ಮಿಸಿದ ಅರವಟ್ಟಿಗೆಗಳು ಇದ್ದುವು. ಕೆರೆ-ಬಾವಿಗಳು ಇಲ್ಲದೆಡೆಯಲ್ಲಿ ನೆರಳನ್ನು ಕೊಡುವ ಮರಗಳೂ ಇರಲಾರವಲ್ಲವೆ! ಅದಕ್ಕಾಗಿ 'ಪಟಬದ್ಧ ದೀರ್ಘದಂಡಾಂಕ ಸರಾಶ್ರಯು ಮಠ' ಗಳು ಎಂದರೆ ಡೇರೆಯುಗಳೂ ಗುಡಾರಗಳೂ ಇದ್ದುವು; ಇವಿದ್ದ ಕಡೆಗಳಲ್ಲೆಲ್ಲ ಭುಕ್ತಶಾಲೆ (ಊಟದ ಮನೆ) ಗಳೂ 'ಕಂಪೆಸೆವ ಘಟಪೂರಿತ ಗಂಧಶೈತ್ಯೋದಕದ ಅರವಟಿಗೆಯ ಮನೆಗಳೂ' ಒಪ್ಪುತ್ತಿರುವುವು.

ದಾರಿದಾರಿಯ 'ಉಭಯತಟದ ಸಾಲುಮರದೊಳು' ದಾರಿಕಾರರನ್ನು ಕರೆಕರೆದು 'ಬೆಲ್ಲದ ಪಾನಕವೆರೆದು, ಅಲ್ಲದ ಕೆನೆಮೊಸರಶನವ (ಬುತ್ತಿಯನ್ನು) ಎಲ್ಲರಿಗೂ ಉಣಬಡಿಸುವರು; ಆದರೆ ಶ್ರೀವೈಷ್ಣವರ ಆಚಾರ ಮಿಕ್ಕವರ ಹಾಗಲ್ಲ, ಅವರು 'ಅತಿ ಶೀಲವಂತರು, ಏಕವ್ರತದ ಭೂಸುರರು'. ಆದುದರಿಂದ ಅವರಿಗಾಗಿ ನಿರ್ಮಿತವಾದ '**ಏಕಾಂತ ನಿಳಯು**' ಗಳಲ್ಲಿ ಅವರು, ತಾವು ಒಬ್ಬೊಬ್ಬರೆ 'ಸ್ವಯಂಪಾಕವ ಮಾಡಿ ಭುಂಜಿಪರು'. ಅಲ್ಲಲ್ಲಿ ದಾರಿಕಾರರಾದ ಬ್ರಾಹ್ಮಣರಿಗೆ 'ನಾಗವಲ್ಲಿಯ ಪರ್ಣ (ವೀಳ್ಯದೆಲೆ), ಚೂರ್ಣ (ಸುಣ್ಣ), ಸುಕರ್ಪೂರಪೂಗ (ಅಡಿಕೆ) ಇವುಗಳನ್ನು ಪ್ರಮಾಣ ಮರಿತು ಹಾಕಿದ ತಾಂಬೂಲದಿಂದಲೂ ಕೇಶರ ಬೆರೆತ ಗಂಧದಿಂದಲೂ ಹೂಗಳಿಂದಲೂ '**ಭೋಗ**' ಗಳನ್ನು ಸಲ್ಲಿಸುತ್ತಿದ್ದರು.

ಅಲ್ಲಲ್ಲಿಯ ಕೆರೆಗಳು, ಶಿವನ ಧನುಸ್ಸನ್ನು 'ಸಿಂಜಿನಿಯಿಂದೆ ನೆರೆಬಾಗಿಸಿದರೆಂಬಂತೆ, **ಒರೆಗಲ್ಲುಗಳ** ಕೀಲಿಸಿದ ಏರಿಗಳಿಂದ' ಒಪ್ಪುತ್ತಿದ್ದುವು. ಎಲ್ಲ ಕೆರೆಗಳೂ ವಿಸ್ತಾರವಾದುವು, ಸಿಹಿನೀರಿನಿಂದ ತುಂಬಿದುವು. ಎಂತಲೆ ಅವು :

**"ಜಲವಿದ್ದೊಡೇನೋ! ಪಾನಕೆ ಯೋಗ್ಯವಲ್ಲ, ಸತ್-**
**ಫಲಭೋಗಕೊದವುವುದಲ್ಲ;**
**ಮಲಿತ ವೈನೀರೆಂದು ಸಿಂಧುವ ಜರೆದಿಳೆ-**
**ಗೊಲವೀವ ಕೆರೆಗಳೊಪ್ಪಿದುವು."**

**('ಬರಿಯೆ ನೀರಿದ್ದರೇನಾಯಿತು? ಕುಡಿಯಲಿಕ್ಕೆ ಬರುವಂತಿಲ್ಲ; ಬೆಳೆ-ಬೆಳಸುಗಳಿಗೆ ಬರುವಂತಿಲ್ಲ. ನಿಂತಲ್ಲಿ ನಿಂತು ಕೊಳೆತ ಮೂತ್ರವದು' ಎಂಬುದಾಗಿ ಅಲ್ಲಿಯ ಕೆರೆಗಳು ಕಡಲನ್ನು ಕೆಣಕಿ ನುಡಿಯುತ್ತಿದ್ದುವು.)**

ಕೆರೆಗಳ ತೂಬಿನಿಂದ ಹೊರಟು ಹರಿಯುತ್ತಿರುವ ಕಾಲುವೆಗಳು, 'ಮಳೆಗಾಲದೊಳುಬ್ಬಿ ಬೇಸಗೆಯೊಳು ಕಾಲುವೊಳೆಯಾದುದು'— ಎಂಬ ನಿಂದೆಯನ್ನು ತಳೆಯದೆ, ಎಲ್ಲ ಪ್ರದೇಶದಲ್ಲಿಯೂ ನೀರನ್ನು ತುಂಬಿಕೊಂಡು ಓಡುತ್ತಿರುವುವು. 'ಭಾಗೀರಥೀ ದೇವಿಯರು ಸಾಸಿರವೊಗವಾಗಿ ಸಾಗರಕ್ಕೆ ಬೆರೆದಂತೆ' ಆ '**ಪರಿಗಾಲುವೆ**' ಗಳೂ 'ಸಾಸಿರವೊಗವಾಗಿ ಸದ್ವಾನವ ಸಾರಿದುವು'!

ತುಂಗಭದ್ರೆಯ ಕಾಲುವೆಗಳಿಂದ ಪೋಷಿತವಾದ 'ಬೆಳ್ಗಬ್ಬುಗಳ ತೋಟ' ವಿಜಯನಗರದ ಬಳಿ ಬಹಳವಲ್ಲವೆ? ಆ ತೋಟಗಳಲ್ಲಿ 'ಕಂದು-ಗೊರಲನೊಳು ಕಾದಲ್ಕೆ ತನ್ನದೊಂದು ಬಿಲ್ಲದು ಸಾಲದೆಂದು' ಸ್ಮರನು 'ತಂದಿಲ್ಲಿ ಬೆಳಸಿದನೆಂಬಂತೆ ಬೆಳ್ಗಬ್ಬು' ಸಂದಣಿಸಿದ್ದಿತು. ಆಲೆಮನೆಗಳಿಗಾಗಿ ಜನರು 'ಕುಡುಗೋಲು'ಗಳಿಂದ ಕಬ್ಬುಗಳನ್ನು ಕಡಿಯುತ್ತಿದ್ದರು; ಅದನ್ನು ಕನಕದಾಸರು ಹೇಗೆ ಉತ್ಪ್ರೇಕ್ಷಿಸಿರುವರು ಗೊತ್ತೇ ?

**"ಖಂಡೆವೆಂಗಳನಗಲಿದ ಚದುರರು ತಮ್ಮ**
**ದಂಡಿಪ ಸ್ಮರಚಾಪವೆಂದು,**
**ಭಂಡಿಪೆರ್ಗುಡುಗೋಲುಗಳಿಂದಲಡಿಗಿಕ್ಕಿ**
**ಖಂಡಿಸುವರು ಕಬ್ಬುಗಳನು".**

ಆಲೆಯ ಮನೆಮನೆಗಳ ಮುಂದೆ 'ಮುದ್ದು ನಾಲುಕು ಮೂಲೆ ಯಾದಂತೆ' ಇರುವ 'ತನಿಬೆಲ್ಲದ ಉದ್ದುಕ (ಚಚ್ಚೌಕಾದ ಬೆಲ್ಲದಚ್ಚು)' ಗಳೂ 'ಹೆದ್ದೊರೆಯ ಮಳಲೊಟ್ಟಿಲಂತೆ ವರಪಂಚದಾರೆ (ಸಕ್ಕರೆ)' ಯೂ ಬೇಕಾದಷ್ಟು ಬಿದ್ದಿರುವುದು. ಅಲ್ಲಲ್ಲಿ ಗಂಧಶಾಲಿಯ ವನಗಳೂ, ಪೂದೋಟಗಳೂ, ಕೇಳಿಯ ವನಗಳೂ 'ಪುರಲಕ್ಷ್ಮಿಯ ತಾಳಿಯ ಮರಕತದಂತೆ' ಇದ್ದುವು.

೨೪. ಕನಕದಾಸರ ದಾರಿಯೀಗ ರಾಜಧಾನಿಯನ್ನು ಸಮೀಪಿಸಿ ನಡೆಯಿತು. ಅಲ್ಲಿಯ ದಾರಿಯುದ್ದಕ್ಕೂ 'ಪಲಸು, ನೇರಿಲು, ಚೂತ (ಮಾವು), ಪಿಚುಮಂದ (ಬೇವು), ನ್ಯಗ್ರೋಧ (ಆಲ), ಚಲಪತ್ರ (ಅರಳಿ), ಬಿಲ್ವ, ಅಮಲಕ (ನೆಲ್ಲಿ)' ಮೊದಲಾದ ಸಾಲುಮರಗಳು

ಒಪ್ಪುತ್ತಿದ್ದುವು.* ರಾಜಧಾನಿಯ ಹೊರವಳಯದಲ್ಲಿ ಅನೇಕ ಪುಷ್ಕರಿಣಿಗಳೂ, ಹೊಂಗಳಸದ ದೇಗುಲ ಸಾಲೂ, 'ಬೇದಕ್ಕರಿಗರ ಜಪಶಾಲೆ' ಗಳೂ, 'ಸೊಕ್ಕಾನೆ-ಕುದುರೆಯ ವೈಹಾಳಿಯ ಅಂಕಣದಿಕ್ಕೆ (ಗುರುತುಮಾಡಿದ ಸ್ಥಳ) ಗಳೂ ಕಣ್ಣುಮನಸ್ಸುಗಳನ್ನು ರಂಜಿಸುತ್ತಿದ್ದುವು. ರಾಜಧಾನಿಯ ಬಳಿಯಲ್ಲಿ ಗೋಮತೀ (ತುಂಗಭದ್ರೆ ವಿಜಯನಗರದ ಬಳಿಯಲ್ಲಿದೆ) ನದಿಯು ಹರಿದಿರುವುದು.

ರಾಜಧಾನಿಯನ್ನು ಬಳಸಿದ ಕೋಟೆಯನ್ನು ನೋಡಿದ ಕನಕದಾಸರು ಅದರ 'ಕೊತ್ತಳ ನಿಚಯ' 'ತೆನೆ' 'ಅಕ್ಶೇರಿ' 'ಹುಲಿಮೊಗ' 'ಹೊನ್ನಗಸೆ' 'ಕವಾಟ' ಇವುಗಳನ್ನು ಒಂದೊಂದಾಗಿ ಬಣ್ಣಿಸಿ ಹೇಳಿ, ಬಳಿಕ ರಾಜಧಾನಿಯ ಮುಖ್ಯಭಾಗವಾದ **'ಸೋಮಸೂರಿಯ ವೀಧಿ'** ಯಲ್ಲಿ ಹಾಯಿಸಿ ನಮ್ಮನ್ನು ಕರೆದುಕೊಂಡೊಯ್ಯುವರು. ಆ ವೀಧಿಗಳ ಇಕ್ಕೆಲದಲ್ಲಿಯೂ 'ಹೇಮನಿರ್ಮಿತ ಸೌಧದ ಓಳಿ, ರಾಮಣೀಯತೆ ವೆತ್ತ ಕಳಸದ ಅಂಗಡಿ' ಇರುವುವು. ಆ 'ಪೇಟೆಯ ಭಾಗದ' ಅಂಗಡಿಗಳೆಲ್ಲ, 'ಆಗಮಜ್ಞರು (ನಗರರಚನಾ ಶಾಸ್ತ್ರವನ್ನು ಬಲ್ಲವರು)' ಜನರಿಗೆ ಅನುಕೂಲವಾಗುವಂತೆ ಬೇರೆಬೇರೆಯಾಗಿ ಹಂಚಿಕೊಟ್ಟ ಸ್ಥಳಗಳಲ್ಲಿರುವುವು.

**೨೫.** ಮೊದಲು **ತಂಬುಲಿಗರ 'ಬೆಳ್ಳೆಲೆಗಳ ಅಂಗಡಿ'** ಗಳು. ಆಮೇಲೆ **ಗಂಧದ ತಿಗುರು**ಗಳನ್ನು ತೇಯುತ್ತಿರುವ 'ಹೆಂಗಳಡಸಿದ ಅಂಗಡಿಗಳು'. ಬಳಿಕ ಸುರಗಿ, ಸೇವಂತಿಗೆ, ಕುಂದ, ಮಂದಾರ, ಪಾದರಿ, ಕಂಚಿ, ಕಣಿಗಿಲೆ, ದವನ, ಬಿರಿದ ಕೆಂಜಾಜಿ (ಗುಲಾಬಿ)† ಮೊದಲಾದುವುಗಳುಳ್ಳ

---

* "ಪೋರ್ತುಗೀಜರ ಅಧೀನದ ಪ್ರದೇಶ ಮತ್ತು ವಿಜಯನಗರದ ರಾಜ್ಯ ಇವುಗಳಲ್ಲಿಯ ಹಳುವುಗಳ ಹೊರತು ಇಲ್ಲಿ ಗಿಡ-ಮರಗಳು ಹೆಚ್ಚಾಗಿ ಕಂಡುಬಾರವು. ಅಲ್ಲಲ್ಲಿ ದಾರಿಗಳ ಎರಡೂ ಬದಿಗಳಲ್ಲಿ, ಹರದಾರಿಯುದ್ದಕ್ಕೂ ಸಾಲುಮರಗಳೂ ತೋಪುಗಳೂ ಇರುವುವು. ಸಣ್ಣದೊಡ್ಡ ಗ್ರಾಮ-ನಗರಗಳ ನೆರೆಹೊರೆಯಲ್ಲಿಯೂ ಹಲಸು, ಮಾವು, ಹುಣಸಿ, ಬಸರಿ, ಇಪ್ಪೆ ಮೊದಲಾದ ಗಿಡಗಳ ಗುಂಪುಗಳಿರುತ್ತವೆ."

—ಡಾಮಿಂಗೊ ಪಾಯೆಸ್

† "ಇಲ್ಲಿ ಎಲ್ಲೆಲ್ಲಿಯೂ ಗುಲಾಬಿ ಹೂಗಳನ್ನು ಮಾರಲಿಕ್ಕೆ ಇರಿಸಿರುವರು. ಈ ಹೂಗಳನ್ನು ಬಿಟ್ಟು ಇಲ್ಲಿಯ ಜನರು ಇರಲಾರರು. ಹೂಗಳೆಂದರೆ ಇಲ್ಲಿಯವರಿಗೆ ಅನ್ನನೀರುಗಳಂತೆ—ಒಮ್ಮೊಮ್ಮೆ ಅವಕ್ಕಿಂತ ಹೆಚ್ಚೆಂದೂ ಹೇಳಬಹುದು—ಅವಶ್ಯಕವೆನಿಸುವುವು......."

—ಅಬ್ದುಲ್ ರಝಾಕ್

'**ಪುಷ್ಪದಂಗಡಿ**' ಗಳು ಪರುಠವಿಸಿರುವುವು. ಹಾಗೆಯೆ ಮುಂದೆ ಹೋದರೆ 'ಭೋಜಿಪ ಕರ್ಪೂರ, ಕಸ್ತೂರಿ ಜೀರ್ಣಜವಾಜಿ, ಪುಣುಗು, ಬಹುವಿಧದ ತೈಲ' ಇವೆಲ್ಲವುಗಳಿಂದ 'ಸೋಜಿಗವಡೆದ **ಸುಗಂಧದ ಅಂಗಡಿ**' ಗಳು ಇಕ್ಕೆಲದಲ್ಲಿಯೂ ರಾಜಿಸುತ್ತಿರುವುವು. ಅಲ್ಲಿಯೆ ಮುಂದೆ '**ಗಂದಿಗವಸರ**' ಗಳು 'ಹೆಸರುಪಡೆದ ದಿವ್ಯಮೂಲಿಕೆ (ಔಷಧೀ ಬೇರು), ಪಾಷಾಣ (ಸೋಮಲ), ರಸದ್ರವ್ಯ (ಪಾರದಾದಿ ರಸಾಯನಗಳು), ಸಕಲಸಂಭರ (ಎಲ್ಲ ಬಗೆಯ ಮಸಾಲೆ) ಇವುಗಳನ್ನು ಜೇಡಿದೊಡನೆಯೆ ತೂಗಿಕೊಡುವ '**ಗಂದಿಗ**' ರಿಂದ ಕೂಡಿಕೊಂಡು ಶೋಭಿಸುವುವು. ಅಲ್ಲದೆ ಉತ್ತುತ್ತಿ, ಖರ್ಜೂರ, ದ್ರಾಕ್ಷಿ, ಸಕ್ಕರೆಯನ್ನೊ ಬೆಲ್ಲವನ್ನೊ 'ಮೆತ್ತುಯಿಸಿದ ಕಾಯಭಾಗ (ಕೊಬ್ಬರಿ)' ಇವುಗಳನ್ನು ಇಟ್ಟುಕೊಂಡು ಮಾರುವ '**ಪಣ್ಪಸರಂಗಳು**' ಎರಡುಬದಿಗಳಲ್ಲಿಯೂ ಇರುವುವು. ಮತ್ತೊಂದು ಕಡೆಯಲ್ಲಿ 'ಗೋದಿ, ಕಡಲೆ, ನಾನಾಧಾನ್ಯಂಗಳ ರಾಶಿ' ಗಳನ್ನು ಒಳಗೊಂಡ ಅಂಗಡಿಗಳು ರಂಜಿಸುವುವು.* ಅಲ್ಲಿಯೆ 'ಮುಂಗಡೆಯೊಳು **ಚಿತ್ರಗೆಲಸಿ** (ಬಟ್ಟೆಗಳಿಗೆ ಚಿತ್ರದ ಅಚ್ಚುಗಳನ್ನೊತ್ತುವವರು)ಗಳ, **ಚಿಪ್ಪಿಗರ** ಮತ್ತು ಆಯುಧ ಗಳನ್ನು ಮಾರುವವರ ಕೇರಿಗಳಿರುವುವು.

ಹಾಗೆಯೆ ಸಾಗಿದರೆ ವಿವಿಧ ಉದ್ಯೋಗಗಳನ್ನು ಕೈಕೊಂಡ '**ಪಾಂಚಾಳ**' ರು ಇರುವರು. ಇವರಲ್ಲಿ ಕೆಲವರು **ಕಂಚುಗಾರರಾ**ಗಿರುವರು; ಇನ್ನು ಕೆಲವರು **ಕೈದುಗಾರರಾ**ಗಿರುವರು. ಬೇರೆ ಕೆಲವರು '**ಪೊಳೆವ ಹೊಮ್ಮಂಚಗಾರ**' ರಾಗಿರುವರು. ಅನೇಕರು **ಶಿಲ್ಪಿಗರೂ ಸಂಚುಗಾರರೂ** (ವಾಸ್ತುವಿದ್ಯಾತಜ್ಞರು) ಆಗಿ ವಿದ್ಯಾಧಿಕರಾಗಿರುವರು. ಅಲ್ಲಿಯೆ ಇಕ್ಕೆಲದಲ್ಲಿ **ಬಳೆಗಾರರೂ** ಇದ್ದರು. ಅವರು '**ಕಳೆವೆತ್ತ ವಾರನಾರಿಯರ ಕನ್ನಿಕೆಯರ ಮೊಳೆಮೊಲೆಗಳ ನೋಡಿ ನಗುತ, ಎಳವೆರಲ್ಗಳ ಚಿಟುಕೊತ್ತಿ (ಬೆರಳುಗಳನ್ನು ಲಟಕ್ಕೆನ್ನಿಸಿ)**' ಅವರಿಗೆ ಬಳೆದೊಡಿಸುತ್ತಿರುವರು. ಇವುಗಳನ್ನು ದಾಟಿದರೆ ಮುಂದೆ ಜವುಳಿಯಂಗಡಿಯ '**ಸಾಲುಮಳಿಗೆ**' ಗಳು

---

* "ಬೇರೆ ಬೇರೆ ಒಡವೆ-ವಸ್ತುಗಳಿಂದಲೂ ಧಾನ್ಯಸಾಮಗ್ರಿಯಿಂದಲೂ ತುಂಬಿ ಸೂಸುವ ಇಂತಹ ಪಟ್ಟಣವು ಜಗತ್ತಿನಲ್ಲಿಯೆ ಇನ್ನೆಲ್ಲಿಯೂ ಇಲ್ಲ. ಅಕ್ಕಿ, ಗೋದಿ, ಕಡಲೆ ಇವುಗಳ ಸಂಗ್ರಹವು ವಿಪರೀತವಾಗಿರುವುದು. ಆದರಂತೆಯೆ ಇಲ್ಲಿಯ ಜನರು ಯಾವಾಗಲೂ ಬಳಸುವ ಅವರೆ, ಹೆಸರು, ತೊಗರಿ, ಜೆನ್ನಂಗಿ, ಹುರುಳಿ ಇವುಗಳ ಸಂಗ್ರಹವೂ ಸಾಕಷ್ಟಿದ್ದು ದರವು ಸುಲಭವಾಗಿರುವುದು......."

—ಡಾ. ಮಿಂಗೊ ಪಾಯೆಸ್.

ಎರಡು ಬದಿಗಳಲ್ಲಿಯೂ ಇರುವುವು. ಆ ಅಂಗಡಿಗಳಲ್ಲಿ ಹಲವು ದೀಪ್ತಿಯ ಪಟ್ಟೆ (ಮೆರುಗಿನ ಬಟ್ಟೆಗಳು), ಝುಲ್ಲಿ (ಜಾಳಿಗೆ ಜಾಳಿಗೆಯ ಬಟ್ಟೆಗಳು), ನಾನಾವರ್ಣದಳೆದ ಚಿತ್ರಾಂಬರನಿಚಯ (ಹಲವು ಬಗೆಯ ಬಣ್ಣದ ಚೀಟು ಬಟ್ಟೆ), ಉತ್ತಮವಾದ ಉಡುವ ಬಟ್ಟೆಗಳು.. ಇವೆಲ್ಲ ಒಟ್ಟೊಟ್ಟಿಲಾಗಿ ಇರುವುವು. ಅದಕ್ಕೆ ಮುಂದೆ ಹೋದರೆ 'ರಾರಾಜಿಪ ರತ್ನಭೂಷಣಂಗೆಯ್ವ **ಸೊನ್ನಾರ**ರ (ಅಕ್ಕಸಾಲಿಗರ)' ಅಂಗಡಿಗಳೂ, 'ಸಾಣೆಗಳ ಮೇಲೆ ರನ್ನಗಳನಿಟ್ಟು ಒಪ್ಪಗಾಣಿಸಿ ಕುಡುವ **ತೀಟಿಗರ**' ಮನೆಗಳೂ, 'ಆಣಿ ಮುತ್ತಿಗೆ ವೆಗ್ಗಳ ಬೆಲೆಕಟ್ಟುವ **ವಾಣಿಜರಂ**ಗಡಿ' ಗಳೂ ಕಂಗೊಳಿಸುತ್ತಿರುವುವು.* ಅಲ್ಲಿಯೆ 'ಚಪ್ಪನ್ನ ದೇಶದ ನಾಣ್ಯಯಂಗಳ ನೋಟ ತಪ್ಪದ (ಕೂಡಲೆ ಗುರುತಿಸುವ) ಚಪಲ **ಸೆಟ್ಟಿ**ಗಳು ಹಣಹೊನ್ನ ಕುಪ್ಪೆಯ ಮುಂದಿಟ್ಟುಕೊಂಡು ಕುಳಿತಿರುವರು. ಇನ್ನೊಂದು ಕಡೆಗೆ ಕಟ್ಟೆಗಳ ಮೇಲೆ 'ಒರೆಗಲ್ಲ ರಜವ ಮೇಣದೊಳೊತ್ತಿ ತೆಗೆದು ಅದನ್ನು ಕರಗಿಸಿ 'ಸುವರ್ಣ ಬಂಡುಗ (ಹುಡಿಯೆ?) ವ ನೆರೆದ ಯಾಚಕರಿಗೆ ಹಂಚಿಕೊಡುವ **ಚಿನ್ನ-ವರದರು** ಇರುವರು.

'**ಮರಕಾಲರು**' ಎಂದರೆ ಸಾಗರ ವ್ಯಾಪಾರಿಗಳು. ಇವರು ತಮ್ಮ ಹಡಗಿನ ವ್ಯವಹಾರದಿಂದ ಗಳಿಸಿದ ಧನವನ್ನು, ಎಣಿಸಲಾರದವರಾಗಿ ಹೇರು ಗಟ್ಟಲೆಯಿಂದ ತೂಗಿಕೊಳ್ಳುತ್ತಿರುವರು; ಅಪೇಕ್ಷಿಸಿದರೆ ಧನಪತಿಯಾದ ಕುಬೇರನಿಗೆ ಕೈಗಡವ ಕೊಡುವ ಯೋಗ್ಯತೆಯುಳ್ಳವರು.†

---

* "ಇಲ್ಲಿ ಬೇರೆ ಬೇರೆ ವರ್ಗದ ಮತ್ತು ಬೇರೆ ಬೇರೆ ವ್ಯವಸಾಯದ ಅಂಗಡಿಗಳು ಹತ್ತಿರ ಹತ್ತಿರದಲ್ಲಿಯೆ ಇರುವುವು. ರತ್ನಪಡಿ ವ್ಯಾಪಾರಸ್ಥರು ಬೇಕಾದ ಹಾಗೆ ಅಂಗಡಿಯ ಬೀದಿಗಳಲ್ಲಿಯೆ ಮುತ್ತು, ಮಾಣಿಕ, ಪಚ್ಚೆ, ವಜ್ರ ಮೊದಲಾದ ರತ್ನಗಳನ್ನು ಮಾರಲಿಕ್ಕೆ ಇಟ್ಟುಕೊಂಡು ಕುಳಿರುವರು........"

—ಅಬ್ದುಲ್ ರಝಾಕ್.

† "ಭಟಕಳದಲ್ಲಿ ಸಾಗರವ್ಯಾಪಾರವು ತುಂಬ ದೊಡ್ಡ ಪ್ರಮಾಣದಲ್ಲಿ ನಡೆಯುತ್ತದೆ. ಅಲ್ಲಿಂದ ಕಬ್ಬಿಣ, ತಾಜಾಮುಸಾಲಿಯ ದಿನಿಸು, ಅಳಲೀಕಾಯಿ, ಔಷಧಿ ಇವೆಲ್ಲ ಪರದೇಶಗಳಿಗೆ ಹೋಗುತ್ತವೆ. ಕುದುರೆ, ಮುತ್ತುಗಳು ಪರದೇಶಗಳಿಂದ ಅಲ್ಲಿಗೆ ಬರುತ್ತವೆ ....ಭಟಕಳದಲ್ಲಿ ಕೃಷ್ಣರಾಯನ ದಾಯಾದಿಯ ಮಗನೊಬ್ಬನು ಅಧಿಕಾರಿಯಾಗಿರುವ; ಅವನು ರಾಜಕೀಯ ವೈಭವದಲ್ಲಿರುತ್ತಾನಲ್ಲದೆ ಸ್ವತಃ ರಾಜನೆನಿಸಿಕೊಳ್ಳುತ್ತಾನೆ; ಆದರೂ ಕೃಷ್ಣದೇವರಾಯನಿಗೆ ಅಜ್ಞಾಧಾರಕನಾಗಿರುವನು.."

—ಡುಆರ್ಟೆ ಬಾರ್‌ಬೋಸಾ.

ಇವೆಲ್ಲ ಅಂಗಡಿಗಳಲ್ಲದೆ ವಿಜಯನಗರದಲ್ಲಿ ' ಎಡೆಯಾಟದ ವ್ಯವಹಾರಿ ಜನರು ' ಇದ್ದರು. ಈ ತಿರುಗಾಡಿ ಮಾರುವ ಜನರು ' ತೋಟ, ಕಾಡು, ಆರಂಬ, ಕರ್ಬುಗರ್ದೆ' ಇಲ್ಲಿಗೆಲ್ಲ ಸಾಮಾನುಗಳನ್ನು ಹೊತ್ತುಕೊಂಡೊಯ್ದು ವ್ಯಾಪಾರ ಮಾಡುವರು. ಕುದುರೆ, ರಥ, ಆನೆ. ದನಕರುಗಳನ್ನು ಮಾರಾಟ ಮಾಡುವ ಎಡೆಗಳೂ ಒಂದೊಂದು ಭಾಗದಲ್ಲಿ ಇರುವುವು; ಮುಂದೆ :

" ತಾಳ, ಮದ್ದಳೆ, ಪಾವುಜ, ಶ್ರುತಿ, ಮುಖವೀಣೆ
ಸಾಳಂಗ, ಶುದ್ಧಗಾನೆಯರ
ಮೇಳ, ನಟ್ಟುವ ನಾನಾವಿದ್ಯೆಗಳ ಗಟ್ಟಿ-
ವಾಳರ ಮನೆಗಳೊಪ್ಪಿದುವು."

ಹತ್ತಿರದಲ್ಲಿಯೆ ವಾರಾಂಗನೆಯರ ಮನೆಗಳಿರುವುವು. ಹಾಗೆಯೆ ಮುಂದಕ್ಕೆ ಬಂದರೆ ಬಾಹುಬಲಶಾಲಿಗಳಾದ ವೀರಕ್ಷತ್ರಿಯರ ವಸತಿಯಿರುವುದು. ಅದಕ್ಕೆ ಹೊಂದಿಯೆ ಬ್ರಾಹ್ಮಣರ ಕೇರಿಯಿರುವುದು. ಮಿಕ್ಕ ವಸತಿಗಳನ್ನೆಲ್ಲ ಒಂದೊಂದೆ ಮಾತಿನಲ್ಲಿ ಹೇಳಿ ಮುಗಿಸುತ್ತ ಬಂದ ಕನಕದಾಸರು, ಬ್ರಾಹ್ಮಣರ ಕೇರಿಯನ್ನು ವಿಶದವಾಗಿ ವರ್ಣಿಸಹೊರಟಿರುವರು. ' ಎಲ್ಲ ಬಗೆಯ ಸಂಸ್ಕೃತಿ ಸಂರಕ್ಷಕರೂ ಬ್ರಾಹ್ಮಣರೆ' ಎಂಬ ನಂಬುಗೆಯಿಂದಲೆ ಹೀಗೆ ಮಾಡಿರಬಹುದು. ಇಲ್ಲಿಯ ಬಾಹ್ಮಣಕೇರಿಯ ಸಹಜಸುಂದರ ವರ್ಣನೆ-ಯನ್ನು ನೋಡಿದರೆ ' ಕನಕದಾಸರು ಕುರುಬರೊ ಬೇಡರೊ ಆಗಿಯೆ ಇರಬಹುದೆ?' ಎಂಬ ಸಂದೇಹವುಂಟಾಗುವುದು. ಆ ಸಂದೇಹವನ್ನು ಸಮಾಧಾನಗೊಳಿಸುವಂತಹ ಇನ್ನಾವ ಪ್ರತ್ಯಕ್ಷಪ್ರಮಾಣಗಳೂ ದೊರೆಯದುದರಿಂದ, ಸಂದೇಹವು ಇನ್ನಿಷ್ಟು ಬಲವನ್ನು ಪಡೆಯುವುದು; ಏನೆ ಇರಲಿ, ಕನಕದಾಸರು ತೋರಿಸುವ ಬ್ರಾಹ್ಮಣರ ಕೇರಿಯನ್ನು ನಾವೀಗ ನೋಡೋಣ !

೨೬. ಬ್ರಾಹ್ಮಣರ ಮನೆಗಳ ರಚನೆ ಹೇಗಿದ್ದಿತು ? ' ಹೊಂದಗಡಿನ ಹೊದಕೆಯ ಮನೆ; ಬಹಳ **ನೇರ** ಎಂದರೆ ತುಂಬ ಅಚ್ಚುಕಟ್ಟಾದುವುಗಳು. ಮನೆಗಳಿಗೆ ' ಅಂದವಡೆದ ಪಟ್ಟಶಾಲೆಗಳು ; ಮುಂದೆಸೆಯಲಿ ತುಳಸಿಯ ಮಂಟಪದಿ ಗೋವಿಂದನ ಕೀರ್ತಿಸುತಿಹರು. ಮನೆಮನೆಗಳಲ್ಲಿಯೂ ಸಾತ್ತ್ವಿಕ-ಪುರಾಣ ಶಾಸ್ತ್ರಾರ್ಥಗೋಷ್ಠಿಗಳೂ, ಗಾಣದಂಡಿಗೆಯ ( ತಂಬೂರಿ ) ಭಾಗವತ ಸಂಕೀರ್ತನೆಯೂ' ಬಿಡದೆ ನಡೆದಿದುವುವು. ' ರಾಮಾನುಜ-

ವ್ಯಾಖ್ಯಾನ ಸುತತ್ತ್ವದ ಭೂವಿಬುಸುರರು' ಉತ್ಸವದಿಂದ ಗುಂಪುಗೂಡಿ, ಸಾಮವೇದದ ಘೋಷಣೆಯನ್ನೂ, ವಿಷ್ಣುಪ್ರೀತ್ಯರ್ಥವಾದ ಹೋಮ ಗಳನ್ನೂ ಮಾಡುತ್ತಿರುವರು. ಆವಶ್ಯಕವಿದ್ದ ಕೆಲವು ವಿದ್ಯಾರ್ಥಿಗಳಿಗೆ **'ಕೂಳು-ವೀಳೆಯುವ'** ಕೂಡ ಇತ್ತು, ಅವರನ್ನು ಶಿಷ್ಯರನ್ನಾಗಿ ಮಾಡಿ ಕೊಂಡು, ಪಾಠಗಳನ್ನು ಹೇಳುವ ಪಂಡಿತರು ಅಲ್ಲಿ ಪರಿಶೋಭಿಸುತ್ತಿದ್ದರು. 'ತತ್ತ್ವಾರ್ಥದ ಮರ್ಮವನರಿದ' ಪ್ರಾಜ್ಞೆಯರಾದ ಬ್ರಾಹ್ಮಣಿಯರು, ಕರ್ಮಕಾಂಡವನ್ನೆಲ್ಲ ತಿರಸ್ಕರಿಸಿ ಬಿಟ್ಟು, ಕೇವಲ ವಿಷ್ಣುಭಕ್ತಿಯಿಂದಲೆ ಪುರುಷಾರ್ಥಗಳನ್ನು ಪಡೆದವರಾಗಿ ಇರುತ್ತಿದ್ದರು. ಇವರಲ್ಲದೆ **ರವಿಸಿದ್ಧಾಂತ** (ಜ್ಯೋತಿಷ್ಯ) **ಪಾಠಕರು, ಅಷ್ಟಭಾಷಾಕವಿ-ಗಮಕಿ** ಗಳು, **ತಾರ್ಕಿಕರು** ಅಲ್ಲಿ ಇದ್ದರು. ಆಗಾಗ ಬಗೆಬಗೆಯ ವಿದ್ವತ್‌ಸಭೆ ಗಳೂ ನೆರೆಯುತ್ತಿದ್ದುವು. 'ಸಣ್ಣವರುಗಳನ್ನು (ಮಕ್ಕಳನ್ನು) ಓದಿಸು ತಿರ್ಪ **'ಕಸೆಯ ಕೋಲಣ್ಣಗಳ್'** (ಚಾಟಿಯನ್ನು ಹಿಡಿದುಕೊಂಡ ಪ್ರಾಥ- ಮಿಕ ಶಿಕ್ಷಕರು), ಹುಡುಗರಿಗೆ **'ಚೌಪದಿಗವಿತೆ'** ಗಳನ್ನು ಕಲಿಸು ತ್ತಿದ್ದರು. 'ಬಣ್ಣಗಂಬಿ (ಲೆಕ್ಕಣಿಕೆ) ಯ ಪುಸ್ತಕ ಲಿಖಿತಜ್ಞರು ಕನ್ನಡಕವ ತಾಳ್ದು ಇಹರು. (ದ್ವಾಪರಯುಗದ ಶ್ರೀಕೃಷ್ಣನ ದ್ವಾರಕೆಯಲ್ಲಿ ಇವೆಲ್ಲ ಹೀಗೆಯೆ ಇರುವುದು ಸಾಧ್ಯವಿದೆಯೆ ?)

ಬಳಿಕ ಕನಕದಾಸರು ಬ್ರಾಹ್ಮಣರ ಬೀದಿಯಲ್ಲಿಯ ಒಂದು ಮಧ್ಯಾಹ್ನ ವನ್ನು ತುಂಬ ಸೊಬಗಿನಿಂದ ಬಣ್ಣಿಸಿದ್ದಾರೆ :—

**೨೭.** ಅಲ್ಲಲ್ಲಿಯೆ ಇರುವ 'ಚಂದ್ರಕಾಂತ ಸೋಪಾನದ ಪುಷ್ಕರಣಿ ಗಳೊಳಗೆ' ನಾನಾದೇಶದ ನಾನಾಭಾಷೆಯ ಪಂಡಿತರು ಬಂದು ಅನುಷ್ಠಾನ ಮಾಡುತ್ತಿರುವುದನ್ನು ಏನು ಬಣ್ಣಿಸಲಿ? ಅವರೆಲ್ಲರೂ **'ಹಚ್ಚಡ** (ಸೆಲ್ಲೆಯ)' **'ಚಿಂದಿಗುಪ್ಪಸ** (ಅಂಗಿ)' ಗಳನ್ನು ಕಳೆದು ದೂರದಲ್ಲಿರಿಸಿ, ಸ್ವಚ್ಛವಾದ **'ಬೈರ್ವಾಸ'** ದೊಂದಿಗೆ 'ಕೃಷ್ಣಾ, ಗೋವಿಂದಾ, ಶ್ರೀವತ್ಸ- ಲಾಂಛನಾ, ಶರಣು ಶರಣು!' ಎಂದು, ಬೆಚ್ಚದೆ ತಣ್ಣೀರಲ್ಲಿ ಮುಳುಗಿ ಮಿಂದರು; ಬಳಿಕ ಅಲಸದೆ ಪೊರಮಟ್ಟು ಕೆಲವರು **ಪಟ್ಟಾವಳಿ-ಧೋತ್ರ- ಬಹಿರ್ವಾಸ**ಗಳನ್ನೂ, ಇನ್ನು ಕೆಲವರು **ತಳಿರುಗಾವಿ**ಯನ್ನೂ ಉಟ್ಟು, ಎಲ್ಲರೂ ಜಪದ ಮಂಟಪದಲ್ಲಿ ಸಂದಣಿಸಿ ಕುಳಿತರು. ಅವರಲ್ಲಿಯ ಕೆಲವರು **'ಘನಪಟ್ಟೆನಾಮ-ತಿರುಚೂರ್ಣ'** ಗಳನ್ನೂ, ಇನ್ನು ಕೆಲವರು **'ಗೋಪೀಚಂದನ-ಪಂಚಮುದ್ರೆ'** ಗಳನ್ನೂ, ಬೇರೆಯ ಕೆಲವರು **'ಭಸಿತ**

**ಗಂಧಾಕ್ಷತೆ**' ಗಳನ್ನೂ '**ಭಾಳಲಾಂಛನ**' ವನ್ನಾಗಿ ಮಾಡಿಕೊಂಡರು. ಅನೇಕ ಜನ ಶುಚಿರ್ಭೂತರಾದ ಅವನೀಸುರರು ಮನಸ್ಸಿನೊಳಗೆಯೆ ವಿಷ್ಣು-ನಾಮವನ್ನು ಚಿಂತಿಸುತ್ತಲೂ ಗೀತಾರ್ಥವನ್ನು ಪಠಿಸುತ್ತಲೂ '**ಪ್ರಖ್ಯಾತ ಸತ್ರದ ಮನೆಗಳಿಗೆ**' ಬಂದರು. ಅಲ್ಲಿ ಬಂಗಾರದ ಸಂಪುಟದಲ್ಲಿಟ್ಟ ವಿಷ್ಣು-ವಿಗ್ರಹವನ್ನೂ ಸಾಲಗ್ರಾಮ ದೇವರನ್ನೂ ಪೂಜೆಮಾಡಿ, ನಿಖಿಲೋಪಚಾರ ವನ್ನೂ ಅರ್ಪಿಸಿ, ನಿತ್ಯವಿಧಿಯನ್ನು ತೀರಿಸಿದರು. ಎಲ್ಲರ ಆಹ್ನಿಕಗಳಾದ ಮೇಲೆ '**ಅದ್ದಿಕದವರು** (ಸತ್ರದ ಪಾರುಪತ್ಯಗಾರರು)' ಆಜ್ಞೆಮಾಡಲು, ಊಟದ ಮನೆಯೊಳಕ್ಕೆ ಹೋಗುವುದಕ್ಕಾಗಿ ಎಲ್ಲರೂ ಗುದ್ದಾಡಿದರು. ಬಾಗಿಲು ಹಿಡಿಸದಂತೆ ನುಗ್ಗಿ ಎರಡು ಬದಿಗಳಲ್ಲಿಯೂ ಆಸನಗಳನ್ನು ಹಿಡಿದರು. ಎಲ್ಲರೂ 'ಚಿಂದಿಕುಪ್ಪಸ-ಹಚ್ಚಡಗಳನು ಇಂಬಿಟ್ಟವರು' ಎಂದರೆ ಬರಿಯ ಮೈಯವರು; ಚೆಂದದ ಬೈರ್ವಾಸಗಳನ್ನು ತಲೆಗೆ ಟೊಪ್ಪಿಗೆಯಂತೆ ಕಟ್ಟಿಕೊಂಡವರು. ಇವರೆಲ್ಲ ಸಾಲುಸಾಲಾಗಿ ಕುಳಿತರು. ಆಗ ಎಲ್ಲರಿಗೂ 'ಹೊಂದಟ್ಟೆಯೊಳು ಕುಂಕುಮರಸಪೂರಿತ ಗಂಧಾಕ್ಷತೆಗಳನ್ನು' ಕೊಡಲಾಯಿತು. 'ಅಂದವಡೆದ **ಕದಳಿಯಪರ್ಣ** (ಬಾಳೆಲೆ), **ದೊನ್ನೆಯ**' ತಂದಿರಿಸಲಾಯಿತು.

**೨೮.** ಸತ್ರಗಳಲ್ಲಿ ಅಡಿಗೆಯವರೂ ಬಡಿಸುವವರೂ ತಿಗುಳರು (ತಮಿಳು ಬ್ರಾಹ್ಮಣರು). —ಶ್ರೀಕೃಷ್ಣನ ದ್ವಾರಕೆಯಲ್ಲಿ ತಮಿಳರಿದ್ದಿರಬಹುದೇ?— ಆ ತಿಗುಳರು ಬಂದು '**ಪಾತ್ರಾಭಿಗಾರ, ಪರಮಾನ್ನ**' ಮುಂತಾದುವುಗಳನ್ನೂ '**ಸಣ್ಣಕ್ಕಿಯೋಗರ, ತೊವ್ವೆ, ಪಳಿದ್ಯ**' ಗಳನ್ನೂ ಕ್ರಮಕ್ರಮದಿಂದ ಬಡಿಸಿದರು.

"ಜೇನು, ಸಕ್ಕರೆ, ಕ್ಷೀರ, ರಸವಪ್ಪ ಫೇಣಿ, ಸು-
ಖೀನುಂಡೆ, ವಡೆ, ಗಾರಿಗೆಯ;
ನಾನಾ ಭಕ್ಷ್ಯ-ಭೋಜ್ಯಂಗಳ ಪರವು ಸು-
ವ್ಯಾನದೆ ಬಡಿಸಿದರೊಲಿದು!"

**ಹುಳಿದಾಳಿದ ಸಾರು, ಶಿಖರಿಣಿ, ಬಹುಕೂಟ-**
**ದಳಿದ ಲಿಂಬೆಯ ಹಣ್ಣ ಸವಿದು,**
**ಗಳಿಲನೆ ಬಡಿಸಲೊಗ್ಗರಣೆಯಿಂಗಿನ ಕಂಪು**
**ಸುಳಿಯುತಿದ್ದಿತು ಬಹಿಃಸ್ಥಳಕೆ!"**

ಕನಕದಾಸರು ಬೆಲ್ಲ ಹಾಕಿದ ಸಾರನ್ನು ತಿನ್ನುವ ಉತ್ತರ ಕರ್ನಾಟಕದವರಾದುದರಿಂದ '**ಹುಳಿದಾಳಿದ ಸಾರು**' ಎಂದು ತಿಗುಳರ ಸಾರಿನ ವೈಶಿಷ್ಟ್ಯವನ್ನು ಇಲ್ಲಿ ಎತ್ತಿ ಹೇಳಿರಬಹುದಾಗಿದೆ.

**"ಘನ ನವಘೃತವ ತಂದೆರೆದರು ಪತ್ರಭಾ-**
**ಜನ* ತುಂಬಿ ಕಡೆಗೋಡಿವರಿಯೆ;**
**ಅನಲಾಕೃತಿಯ ಬ್ರಾಹ್ಮರು ಮುದದಿಂದಾಪೋ-**
**ಶನವ ಕೊಂಡರು ಮಹೋತ್ಸವದಿ !**

**ಸಿತರಾಜಾನ್ನ, ಸದ್ಘೃತ, ತೊವ್ವೆಗೂಡಿ ನಿ-**
**ರ್ಮಿತವಾದ ತೋರದುತ್ತುಗಳ**
**ಜತನ ತಪ್ಪದೆ ಕೈಕೊಂಡರು ಕೃಷ್ಣಾ-**
**ರ್ಪಿತವೆಂದು ಪರಿತೋಷವಡಿದು !"**

ಇಲ್ಲಿ '**ತೋರದುತ್ತುಗಳ ಜತನ ತಪ್ಪದೆ ಕೈಕೊಂಡರು**' ಎಂಬ ಮಾತನ್ನು ಕನಕದಾಸರು ದಕ್ಷಿಣದ ಬ್ರಾಹ್ಮಣರ ಊಟದ ವೈಶಿಷ್ಟ್ಯವನ್ನು ಕೌತುಕದಿಂದ ಕಂಡವರಾಗಿಯೆ ಹೇಳಿರುವರು. ಉತ್ತರ ಕರ್ನಾಟಕದವರಿಗಿಂತ—ಅನ್ನವೆ ಮುಖ್ಯಾಹಾರವಾದ—ದಕ್ಷಿಣದವರ ತುತ್ತುಗಳು ದೊಡ್ಡವು. ಅಲ್ಲದೆ ಬಾಯಿಗೆ ಕೈತಗುಲಿ ಎಂಜಲಾಗಬಾರದೆಂದು ದೂರದಿಂದಲೆ ತುತ್ತುಗಳನ್ನು ಬಾಯೊಳಗೆ ಚೆಲ್ಲಿಕೊಳ್ಳುತ್ತಿರುವುದು ಅವರಲ್ಲಿ ಶಿಷ್ಟಾಚಾರ.

**"ಮಲ್ಲಿಗೆಯರಳಂತೆ ಬಿಚ್ಚೋಗರ, ಮೊಸ-**
**ರೊಳ್ಳಿಯ ಬಹಳುಪ್ಪುಗಾಯಿ,**
**ಘುಲ್ಲಿಸಿ ಗಟ್ಟಿಯ ಕಟ್ಟಿದರ್ ಪಿರಿಯರು**
**ಪುಲ್ಲಿಗೆಗಳು ತರತರಿಸೆ!"**

ಬಳಿಕ ಬ್ರಾಹ್ಮಣರೆಲ್ಲರೂ 'ರಸ-ರಸಾಯನವ ಚಪ್ಪರಿದು, ಹಸಗೆಯ್ದು ನೀರ್ಮಜ್ಜಿಗೆಯ ಉಂಟಿದರು'. ಇದೊಂದು 'ಹೊಸದಾದ ವಿಘ್ನರಾಜನ ಬಳಗವೋ' ಎಂಬಂತೆ ಎಲ್ಲರೂ ಲಂಬೋದರರಾಗಿ ಕಂಡರು ; ಏಳಲಾರದವರಾಗಿಯೆ ಎದ್ದು ನಡೆದರು. ಸತ್ರದ ಬಳಿಯಲ್ಲಿರುವ 'ಮುಂಗಾಲುವೆಯೊಳು' ಕೈಯನ್ನು ತೊಳೆದರು. ಬಳಿಕ ಅಲಂಕೃತರಾಗಿ ಕರ್ಪೂರ ಮಿಶ್ರಿತ

* ಪತ್ರಭಾಜನ = ದೊನ್ನೆ

ತಾಂಬೂಲವನ್ನು ತೆಗೆದುಕೊಂಡರು. 'ಅಬ್ಬಾ! ಕಮ್ಮನೆಯ ತುಪ್ಪ, ಕಜ್ಜಾಯ, ಪಾಯಸ ಇವೆಲ್ಲವುಗಳಿಂದ ದಮ್ಮನೆ ದಣಿದೆವು' ಎಂದು ತಮ್ಮ ತಮ್ಮೊಳಗೆ ಮಾತನಾಡಿಕೊಳ್ಳುತ್ತ, ಆ ಬ್ರಾಹ್ಮಣರೆಲ್ಲರೂ, '**ಶಯನಸ್ಥಳ** ಗಳಿಗೆ' ನಡೆದರು.

**೨೯.** ಮಠ-ಮಠಗಳಲ್ಲಿಯೂ 'ಹತ್ತುಸಾವಿರ-ಲಕ್ಷ-ಕೋಟಾನು ಕೋಟಿ' ಸಂನ್ಯಾಸಿಗಳು ಉಂಡು ತಣಿಯುತ್ತಿದ್ದರು. ಅವರು ಒಂದೆರಡು ಕಡೆಯುವರಲ್ಲ; 'ನಿಖಿಲಪ್ರದೇಶಿಗಳು!' ಈ ಕೃಷ್ಣನಗರಿಯೊಳಗೆ ಕಾಲಕಡಗ ಪೆಂಡೆಯದ **ಮಂಡಳಿಕರ** ಬಳಗ ತಂಡತಂಡದಿಂದ ತಿರುಗಾಡುವುದು.

**೩೦.** ಕನಕದಾಸರು ಮುಂದೆ ಸಾಗಿ 'ಕೃಷ್ಣರಾಯನ ಅರಮನೆ' ಯನ್ನು ನೋಡಿ ಬಣ್ಣಿಸುವರು: ಪುರಮಧ್ಯದಲಿರುವ ಆ ಅರಮನೆಯು, ಗುಂಪುಗೂಡಿದ ಜನರು ಕರ್ಣಿಕೆಯಂತೆ ಅಂದವಡೆದಿರಲು 'ಶರಧಿಯೊಳೊಗೆದ ಹೊಂದಾವರೆಯಂತೆ' ಕಣ್ಗೆ ರಂಜಿಸಿತು. ಅರಮನೆಯ ಸುತ್ತಲೂ ಮುಗಿಲನ್ನು ಮುಟ್ಟುವಂತಹ ಕೋಟೆ; ಹೆಬ್ಬಾಗಿಲು. ಒಳಹೊಕ್ಕು ನೋಡಿದರೆ 'ಮಕರ, ತೋರಣ, ಮಣಿನಿಕರ, ಹೊಂಗುಬ್ಬಿ' ಇವೆಲ್ಲವುಗಳಿಂದ ಅಂದವೆತ್ತ '**ಮುತ್ತಿನ ಚಾವಡಿ**' ನೋಟಕರ ಕಣ್ಣಿಗೆ ಕೌತುಕವ ಬೀರುವುದು. ಅಂತಃಪುರದ ಶಿಖಾಮಣಿಯಂತೆ ಒಪ್ಪುವ '**ಜಂತದ ಚಾವಡಿ**' * ಯೊಳಗೆ ಸಂತತವೂ ಸಿಂಹವಿಷ್ಟರದಲ್ಲಿ ಶ್ರೀಕೃಷ್ಣನು ಕುಳಿತಿರುವನು.

**೩೧.** ಕನಕದಾಸರು ವಿಜಯನಗರದ **ಅಂತಃಪುರವನ್ನೂ** ಕಣ್ಣಾರೆ ಕಂಡವರಾಗಿಯೆ ಇರಬೇಕು. ಅವರು ನೋಡಿದಾಗ ಮುಖ್ಯ ರಾಣಿಯರಾದ

---

* "ಈ ಅರಮನೆಯಲ್ಲೊಂದು ದಿವಾನ್‌ಖಾನೆಯಿದೆ. ಇದರಲ್ಲಿ ಕಂಬಗಳು ಮಾತ್ರ ಕಡೆದ ಕಲ್ಲಿನವಾಗಿದ್ದು, ಮಿಕ್ಕ ಎಲ್ಲ ಕೆಲಸವನ್ನೂ ಜಂತದಿಂದ ಮಾಡಲಾಗಿದೆ. ಕೆಳಗಿನಿಂದ ಮೇಲಿನ ವರೆಗೆ ಗೋಡೆ, ಕಂಬ, ಜಂತಿ, ಹಲಗೆ, ತಖ್ತುಪೋಷ್ ಮೊದಲಾಗಿ ಏನೆಲ್ಲವೂ ಜಂತದಿಂದಲೆ ಮಾಡಿದುದಾಗಿದೆ. ತೊಲೆ, ನಾಗವಂದಿಗೆಗಳ ಮೇಲೆ ಗುಲಾಬಿಯ ಹೂಗಳನ್ನೂ ಕಮಲಗಳನ್ನೂ ಕೊರೆಯಲಾಗಿದೆ. ಅವು ಜಂತದುವೆ ಆಗಿದ್ದು ಸುಂದರವಾಗಿರುವುವು. ಇದೆಲ್ಲ ಕೆಲಸವೂ ತುಂಬ ಅಂದವೂ ಬೆಲೆಬಾಳುವಂತಹದೂ ಆಗಿದೆ. ಇದರಂತಹ ಕೆಲಸವು ಇನ್ನೆಲ್ಲಿಯೂ ನೋಡಲಿಕ್ಕೆ ದೊರೆಯಲಾರದು; ದೊರೆತರೂ ತೀರ ಅಪರೂಪ!"

—ಡಾಮಿಂಗೋ ಪಾಯೆಸ್,

'**ರುಕ್ಮಿಣಿ-ಸತ್ಯಭಾಮೆಯರುಗಳು**' ಕೃಷ್ಣರಾಯನ ಭುಜಕೀರ್ತಿಯ ಮಣಿಗಳಂತೆ ಇಕ್ಕೆಲದಲ್ಲಿಯೂ ಇದ್ದರು. ಚಿನ್ನದ ಬೊಂಬೆಗಳಂತಿರುವ 'ಕೋವಿದ ಕೋಮಲಾಂಗಿಯರು' ಆತನ ಎಡಬಲದಲ್ಲಿ ತೀವಿದ್ದರು. ಆಗ ಅಲ್ಲಿ 'ಗಲಭೆಯ ನಿಲಿಸುವ **ಕಟ್ಟಿಗೆಗಾರ್ತಿಯರ** ಉಲುಹು' ತುಂಬಿದ್ದಿತು. 'ಜೀಯ! ಹಸಾದ! ಪಾಯವಧಾರು! ಸಮರವಿಜೇಯರಾಯ ಪರಾಕು!' ಎಂದು ಕೈವಾರಿಸುವ '**ತೊಂಡೆನಾಯ ಪಾಠಕಿಯರು**' ಪರಿಶೋಭಿಸುತ್ತಿದ್ದರು. **ಸಂಬಳಿಗೆಗಾತಿಯೂ ನೊಗನಾವುಡದ**ವಳೂ ಹತ್ತಿರದಲ್ಲಿಯೆ ಇದ್ದರು. ಅಲ್ಲದೆ **ಗಿಂಡಿಯವಳು, ಕಾಳಾಂಜಿಯವಳು, ಬೀಸಣಿಕೆಯವಳು, ಚಾಮರದವಳು, ಕಠಾರಿಯವಳು, ಕನ್ನಡಿಯವಳು, ಹಾವುಗೆಯವಳು, ಸಂಗೀತಗಾತಿಯರು** ಮೊದಲಾದ '**ಬಾಹತ್ತರ** (ಎಪ್ಪತ್ತೆರಡು) **ನಿಯೋಗ** (ಊಳಿಗ)' ದವರು ತಮ್ಮ ತಮ್ಮ ಕಾರ್ಯದಲ್ಲಿ ಆಸಕ್ತರಾಗಿ ನಿಂತಿದ್ದರು. ಆಗ ಕೃಷ್ಣರಾಯನು 'ನಾಡೊಳಗುಳ್ಳ ನಾನಾ ವಿದ್ಯದೇಳ್ಗೆಯ ನೋಡಿ ಚಿತ್ತೈಸಿದ ಬಳಿಕ' ಒಮ್ಮೆಲೆ 'ಕ್ರೀಡಾ-ವಿಹಂಗ ಸಂತತಿ (ಸಾಕಿದ ಪಕ್ಷಿಗಳ ಸಮುದಾಯ)' ಯನ್ನು ತರಿಸಿದನು. ಆ ಪಕ್ಷಿಗಳೆಲ್ಲ ತಮ್ಮ ತಮ್ಮ ಮುದ್ದುಮರಿಗಳಿಗೆ 'ತಂಗಡಲೆಯ ಮೆಯ್ಸಿ ನೀರನೂಡಿಸುತೆ' ಗುಟುಕೀಯುತ್ತಿದ್ದುವು.

೩೨. ಒಮ್ಮೆ ಮಳೆಗಾಲ ಬಂದಿತು. ಆಗ ಒಂದುದಿನ '**ಒರೆವನಿ, ಇದಿರ್ವನಿ, ಮಸ್ತಕವನಿ, ತೊಱೆವನಿ**ಗಳನಾಂತು' ಬಿಡದೆ ಸಂತತಧಾರೆ ಸುರಿಯಿತು. ಕೆರೆ-ತೊರೆಗಳು ತುಂಬಿ ಹರಿಯತೊಡಗಿದುವು. ಅದನ್ನು ನೋಡಲಿಕ್ಕೆಂದು 'ಶ್ರೀಕೃಷ್ಣನು ಸತಿಯರೊಂದಾಗಿ ಹರ್ಮ್ಯವನ್ನೇರಿ ಅತಿಹರ್ಷದಿ ಹೋಡುತ್ತಿದ್ದ' ಆಗ 'ಊರುಗರು **ಕೊಡೆ, ಮೇಣಗಪ್ಪಡ, ಗೊಂಗಡಿ,** ಬಹುರಮ್ಯವಡೆದಿರ್ದ **ಸಕಲಾತಿ**' ಮೊದಲಾದ ಮಳೆಯಿಂದ ಸಂರಕ್ಷಣೆ ಮಾಡಬಲ್ಲ ಸಾಧನಗಳನ್ನು ತಳೆದುಕೊಂಡು, 'ನೀರ್ಮನುಜರಂತೆ ಪುರದೊಳಗೆ ಎಡೆಯಾಡುತಿದ್ದರು'.

*    *    *    *

ಅಂತಃಪುರದ ಹೆಣ್ಣುಮಕ್ಕಳ **ವನವಿಹಾರ**ವು ಯಾವ ಬಗೆಯದಾಗಿದ್ದಿತೆಂಬುದನ್ನು ತಿಳಿದುಕೊಳ್ಳಬೇಕಾದರೆ ಮೋಹನತರಂಗಿಣಿಯ ೪ನೆಯ ಸಂಧಿಯನ್ನು ಪರಿಶೀಲಿಸಬೇಕು:

ಹೆಂಗುಸರೆಲ್ಲರೂ ಸೇರಿ ಒಂದುದಿನ ವನವಿಹಾರಕ್ಕೆ ಹೋಗುವರು. ಅಲ್ಲಿ ಶ್ರೀಕೃಷ್ಣನು ಒಂದು ಮಣಿಮಯ ಸಿಂಹಾಸನದಲ್ಲಿ ಕುಳಿತು, ರುಕ್ಮಿಣಿ ಮೊದಲಾದ '**ರಾಣೀವಾಸ**' ದವರಿಗೆ ವನವನ್ನು ಒಪ್ಪಿಸುವನು. ಆಗ ಅವರು 'ಮಳಲೊಟ್ಟಿಲನೇರಿ **ಪಾರುಗುಪ್ಪೆ**ಯನು' ಆಡಿದರು. 'ಕೈದಣಿ ವನಕ ನಾನಾ ಪುಷ್ಪಂಗಳ ಕೊಯ್ದು ಪೊಟ್ಟಣವ ಕಟ್ಟಿದರು'. ಕೆಲವರು ನೀರಾಟವನ್ನಾಡಿದರು. ಹಲವರು 'ಅಂಬೆಹೆಳದಿ, ಕಾರ್ಗೆಣಸು, ನೀರುಳ್ಳಿ ಕೊತ್ತುಂಬರಿ, ಕರಿಬೇವು' ಗಳನ್ನೂ 'ಸಿಂಬೆ, ಕೂಗಲಿ, ಪಿಪ್ಪಲಗಾಯಿ' ಗಳನ್ನೂ 'ಲಿಂಬೆಯ ಕಳಿವಣ್'ಗಳನ್ನೂ ಕೊಯ್ದುಕೊಂಡರು. ತೆಂಗಾಯಿ, ಪಲಸು, ಕಿತ್ತಳೆ, ಮಾವು, ಮಾದಲ, ಭೃಂಗಾಯಿವಣ್'ಗಳನ್ನು ತೋಟಿಗನು ತಂದುಕೊಡಲು, ಕೃಷ್ಣನು ರುಕ್ಮಿಣಿ-ಸತ್ಯಭಾಮೆಯರಿಗೂ ಮಿಕ್ಕ ರಾಣೀ-ವಾಸದವರಿಗೂ ಪಚರ್ಗುಡುವನು.

* * * *

೩೨. '**ಅನಿರುದ್ಧನ ನಗರಶೋಧನೆ**' ಎಂಬ ೧೮ನೆಯ ಸಂಧಿಯಲ್ಲಿ ವಿಜಯನಗರದಲ್ಲಿಯದೊಂದು ವಿಶಿಷ್ಟಜೀವನವನ್ನು ಕನಕದಾಸರು ಬಣ್ಣಿಸುವರು. ಮಿಕ್ಕ ಕಾವ್ಯಗಳಲ್ಲಿಯ ಕಾವ್ಯನಾಯಕರು, ಸೂಳೆಗೇರಿಯನ್ನು ತಿರುಗಾಡಿ ನೋಡಿ ಬರಿಯೆ ನಕ್ಕು ಕೆಲಿದು ಬಂದರೆ, ಇನ್ನೂ ಮದುವೆಯಾಗದಿದ್ದ ಇಲ್ಲಿಯ ಅನಿರುದ್ಧನು '**ಸೂಳೆಗೇರಿ**'ಯ ಪ್ರಯೋಜನದ ಸವಿಯನ್ನು ಸಂಪೂರ್ಣವಾಗಿ ಅನುಭವಿಸುತ್ತಾನೆ. ಈ ಭಾಗವನ್ನು ಓದಿ ನೋಡುವಾಗ ಪರದೇಶದ ಪ್ರಯಾಣಿಕರು ಬಣ್ಣಿಸಿದ ವಿಜಯನಗರದ '**ಸೂಳೆಗೇರಿ**' ಯ ಚಿತ್ರವೆ ಕಣ್ಣೆದುರು ನಿಲ್ಲುತ್ತದೆ.

ಒಂದು ದಿನ ಸಂಜೆ; ಎಲ್ಲ ದೇವಾಲಯಗಳಲ್ಲಿಯೂ 'ಭೇರಿ, ಮದ್ದಳೆ, ಸಂಕು, ನಗರಿ, ಹೆಗ್ಗಾಳೆ' ಇವೆಲ್ಲ ಚೀರುತ್ತಿದ್ದುವು. ಪ್ರತಿಯೊಂದು ಗುಡಿಯಲ್ಲಿಯೂ '**ನರ್ತನಗಾತಿಯರೊಳು ಪೆರ್ಬಡಿಸುವ ಗೀತಶಬ್ದಗಳ ವಡಿತಪ್ಪದೆ, ಕೋಲಚಾರಿಗಳಿಂದ ಜಕ್ಕುಡಿ ಮೆರೆದುವು**'. ಬೀದಿಬೀದಿಗಳಲ್ಲಿಯೂ ದೇವ-ಸ್ಥಾನಕ್ಕೆ ಹೋಗಿಬರುವವರ ಗುಂಪು ಗಜಬಜಿಸುತ್ತಿತ್ತು. ಆಗ 'ಕೃಷ್ಣ ದಿವಾಣದೊಳು ಓಲಗಗೊಂಡು ಇದ್ದ; ಅಲ್ಲಿ ಸುಪ್ರಧಾನರೂ ಕುಲವೃದ್ಧರೂ ಕುಳಿತಿದ್ದರು. ಅಂದಿನ ಓಲಗವನ್ನು ತೀರಿಸಿ ದಣಿದು ಬಂದವನಾದ ಕೃಷ್ಣನು, ಮಗ-ಮೊಮ್ಮಗನೊಂದಿಗೆ ಉಟಮಾಡಿ ತನ್ನ ಅರಮನೆಗೆ ತೆರಳಿದನು. ಆಗ ಅನಿರುದ್ಧನು ಸವಿಸವಿಯ ಕಜ್ಜಾಯ-ತುಪ್ಪ-ಸಕ್ಕರೆಗಳನ್ನು ತೆಗೆದುಕೊಂಡು ಬಂದು, ಬಾಗಿಲನ್ನು ಕಾಯುವ **ಕೊಜ್ಜೆಯರಿಗೆ** ಮೆಲ್ಲಿಸಿ, ಮಿಕ್ಕುದನ್ನು

**‘ ಬಾಗಿಲಅಜ್ಜಿಯರಿಗೆ ತುತ್ತಿಸಿದ ’;** ಬಳಿಕ ದಾದಿಯರನ್ನೆಲ್ಲ ಸಂತೋಷ ಪಡಿಸಿ, ಬೊಕ್ಕಸದವರಿಗೆ ಏನೇನನೋ ಹೇಳಿ, ‘ಪೊನ್ನಪೆಟ್ಟಿಗೆಯ (ಪೊನ್ನ= ಬಂಗಾರದ ನಾಣ್ಯ) ಭೇದಿಸಿ ತೆಗೆದು ’ ನಾನಾವಸ್ತುಗಳನ್ನು ಸಂಪಾದಿಸಿ ಕೊಂಡನು. ಕತ್ತಲೆಯಲ್ಲಿ ತಾನು ಯಾರಿಗೂ ಕಾಣಿಸಬಾರದೆಂದು **‘ ನೀಲಾ-ಭರಣ ಭೂಷಿತನಾಗಿ, ಕಾಗಿನ ಚೇಲ ಹೊದ್ದು, ಸುಗಂಧಮಾಲಾ-ಲಂಕೃತನಾಗಿ ’** ಸ್ನೇಹಿತರೊಂದಿಗೆ ಮನೆಯನ್ನು ಬಿಡುವನು. ಸೂಳೆಗೇರಿ ಯನ್ನು ನಿಟ್ಟಿಸುತ್ತ ತಿರುಗಾಡುವನು. ಅಲ್ಲಿ ‘ ಹಸ್ತಿವಾವುಜ, ವೀಣೆ, ಮದ್ದಳೆ, ರಾವಣಹಸ್ತ, ಕಿನ್ನರಿ ಜಂತ್ರವುಡುಕು, ಸ್ವರಮಂಡಲ’ ಮೊದಲಾದ ಸಂಗೀತಸಾಧನ ವಿದ್ಯೆಯನ್ನು ಅರಿತ ಸ್ತ್ರೀಯರು ಬೀದಿಯ ಎರಡುಬದಿಗಳ ಲ್ಲಿಯೂ ವಾಸಿಸಿದ್ದರು.*

ಅಲ್ಲಿಯ ಜನರಲ್ಲಿ ಅನೇಕರು **‘ ಮದ್ಯಪಾನಗೋಷ್ಠಿ ’** ಯಲ್ಲಿ ಇದ್ದರು. ಅವರು ‘ ತಂಡುಲರಾಶಿಯೊಳ್ ಕೊಡವಿಟ್ಟು, ಬೇವಿನ ದಂಡೆಯ ಕೊರಳಿ ಗಿಟ್ಟು’ ಗಂಧ-ಭಂಡಾರಗಳಿಂದಲೂ ಧೂಪ-ದೀಪಾರತಿಗಳಿಂದಲೂ ಪರಮ-ಶಕ್ತಿಯ ಪಾದಪೂಜೆಯನು ರಚಿಸಿದರು. ಬಳಿಕ ನೀನು ತೆಗೆದುಕೊ ನೀನು ತೆಗೆದುಕೊ ಎಂದು ಒತ್ತಾಯಮಾಡುತ್ತ **‘ ಸಂಡಿಗೆ, ಸಂಭಾರಗಡಲೆ** ( ಉಸಳಿ ಅಥವಾ ಉಪ್ಪುಕಾರ ಹಚ್ಚಿ ಹುರಿದಕಡಲೆ), **ಪ್ರಾಸಕ,** ( ಮಾಂಸವಿಶೇಷವೆ ? , **ಕುಕ್ಕುಟಾಂಡ** ( ಕೋಳಿಯ ತತ್ತಿ ), ಅವಲಕ್ಕಿ, ದುಂಡರಳುಗಡಲೆ ಮೊದಲಾದ ತಿನಿಸುಗಳನ್ನು ತರಿಸಿ ತಿನ್ನುತ್ತ, ಚೆನ್ನಾಗಿ ಮತ್ತು ಬರುವ ಹಾಗೆ, ಮದ್ಯವನ್ನು ಕುಡಿದೆ ಕುಡಿಯುತ್ತಿದ್ದರು. ಆ ಮತ್ತಿನ ಭರದಲ್ಲಿ :

**“ ಅಪ್ಪಕೊಳ್ಳೆಲ್ಲವೊ ಅಗ್ರಜಕೊಳ್ಳೊ ಹಿಂಡಿಯ**
**ಸೊಪ್ಪಕೋ ಸುಲಿವಣ್ಣಳಿವೆಕೋ !**
**ಚಿಪ್ಪಕೋ ಕುಡಿ ಕುಡಿಯೆಂದು ಕುಡಿಸಿ ಕೈ-**
**ಚಪ್ಪಳೆಗೊಲಿದಾಡುತಿಹರು.”**

---

* “ ಸೂಳೆಗೇರಿಯಲ್ಲಿಯ ಮನೆಗಳು ಮೇಲ್ತರಗತಿಯವಾಗಿರುವುವು. ಅದ ರಲ್ಲಿಯೂ ಮಂಡಲಿಕ-ಮನ್ನೆಯ-ಸಿರಿವಂತರ ಸೆರಗಿನಲ್ಲಿದ್ದವರಿಗಂತೂ ತುಂಬ ಮಾನ-ಮರ್ಯಾದೆಗಳಿರುವುವು. ಸಭ್ಯರೂ ಸಂಭಾವಿತರೂ ಎನಿಸಿಕೊಳ್ಳುವವರು ಕೂಡ ಮುಚ್ಚುಮರೆಯಿಲ್ಲದೆ ಇಲ್ಲಿ ಸೂಳೆಗೇರಿಗೆ ಹೋಗುತ್ತಾರೆ, ಬರುತ್ತಾರೆ. ಹೀಗೆ ಮಾಡುವು ದರಲ್ಲಿ ಯಾವ ಕುಂದು-ಕೊರತೆಗಳನ್ನೂ ಎಣಿಸುವುದಿಲ್ಲ.”

—ಡಾಮಿಂಗೋ ಪಾಯಿಸ್

ಅನಿರುದ್ಧನು ಇದನ್ನೆಲ್ಲ ನೋಡಿ, ಅನುಭವಿಸಿ, ಮನೆಗೆ ಮರಳುವನು. ಬಂದು 'ಮಣಿಸೆಜ್ಜೆಮನೆಯೊಳು ಮಂಚದಲಿ ಮಂಡಿಸುವನು'. ಆಗ ಮಿಂಡೆವೆಣ್ಣುಗಳು ಬಂದು '**ಪೊಂಬಡಿಗ** (ಹೊನ್ನಿನ ದೊಡ್ಡ ಪಾತ್ರೆ) ವ ಸಾರ್ಚಿ, **ಗಿಂಡಿಯೊಳ್** ಬಿಸಿನೀರ ತಂದು' ಕಾಲನ್ನು ತೊಳೆಯಲು, ಸಾಕಿದ **ಪಂಡಿತವಕ್ಕಿ**ಯೊಂದಿಗೆ ಮಾತನಾಡತ್ತಲೆ ಅವನು ಮಲಗಿಕೊಂಡನು.

* * * *

**೩೩.** ಮಧ್ಯರಾತ್ರಿಯ ಪಹರೆಯ (ಪಾರೆ) ಸಮಯವಾದುದರಿಂದ ಅದನ್ನು ಸೂಚಿಸುವ ಭೇರಿಯನ್ನು ಹೊಡೆದರು; ಆಗ '**ಬೇಡರು** ಒಗ್ಗಾಗಿ' ದ್ವಾರಾವತಿಯನ್ನು ಸುತ್ತಿದರು. ಅಲ್ಲಲ್ಲಿ '**ತಳವರರು** ಹೊಳೆವ ಕಠಾರಿ, ಕೈಗತ್ತಿ, ತೋಮರ, ಬಿಲ್ಲು, ಬಲುದಡಿ, ಪಿಡಿಚಕ್ರಗಳೊಂದಿಗೆ ಊರನ್ನು ಕಾಯುತ್ತಿದ್ದರು. ಈ ಕಾಪಿನವರ ವೇಷ-ಭೂಷಣಗಳು ಹೇಗಿದ್ದುವೆಂಬು ದನ್ನು ಕನಕದಾಸರು ಸೊಗಸಾಗಿ ಹೇಳಿದ್ದಾರೆ :

**"ಮೆಟ್ಟಿದ ಕೆರ್ಪು[೧]ಗಳ್, ಉಡೆಯ ಬದ್ದು[೨]ಗೆದಾರ,**
**ದಟ್ಟಿಯಮೇಲೆ ವಂಕುಡಿ[೩]ಯು ||**
**ಕಟ್ಟಿದ ಹೆದೆ, ಏರಿಸಿದ ಬಿಲ್ಗೋಲಿನ**
**ಗಟ್ಟಿವಾಳರು ತಿರುಗಿದರು."**

**೩೪.** ವಿಜಯನಗರದಲ್ಲಿ ಜೂಜಿನಾಟಗಳೂ ವಿವಿಧರೀತಿಯಲ್ಲಿ ಪ್ರಚಾರ ದಲ್ಲಿದ್ದುವು. ಅವುಗಳಲ್ಲಿ ಬಾಳೆಯ ಹಣ್ಣಿನ ಜೂಜು, ತೆಂಗಿನಕಾಯಿಯ ಜೂಜು, ಕಬ್ಬಿನ ಜೂಜು, ಬೆಲ್ಲವನ್ನು ಗುದ್ದಿ ಒಡೆವ ಜೂಜು ಇವುಗಳನ್ನು ಕನಕದಾಸರು ಸೊಗಸಾದ ಉಪಮೆ-ಉತ್ಪ್ರೇಕ್ಷೆಗಳೊಂದಿಗೆ ಹೇಳಿರುವರು. ಮಾದರಿಗಾಗಿ ಬೆಲ್ಲವನ್ನೊಡೆವ ಜೂಜಿನ ಪದ್ಯವನ್ನು ನೋಡಿ :

**"ಬೆಲ್ಲವೆ ನೀ ಮುದ್ದುವೆಂಗಳ ಮೃದುವಾಯ**
**ಬೆಲ್ಲವಾಗಿರದೆ, ಬಂದಿಲ್ಲಿ-**
**ಹೊಲ್ಲೆಹ ನೊಣನ ಮುತ್ತಿಸಿಕೊಳಬೇಡೆಂದು**
**ಬೆಲ್ಲವನೊಡೆಯೆ ಗುದ್ದಿದರು."**

---

**೧ ಕೆರ್ಪು = ಕೆರವು, ಎಕ್ಕಡ; ೨ ಬದ್ದುಗೆದಾರ = ನಡುಪಟ್ಟ; ೩ ವಂಕುಡಿ = ಬಾಗಿದಕತ್ತಿ**
**೧೩—೨೨೨೨.**

ಇಷ್ಟೇ ಅಲ್ಲದೆ ಲೆತ್ತ, ಪಗಡೆ, ರಾಯಬೊಗರಿ, ಸೊಲ್ಲೆಹ, ಬಾರುಗುತ್ತ (?), ಒಪ್ಪಿ (?), ಸರಿಬೆಸ ಮೊದಲಾದ ಜೂಜಿನಾಟಗಳನ್ನಾಡಿ ‘ ವಿತ್ತನಾಶವ ಮಾಡುವ ’ ಜೂಜುಗಾರರೂ ಅಲ್ಲಿ ಇದ್ದರು.

೩೫. ರಾಜಧಾನಿಯಲ್ಲಿ ‘ ಒಪ್ಪವಡೆದ **ಯಾಗಶಾಲೆ**’ ಗಳಿದ್ದುವು. **ಗಳಿಹಾರದ ಉಪ್ಪರಿಗೆ**ಯೊಳು ಜೋಯಿಸರಿದ್ದು, ತಪ್ಪದೆ ಗಳಿಗೆಗೊಮ್ಮೊಮ್ಮೆ ಭೇರಿಯನ್ನು ಹೊಡೆಯುತ್ತಿರುವರು ’.

ವಿಜಯನಗರದ ಜನಜೀವನವನ್ನು ಕನಕದಾಸರು ಇನ್ನೂ ಹಲವು ಮುಖಗಳಿಂದ ಕಂಡಿರುವರು. ಸದ್ಯ ಈ ಪ್ರಬಂಧದಲ್ಲಿ ಹೇಳಿರುವುದು ಕನಕದಾಸರು ಕಂಡ ವಿಜಯನಗರವನ್ನು ಕುರಿತು ಮಾತ್ರ— ಎಂದರೆ ಹೊರಗಿನಿಂದ ಹೋದ ಜನರು ವಿಜಯನಗರದಲ್ಲಿ ತಿರುಗಾಡುತ್ತಿರುವಾಗ, ಸ್ಥೂಲವಾಗಿ ಅವರ ಕಣ್ಣಿಗೆ ಯಾವ ಯಾವ ಸಂಗತಿಗಳು ಬೀಳಬಹುದಾಗಿದ್ದಿತೆಂಬ ಸಂಗತಿಯನ್ನು ಮಾತ್ರ— ಇದರಲ್ಲಿ ಮೂಡಿಸಿ ತೋರಿಸಲಾಗಿದೆ. ಹೆಚ್ಚಿನ ಸಂಗತಿಯನ್ನು ತಿಳಿದುಕೊಳ್ಳಬೇಕೆಂಬ ಅಪೇಕ್ಷೆಯುಂಟಾಗಿ, ನಮ್ಮ ಜನರು ಕನಕದಾಸರ ಕೃತಿಗಳನ್ನು ಓದಲಾರಂಭಿಸಿದರೆ ಸಾಕು; ಈ ಬರೆಹಬರೆದುದಕ್ಕೆ ಸರಿಯಾದ ಪ್ರಯೋಜನ ನನಗೆ ದೊರೆತಂತೆಯೆ.

**“ ನುಡಿತಪ್ಪಿದೊಡೆ ತಿದ್ದುವುದೆನ್ನಯ ಸಂ-**
**ಗಡಿಗರು ಸಲೆ ಬಲ್ಲವರು ”**

ಎಂಬ ಕನಕದಾಸರ ಕೋರಿಕೆಯನ್ನೆ ನನ್ನ ಕೋರಿಕೆಯನ್ನಾಗಿ ಮಾಡಿಕೊಂಡು, ಈ ಪ್ರಬಂಧವನ್ನು ನಾನೀಗ ಪೂರ್ತಿಗೊಳಿಸುವೆನು.

ಜಯ ಕರ್ಣಾಟಕ ಸಾಮ್ರಾಜ್ಯಲಕ್ಷ್ಮೀ !

*

# ಕರ್ಣಾಟಕ ಜನಜೀವನ

ಶ್ರೀ

# ಚಾರಣಕವಿ ಗೋವಿಂದವೈದ್ಯ

ಅಥವಾ

## ೩೦೦ ವರ್ಷಗಳ ಹಿಂದಿನ ಕರ್ಣಾಟಕ

"ಕರ್ಣಾಟಕವ ಕೆಡಿಸಲು ಬಂದ ತುರುಕರ
ನಿರ್ಣಾಮವ ಮಾಡಿ, ಜಗವ
ಪೂರ್ಣದೆ ಸಲಹಿದ ಕಂಠೀರವೇಂದ್ರ ಸು-
ಪರ್ಣವಾಹನ ಮೂರ್ತಿಯೈಸೆ ?

*　　*　　*

ಪೊಡವಿಪದಳವಾಯಿ ನಂಜರಾಜೇಂದ್ರ ತ-
ನ್ನೊಡೆಯನ ಕಾರ್ಯದೇಳಿಗೆಯು
ಗಡಣವ ಚರಿತೆಯಾಗೊಲಿದು ಪೇಳಿಸಿದನು
ಕಡುಗಲಿಗಳು ಲಾಲಿಪುದು !"

—ಕಂಠೀರವ ನರಸರಾಜ ವಿಜಯ

# ಸಂದರ್ಭಗ್ರಂಥಗಳು


ಕಂಠೀರವ ನರಸರಾಜ ವಿಜಯಂ ( ಗೋವಿಂದ ವೈದ್ಯ ವಿರಚಿತ )

ಶ್ರೀಮನ್ಮಹಾರಾಜರ ವಂಶಾವಳಿ ( ಭಾಗ ೧ ) ( ಮೈಸೂರ ಸರಕಾರದ ಪ್ರಕಟಣೆ )

ಶಿವಾಜಿ ಚರಿತ್ರೆ ( ದಿವಂಗತ ರಾ. ಹ. ದೇಶಪಾಂಡೆ, ಎಂ. ಎ. ಕೃತ. )

ಕವಿರಾಜಮಾರ್ಗ ( ನೃಪತುಂಗ ವಿರಚಿತ )

ಅಭಿನವ ದಶಕುಮಾರ ಚರಿತ್ರೆ ( ಚೌಂಡರಸ ಕವಿ ವಿರಚಿತ )

ಕನ್ನಡ ಕವಿಚರಿತೆ— ಭಾಗ ೧ (ಪ್ರಾ. ವಿ. ವಿ. ಆರ್. ನರಸಿಂಹಾಚಾರ್ಯ)

,, ಭಾಗ ೨ ( ,, )

# ೧. ಚಾರಣಸಾಹಿತ್ಯ ಮೀಮಾಂಸೆ

**ರಾಜಸ್ಥಾನದ ಚಾರಣಸಾಹಿತ್ಯ**

‘ **ಚಾರಣಕವಿ** ’ ಎಂಬ ಪದವು ನಮ್ಮ ಜನರಿಗೆ ತೀರ ಹೊಸದೆಂದು ಎನಿಸಬಹುದು. ರಾಜಸ್ಥಾನದ ಅಥವಾ ರಜಪೂತಸ್ಥಾನದ ಇತಿಹಾಸ ವನ್ನರಿತವರಿಗೆ, ಅಲ್ಲಿಯ ಪ್ರಾಚೀನ ರಾಜಕೀಯ ಜೀವನ ದಲ್ಲಿ ‘ **ಚಾರಣರು** ’ ಎಂಬ ಜನರಿಗೊಂದು ವಿಶಿಷ್ಟವಾದ ಸ್ಥಾನವಿದ್ದುದು ಕಂಡುಬರುವುದು. ‘ **ಭಾಟ** ’ ಎಂಬ ಇನ್ನೊಂದು ಜಾತಿಯ ಜನರ ಹೆಸರೂ ಅಲ್ಲಿ ಸಿಕ್ಕುವುದು. ಈ ‘ **ಭಾಟರು** ’ ನಮ್ಮಲ್ಲಿಯ **ಭಟ್ಟಂಗಿ**ಗಳಂತಹ ಕೆಲಸ ಮಾಡುವವರು. ಸಂಸ್ಕೃತ ಸಾಹಿತ್ಯದಲ್ಲಿ ಇವರು ‘**ಸ್ತುತಿಪಾಠಕ**’ರೆಂದೊ ‘ **ವಂದಿಮಾಗಧ** ’ ರೆಂದೊ ಕರೆಯಿಸಿಕೊಂಡಿರುವರು. ಇವರ ಕರ್ತವ್ಯವು, ವೀರರ ಬಿರುದಾವಳಿ ಗಳನ್ನು ಆಗಾಗ ಉಗ್ಗಡಿಸಿ, ರಾಜ-ಪ್ರಜೆಗಳ ಮೈ-ಮನಸ್ಸುಗಳನ್ನು, ದೇಶ-ಧರ್ಮಗಳ ಭಕ್ತಿಯಿಂದಲೂ, ಸ್ವಕುಲಪರಾಕ್ರಮದ ಅಭಿಮಾನದಿಂದಲೂ ಜುಮ್ಮೆದಟ್ಟಿಸುವುದು. ‘ **ಚಾರಣ** ’ ರ ಕಾರ್ಯಪ್ರಯೋಜನವೂ ಇದೇ ಜಾತಿಗೆ ಸೇರಿದುದು. ಇವರು ತಮ್ಮ ದೇಶದಲ್ಲಿಯ ಪ್ರಾಚೀನ ವೀರವಿಭೂತಿಗಳ ಧೈರ್ಯ-ಶೌರ್ಯದ **ಪವಾಡ**ಗಳನ್ನೂ, ಪರಾಕ್ರಮದ **ಕಥಾಗೀತ**ಗಳನ್ನೂ ಹಾಡಿಹಾಡಿ, ನಾಡಿನ ಜನಮನದಲ್ಲಿ ದೇಶಪ್ರೀತಿ, ರಾಜನಿಷ್ಠೆ, ಸ್ವಜನಾಭಿ-ಮಾನಗಳ ,ಹೊನಲನ್ನು ಹರಿಸುತ್ತಿದ್ದರು. ಅವರು ಹಾಡುತ್ತಿದ್ದ ‘ **ಚಾರಣಗೀತ** ’ ಗಳು ಈಗಲೂ ರಜಪೂತರಲ್ಲಿಯ ಸ್ವಾಭಿಮಾನವನ್ನು ಬಡಿ ದೆಬ್ಬಿಸುವಂತಹವಾಗಿವೆ. ವೀರರಸಪ್ರಧಾನವಾದ ಆ ‘ **ಚಾರಣಗೀತ** ’ ಗಳನ್ನೂ ‘ **ಚಾರಣಕಾವ್ಯ** ’ ಗಳನ್ನೂ ಎಷ್ಟೋ ಜನ ಚಾರಣರು ತಾವೆ ರಚಿಸಿಕೊಳ್ಳುತ್ತಿರಬಹುದು ; ಅಲ್ಲದೆ ಬೇರೆಯ ಕವಿಗಳಾರಾದರೂ ಅವರಿಗೆ ರಚಿಸಿಕೊಡುತ್ತಿರಬಹುದು. ಅವುಗಳನ್ನು ರಚಿಸುವ ಕವಿಗಳೆ ‘ **ಚಾರಣ-ಕವಿ** ’ ಗಳು. ರಜಪೂತಸ್ಥಾನದ ಪ್ರಾಚೀನ ಇತಿಹಾಸವೆಲ್ಲ ಈ ಕವಿಗಳ ‘ **ಚಾರಣಗೀತ** ’ ‘ **ಚಾರಣಕಾವ್ಯ** ’ ಗಳಲ್ಲಿ ಹುದುಗಿಕೊಂಡಿದ್ದು, ಈಗಲೂ ಆ ಜಾನಪದವಾಙ್ಮಯವು, ತನ್ನ, ವೀರವಾಣಿಯಿಂದ ತನ್ನ ದೇಶದ ಜನರಲ್ಲಿ ಸ್ವಾಭಿಮಾನ-ಸ್ವದೇಶಾಭಿಮಾನಗಳನ್ನು ತುಂಬುತ್ತಿರುವುದು.

ಮುಸಲ್ಮಾನ್ ರಾಜರ ಪರಂಪರೆಯಲ್ಲಿಯೂ '**ಚಾರಣಗೀತ**' ಗಳಂತಹ ವೀರಗೀತಗಳನ್ನು ರಚಿಸುವುದೂ ಹಾಡುವುದೂ ನಡೆದುಕೊಂಡು ಬಂದಿದೆ. ಧರ್ಮಯುದ್ಧದಲ್ಲಿ ಮಡಿದುಹೋದ ಹುತಾತ್ಮರನ್ನು ಪರ್ಶಿಯನ್ ಭಾಷೆಯಲ್ಲಿ '**ಷಾಯರ್**' ಎಂದು ಹೇಳುವರು. ಇಂತಹ ಷಾಯರರನ್ನು ಹೊಗಳಿಹಾಡುವ ವೀರರಸಭರಿತ ಲಾವಣಿಗಳು ಮುಸಲ್ಮಾನರಲ್ಲಿ ಹೇರಳವಾಗಿರುವುವು. ಇವುಗಳನ್ನು ತಾಳ, ತಂತ್ರಿ (ತಂತುಣಿ), ತಂಬಟೆ (ಡಪ್ಪು), ಮುಮ್ಮೇಳ, ಹಿಮ್ಮೇಳಗಳೊಂದಿಗೆ ಅವರಲ್ಲಿಯ '**ದರ್-ವೇಷ್**' ಜನರು ಹೇಳುವರು. ಆ ಲಾವಣಿಗಳನ್ನು ಕೇಳುವಾಗ—ಅವರ ಭಾಷೆ ಚೆನ್ನಾಗಿ ತಿಳಿಯದಿದ್ದರೂ—ಹಾಡುವವರ ಭಾವಭಂಗಿಗಳನ್ನು ನೋಡಿಯೆ—ನಮ್ಮ ಮೈಯ ನವಿರು ನಿಮಿರಿ ನಿಲ್ಲಬಹುದು. ಮಹಮ್ಮದೀಯರ ಈ '**ಷಾಯರ್**' ವಾಙ್ಮಯಪರಂಪರೆಯನ್ನೆ ಮರ್ಹಾಟಿಗರು ಸ್ವೀಕರಿಸಿ, ಇದುವರೆಗೂ ಅದನ್ನು ತಮ್ಮಲ್ಲಿ ನಡೆಯಿಸಿಕೊಂಡು ಬಂದಿರುವರು. ಮರ್ಹಾಟಿಗರು '**ಷಾಯರ್**' ಎಂದಿರುವ ಪರ್ಶಿಯನ್ ಪದವನ್ನು ಕೆಡಿಸಿ '**ಶಾಹೀರ್**' ಎಂದು ಮಾಡಿಕೊಂಡಿರುವರು. **ಶಿವಾಜಿಯ** ಕಾಲದಿಂದಲೂ ಮಹಾರಾಷ್ಟ್ರದಲ್ಲಿ ಶಾಹೀರ್‌ಕವಿಗಳ ಅಸ್ತಿತ್ವವು ಕಂಡುಬರುತ್ತದೆ. ಆತನ ತರುವಾಯ ಮಹಾರಾಷ್ಟ್ರ ರಾಜ್ಯವು ಬೆಳೆದಂತೆಲ್ಲ, ಸೈನಿಕರಲ್ಲಿಯೂ ಪ್ರಜಾಸಾಮಾನ್ಯರಲ್ಲಿಯೂ ರಾಜನಿಷ್ಠೆ-ದೇಶಾಭಿಮಾನಗಳನ್ನೂ, ಸ್ವಾಭಿಮಾನ-ಆತ್ಮವಿಶ್ವಾಸಗಳನ್ನೂ ಹುಟ್ಟಿಸುವುದಕ್ಕೆ ಈ '**ಶಾಹೀರ್‌ಗಾಣ**' ದ ಉಪಯೋಗವನ್ನಲ್ಲಿ ಚೆನ್ನಾಗಿ ಮಾಡಿಕೊಂಡರು. ರಾಜಸ್ಥಾನದಲ್ಲಿ ಚಾರಣರದೊಂದು ವಿಶಿಷ್ಟ ಜಾತಿಯಿದ್ದಂತೆ ಮಹಾರಾಷ್ಟ್ರದಲ್ಲಿ '**ಶಾಹೀರ್ ಗೀತ**' ಗಳನ್ನು ಹೇಳುವ '**ಶಾಹೀರ**'ರ ಜಾತಿಯೊಂದು ತಲೆಯೆತ್ತಿ ನಿಂತಿತು. ಶಾಹೀರ್‌ಗೀತಗಳನ್ನೆ ಹೇಳುವುದನ್ನು ಉದ್ಯಮವನ್ನಾಗಿ ಇಟ್ಟುಕೊಂಡ ಮನೆತನ ಮಹಾರಾಷ್ಟ್ರದಲ್ಲಿ ಈಗಲೂ ಬೇಕಾದಷ್ಟು ಇವೆ.

**ಮಹಾರಾಷ್ಟ್ರದ ಶಾಹೀರ್-ಪರಂಪರೆ**

'**ಶಾಹೀರ್‌ಗೀತ**' ಎಂಬ ವೀರಸಾಹಿತ್ಯವು ಮಹಾರಾಷ್ಟ್ರದಲ್ಲಿಯೆ ಬರುಬರುತ್ತ ಬೇರೆಯ ಜಾತಿಗೆ ತಿರುಗಲು ತೊಡಗಿತು. ರೂಪು-ವೇಷ-ಭಾಷೆ-ನಡಿಗೆಗಳಷ್ಟು ಶಾಹೀರ್ ರೀತಿಯವುಗಳುಳಿದು. ಭಾವಜೀವವು ಬೇರೆ ಬೇರೆ ಜಾತಿಯದೆಲ್ಲ ಅದರಲ್ಲಿ ಬಂದು ತುಂಬಲಾರಂಭಿಸಿತು. 'ಶಾಹೀರ್‌ಗೀತ'ಗಳೆಂದರೆ ಬರಿಯೆ ವೀರಜೀವನ ಪ್ರಧಾನವಾದುವುಗಳೆ ಇರಬೇಕೆಂಬ ನಿಯಮವುಳಿಯಲಿಲ್ಲ;

**ಕನ್ನಡದಲ್ಲಿಯ 'ಶಾಹೀರಕಿ'**

ಜಾನಪದಜೀವನದ ವಿವಿಧಮುಖವನ್ನು ಬಣ್ಣಿಸುವ ಕಥಾಗೀತಗಳೂ, ಶೃಂಗಾರಗೀತಗಳೂ ಈ ಸಾಹಿತ್ಯದಲ್ಲಿ ಬಂದು ತುಂಬಿದುವು. ಉತ್ತರ-ಕರ್ಣಾಟಕದಲ್ಲಿ ಈಗ ಹೆಚ್ಚಾಗಿ ಪ್ರಚಾರದಲ್ಲಿರುವ '**ಶಾವೀರಕೀ ಹಾಡು**' ಅಥವಾ '**ಗೀಗೀಪದ**' ಗಳ ಮೇಳಗಳು, ಮಹಾರಾಷ್ಟ್ರದ '**ಶಾಹೀರ್-ಗಾಣಾ**' ಪರಂಪರೆಯ ಪಡಿನೆಳಲಾಗಿವೆ. ಕನ್ನಡ '**ಶಾವೀರಕಿ**'ಯಲ್ಲಿ ವೀರಗೀತಗಳಿಗೆ ಸ್ಥಾನವೆ ಇಲ್ಲ ; ಇದಕ್ಕೆ ಕಾರಣವೆಂದರೆ ಇಂದಿನ ಜನಸಾಮಾನ್ಯರಿಗೆ ಕನ್ನಡಿಗರ ನಿಜವಾದ ಇತಿಹಾಸವೆ ಗೊತ್ತಿಲ್ಲ; ಎಂತಲೆ ಕನ್ನಡಿಗರಾದ ವೀರಪುರುಷರ ಹೆಸರನ್ನು ಕೂಡ ಕೇಳಿ ಅರಿತಿಲ್ಲ. ಆದ್ದರಿಂದಲೆ ಕನ್ನಡ '**ಶಾವೀರ**'ರು ಹಾಡುವ ಹಾಡುಗಳೆಂದರೆ ಹೆಚ್ಚಾಗಿ, ಹೆಣ್ಣು-ಗಂಡಿನ ಹೆಚ್ಚುಕಡಿಮೆಯ ಹೊಡೆದಾಟದ ಹಾಡುಗಳು ; ಸದಭಿರುಚಿಗೆ ಒಗ್ಗದಂತಹ ಉತ್ತಾನ-ಶೃಂಗಾರದ ಲಾವಣಿಗಳು ; ತಿಳಿಯದ ಆಧ್ಯಾತ್ಮಿಕ ತತ್ತ್ವವನ್ನು ತಿಳಿದಂತೆ ಹಾಡುವ ಆಭಾಸಾತ್ಮಕ ತತ್ತ್ವಲಾವಣಿಗಳು—ಇವೇ ಆಗಿವೆ. ಮಹಾ-ರಾಷ್ಟ್ರದ '**ಶಾಹೀರ್‌ಗಾಣಾ**'ದ ಪರಂಪರೆ ಗೊತ್ತಿಲ್ಲದೆ, ಕನ್ನಡನಾಡಿನ '**ಶಾವೀರಕಿ**'ಯ ಮೂಲವನ್ನು ಕಂಡು ಹಿಡಿಯುವೆನೆಂದು ಹೋದರೆ ಗೊಂದಲದಲ್ಲಿ ಬೀಳಬೇಕಾಗುವುದು. ಸದ್ಯದ ಕನ್ನಡ '**ಶಾವೀರಕಿ**' ಪರಂಪರೆಗೂ '**ಶಾಹೀರ್‌ಗೀತ**' ಗಳ ವೀರಸಾಹಿತ್ಯ ಪರಂಪರೆಗೂ ಯಾವ ಊರಿನ ಸಂಬಂಧವೂ ಕಂಡುಬರುವಂತಿಲ್ಲ.

**ಐತಿಹಾಸಿಕ-ವೀರಸಾಹಿತ್ಯವು ನಮ್ಮಲ್ಲಿ ಇಲ್ಲ.**

ಕ್ರಿ. ಶ. ೫-೬ನೆಯ ಶತಮಾನದಿಂದಲೂ ಕನ್ನಡಿಗರು ರಾಜ್ಯ-ಸಾಮ್ರಾಜ್ಯಗಳನ್ನು ಕಟ್ಟಿ ಆಳುತ್ತ ಬಂದವರು. ೧೬ನೆಯ ಶತಮಾನದ ಕೊನೆಕೊನೆಯ ವರೆಗೂ ಕನ್ನಡ ಸಾಮ್ರಾಜ್ಯದ ಉಜ್ವಲ-ಚಾರಿತ್ರ್ಯವನ್ನು ಮೆರೆಯಿಸಿದವರು. **ಕದಂಬ, ರಾಷ್ಟ್ರಕೂಟ, ಚಾಲುಕ್ಯ, ಗಂಗ, ಹೊಯಿಸಳ, ವಿಜಯನಗರ** ಮೊದಲಾದ ಒಂದೊಂದು ರಾಜವಂಶದಲ್ಲಿಯೂ ಎಷ್ಟೆಷ್ಟೋ ಜನ ವೀರಪುರುಷರೂ ವೀರ-ಸ್ತ್ರೀಯರೂ ಆಗಿ ಹೋಗಿರುವರು. ಅವರೆಲ್ಲರ ಉತ್ಸಾಹಪ್ರಚೋದಕ ಕಥೆಗಳನ್ನು ಜನಪದಕ್ಕೆ ತಿಳುಹುವ ಆವಶ್ಯಕತೆಯೆನಿಸಿರಲಿಕ್ಕಿಲ್ಲವೇನು ಅಂದಿನ ನಮ್ಮ ಜನಕ್ಕೆ? ಹಾಗೆ ಎನಿಸಿದ್ದರೆ 'ಚಾರಣಗೀತ' 'ಶಾಹೀರ್‌ಗೀತ' ಗಳಂತಹ ಜಾನಪದ ವೀರಸಾಹಿತ್ಯಪರಂಪರೆಯೊಂದು ಇರಬೇಕಾಗಿದ್ದಿತಲ್ಲವೇ ನಮ್ಮಲ್ಲಿ? ಆದರೆ ಅದು ಇದ್ದಿತೆಂಬುದಕ್ಕೆ ಯಾವ ಆಧಾರವೂ ಇಲ್ಲ ; ಅದರ ಅಸ್ತಿತ್ವವೂ ಇಲ್ಲ. ಇದೆಯೆಂದು ಸಾಧಿಸಬೇಕೆಂದರೆ, ಉತ್ತರ **ಕರ್ಣಾಟಕ**-

ದಲ್ಲಿ—ತೀರ ಅರ್ವಾಚೀನವಾದ—ಸರಗುಂದ ಬಾಬಾಸಾಹೇಬನ ಬಂಡಾಯದ ಲಾವಣಿ, ಕಿತ್ತೂರ ಚೆನ್ನಮ್ಮ-ಸಂಗೊಳ್ಳಿಯ ರಾಯಣ್ಣರ ಲಾವಣಿ ಇವಿಷ್ಟು ಸಿಕ್ಕುವುವು. ಮೈಸೂರು ಕರ್ನಾಟಕದಲ್ಲಿ ಟಿಪ್ಪುಸುಲ್ತಾನನ ಲಾವಣಿಯಂತಹ ೨-೩ ಹಾಡುಗಳು ಸಿಕ್ಕರೆ ಹೆಚ್ಚು. ದಕ್ಷಿಣಕನ್ನಡ ಜಿಲ್ಲೆಯಲ್ಲಿ, ಕೆಲವು ಜನ ಸ್ಥಳೀಯ ವೀರರನ್ನು ಹೊಗಳಿ ಹೇಳಿದ ಹಾಡುಗಳು ಇರುವುವಾದರೂ, ಅವು ತುಳು ಭಾಷೆಯಲ್ಲಿರುವುವು. ಕನ್ನಡಿಗರ ಕೊನೆಯ ರಾಜ್ಯವಾದ ವಿಜಯನಗರದ ವೀರರ ಕಥೆಗಳನ್ನೊಳಗೊಂಡ '**ಚಾರಣಗೀತ**'ಗಳು ಒಂದೆರಡು ಕೂಡ ಎಲ್ಲಿಯೂ ಸಿಕ್ಕುವುದಿಲ್ಲವಲ್ಲ! ಇದೇನಾಶ್ಚರ್ಯ? ಇದೆಲ್ಲವನ್ನು ನೋಡಿದರೆ ನಮ್ಮಲ್ಲಿ 'ಚಾರಣಗೀತ'ಗಳಂತಹ ಜಾನಪದ ವೀರಸಾಹಿತ್ಯ ಪರಂಪರೆ ಇರದೆ ಇರಬೇಕು ಒಂದು; ಇಲ್ಲದೆ ಹೋದರೆ ಇತ್ತೀಚೆಗಿನ ೩೦೦-೪೦೦ ವರ್ಷಗಳ ಕನ್ನಡಿಗರ ಪರಾಧೀನ ಜೀವನದಲ್ಲಿ, ಆ ಪರಂಪರೆ ನಷ್ಟವಾಗಿರಬೇಕು ಒಂದು. ಅಂತಹ ಸ್ವದೇಶಾಭಿಮಾನ ಪೋಷಕ ಸಾಹಿತ್ಯ ಪರಂಪರೆ ನಮ್ಮಲ್ಲಿ ಇದುವರೆಗೆ ನಡೆದುಕೊಂಡು ಬಂದಿದ್ದರೆ, ಕನ್ನಡಿಗರ ಇತಿಹಾಸ-ಸಂಸ್ಕೃತಿಗಳು ಇಷ್ಟೊಂದು ಭಿನ್ನಭಿನ್ನವಾಗಿ—ಅಜ್ಞಾತವಾಗಿ—ಉಳಿಯುತ್ತಿರಲಿಲ್ಲ; ಬೇರೆ ಬೇರೆ ಕಾಲದ ಜನಜೀವನ, ಸಂಸ್ಕೃತಿ, ಪ್ರಗತಿಗಳನ್ನು ಅರಿತುಕೊಳ್ಳಲಿಕ್ಕೆ ಅನನುಕೂಲವಾಗುತ್ತಿರಲಿಲ್ಲ.

**ಐತಿಹಾಸಿಕ ವೀರ-ಕಾವ್ಯ ನಮ್ಮ ಪ್ರಾಚೀನ ವಾಙ್ಮಯ-ದಲ್ಲಿಯೂ ಇಲ್ಲ.**

ಜನಪದ ಸಾಹಿತ್ಯದಲ್ಲಿ ಇಲ್ಲದಿದ್ದರೆ ಹೋಗಲಿ; ನಮ್ಮ ವಿದಗ್ಧಸಾಹಿತ್ಯದಲ್ಲಿಯಾದರೂ 'ಚಾರಣಕಾವ್ಯ'ಗಳಂತಹ, ಐತಿಹಾಸಿಕ ವೀರರನ್ನು ಬಣ್ಣಿಸಿ ಹೇಳುವ ಕಾವ್ಯಗಳು ಸಿಕ್ಕುತ್ತವೆಯೆ—ಎಂಬುದನ್ನು ನೋಡಿದರೆ, ಅಲ್ಲಿಯೂ ನಾವು ನಿರಾಶರಾಗಿಯೆ ಹಿಂದಿರುಗಬೇಕಾಗುತ್ತದೆ. **ಕದಂಬ**ವಂಶದ ಯಾವ ವೀರನ ಕತೆಯನ್ನೂ ಒಳಗೊಂಡ ಕಾವ್ಯಗಳು ಕನ್ನಡದಲ್ಲಿಲ್ಲ. **ರಾಷ್ಟ್ರಕೂಟ** ದೊರೆಯಾದ **ನೃಪತುಂಗ**ನು ತಾನೆ ಕವಿಗಳಿಗೆ ರಾಜಮಾರ್ಗ ಹಾಕಿಕೊಡಲು ಹೊರಟು ಗ್ರಂಥ ಬರೆದಿರುವನಾದರೂ, ಅವನನ್ನು ಕುರಿತಾಗಲಿ, ಅವನ ಮನೆತನದ ಇನ್ನಾವ ವೀರರನ್ನು ಕುರಿತಾಗಲಿ ಐತಿಹಾಸಿಕಗ್ರಂಥಗಳನ್ನು ಯಾರೂ ಬರೆದಿಲ್ಲ. ಕನ್ನಡ **ಚಾಲುಕ್ಯ** ವಂಶದ ದೊರೆ (೬ನೆಯ ವಿಕ್ರಮಾದಿತ್ಯ) ಯನ್ನು ಕುರಿತು, ಸಂಸ್ಕೃತಕವಿಯೊಬ್ಬ (ಬಿಲ್ಹಣ) '**ವಿಕ್ರಮಾಂಕದೇವ ಚರಿತೆ**' ಎಂಬ ಹೆಸರಿನಿಂದ ಸಂಸ್ಕೃತ ಭಾಷೆಯಲ್ಲಿ

ಗ್ರಂಥ ಬರೆದಿರುವನಾದರೂ ಕನ್ನಡದಲ್ಲಿ ಆತನ ಸುದ್ದಿಯೆ ಇಲ್ಲ. ಇದೇ **ಚಾಲುಕ್ಯವಂಶದ ೨ನೆಯ ಸೋಮೇಶ್ವರನು,** ತನ್ನ ಕಾಲದ ಜನಜೀವನ ವನ್ನು ಹುದುಗಿಸಿಕೊಂಡಿರುವ '**ಅಭಿಲಷಿತಾರ್ಥ ಚಿಂತಾಮಣಿ**' ಎಂಬ ಸಂಸ್ಕೃತ ಗ್ರಂಥವನ್ನು ಬರೆದಿರುವನಾದರೂ, ಆ ವೀರಧೀರ ದೊರೆಯ ಜೀವನವು ವಸ್ತುವಾಗಿ ಉಳ್ಳ ಕಾವ್ಯಗ್ರಂಥವನ್ನು ನಾವು ಕಾಣುವಂತಿಲ್ಲ. ಚಾಲುಕ್ಯರಾಜರ ಆಶ್ರಯದಲ್ಲಿಯೆ ರಚಿತವಾದ ಪಂಪನ '**ವಿಕ್ರಮಾರ್ಜುನ-ವಿಜಯ**' ರನ್ನನ '**ಸಾಹಸಭೀಮ ವಿಜಯ**' ಗಳನ್ನು ಒಂದು ರೀತಿಯಿಂದ ಐತಿಹಾಸಿಕ ಕಾವ್ಯಗಳೆಂದು ಹೇಳಲಿಕ್ಕೆ ಬರುವಂತಿದೆಯಾದರೂ, ಅವುಗಳಲ್ಲಿ ವರ್ಣಿತರಾದ ದೊರೆಗಳಿಬ್ಬರೂ **ಅರ್ಜುನ, ಭೀಮಸೇನರ** ವೇಷಹಾಕಿ ಕೊಂಡು, ಮಹಾಭಾರತದ ಕಥಾಸನ್ನಿವೇಶಗಳನ್ನೆ ಪರಿಪೋಷಿಸುವ ನಟರಾಗಿ ಬಿಟ್ಟಿರುವರು. ಆದುದರಿಂದಲೆ '**ಪಂಪಭಾರತ**' '**ಗಧಾಯುದ್ಧ**' ಗಳೂ ಚಾರಣಕಾವ್ಯಗಳ ಒರೆಗೆ ಹತ್ತಿ ನಿಲ್ಲಲಾರವು. ಕನ್ನಡಸಂಸ್ಕೃತಿಯನ್ನು ಎಷ್ಟೊಂದು ಪ್ರಗತಿಪಥದಲ್ಲಿ ನಡೆಯಿಸಿದವರಾದರೂ **ಗಂಗ**ರಾಜರಿಗೂ **ಹೊಯಿಸಳ** ದೊರೆಗಳಿಗಳಿಗೂ ನಮ್ಮ ಸಾಹಿತ್ಯದಲ್ಲಿ ಪ್ರತ್ಯಕ್ಷವಾದ ಸ್ಥಾನ ದೊರೆತಿಲ್ಲ. ಕನ್ನಡನಾಡನ್ನು ೨೫೦-೩೦೦ ವರ್ಷಗಳ ವರೆಗೆ ಆಳಿದ **ವಿಜಯನಗರ**ದ ದೊರೆಗಳಿಗೂ ನಮ್ಮ ಸಾಹಿತ್ಯದಲ್ಲಿ ದೊರೆತ ಸ್ಥಾನವು ಇಂತಹದೆ! ಕ್ರಿ. ಶ. ಸುಮಾರು ೧೫೪೦ ರಲ್ಲಿ '**ಅದೃಶ್ಯಕವಿ**' ಎಂಬವನು '**ಪ್ರೌಢರಾಯನ ಕಾವ್ಯ**' ಎಂಬುದೊಂದು ಗ್ರಂಥವನ್ನು ಬರೆದಿರುವನು. ಆದರೆ ಅದರಲ್ಲಿ, ಪ್ರೌಢರಾಯನ ಧೈರ್ಯ-ಶೌರ್ಯಗಳನ್ನು ಪ್ರಕಟಿಸುವ ರಾಜಕೀಯಜೀವನವು ಚಿತ್ರಿತವಾಗಿಲ್ಲ; ಆ ರಾಯನಿಗೆ ಆತನ ಮಂತ್ರಿಯಾದ ಜಕ್ಕಣಾಚಾರ್ಯನು ಹೇಳಿದ ಶಿವಶರಣರ ಕಥೆಯ ಸಾರ ಅಡಕವಾಗಿದೆ. **ನಂಜುಂಡ** ಕವಿಯೂ (೧೫೨೫) **ಗಂಗ** ಕವಿಯೂ (೧೬೫೦) ವಿಜಯ-ನಗರದ ಕಾಲದ **ಕುಮಾರರಾಮ**ನೆಂಬ ಐತಿಹಾಸಿಕವ್ಯಕ್ತಿಯನ್ನು ಕುರಿತು ಬೇರೆ ಬೇರೆ ಎರಡು ಕಾವ್ಯಗಳನ್ನು ಬರೆದಿರುವರು. ಈ **ಕುಮಾರರಾಮ**ನು 'ಕರ್ನಾಟದೇಶಾಧೀಶ್ವರನಾದ ಕಂಪನೃಪತಿಯ ಕುಮಾರನು'. ವಿಜಯ-ನಗರದ ಹಾಳುಪಟ್ಟಣದಲ್ಲಿ ಈಗಲೂ ಒಂದು ಕಟ್ಟಡವನ್ನು '**ಕುಮಾರ-ರಾಮನ ಗರಡಿಯಮನೆ**' ಎಂದು ತೋರಿಸುತ್ತಾರೆ. ಸೊಂಡೂರಿನ ಬಳಿಯ ಲ್ಲಿದ್ದ '**ರಾಮನ ಮಲೆ**' ಎಂಬ ಸ್ಥಳಕ್ಕೂ ಕುಮಾರರಾಮನಿಗೂ ಸಂಬಂಧ ವಿದ್ದಿತೆಂಬ ಲೋಕಕಥೆ, ಈಗಲೂ ಅತ್ತಣ ಭಾಗದಲ್ಲಿ ಪ್ರಚಾರದಲ್ಲಿದೆ. ವಿಜಯನಗರದ ಯಾವ ಮುಖ್ಯ ಮುಖ್ಯ ವೀರರನ್ನು ಕುರಿತೂ ಬರೆದ

ಕಾವ್ಯಗಳು ನಮ್ಮಲ್ಲಿ ದೊರೆಯುತ್ತಿಲ್ಲವಾದರೂ '**ಕುಮಾರರಾಮ**'ನೆಂಬ ಅಮುಖ್ಯವ್ಯಕ್ತಿಯನ್ನು ಕುರಿತು ಬರೆದ ಎರಡು ಐತಿಹಾಸಿಕ ಗ್ರಂಥಗಳು ಇವೆಯೆಂದು ಹೇಳಬಹುದಾಗಿದೆ. ಆದರೆ ಮೇಲಿನ ಆ ಇಬ್ಬರು ಕವಿಗಳಿಗೂ ಗ್ರಂಥರಚನೆಗೆ ಪ್ರೇರಕವಾದುದು ಕುಮಾರರಾಮನ ವೀರಜೀವನವಲ್ಲ ; ಮಲತಾಯಿಯ ಮೋಹಪಾಶದಿಂದ ಪಾರಾಗಿ—ತಂದೆಯ ಕೋಪದುರಿಯಿಂದ ಬದುಕಿ ಉಳಿದ ಅದ್ಭುತರಮ್ಯ ಜೀವನ. ಎರಡೂ ಕಾವ್ಯಗಳಲ್ಲಿ ಆನುಷಂಗಿಕ ವಾಗಿ ಕುಮಾರರಾಮನು '**ತುರುಕ**' ರೊಡನೆ ಕಾಳೆಗವಾಡಿದ ವೀರಕಥೆ ಸ್ವಲ್ಪ ವರ್ಣಿತವಾಗಿರುವುದು; ಈ ಎರಡೂ ಕಾವ್ಯಗಳು ಜಾನಪದವೃತ್ತ ವಾದ ಸಾಂಗತ್ಯದಲ್ಲಿ ಹೆಣಿಕೆಗೊಂಡಿವೆ. ಕನ್ನಡದಲ್ಲಿ '**ಚಾರಣಕಾವ್ಯ**' ವೆನಿಸಿಕೊಳ್ಳಬಹುದಾಗಿ ದೊರೆಯುವ ಮೊದಲನೆಯ ಕಾವ್ಯವೆಂದರೆ **ನಂಜುಂಡ**ಕವಿಯ '**ಕುಮಾರರಾಮನ ಕಥೆ**'! **ಗಂಗ**ಕವಿ ತನ್ನ '**ಕುಮಟಿರಾಮನ ಕಥೆ**'ಯನ್ನು ನಂಜುಂಡನ ಕೃತಿಯಿಂದ ಎತ್ತಿಕೊಂಡು ಬರೆದಿರಬಹುದಾಗಿ ಕಾಣುತ್ತದೆ. ಈ ಎರಡೂ ಕಾವ್ಯಗಳಿಂದ ನಮಗೆ ವಿಜಯ-ನಗರದ ಕಾಲದ ಜನಜೀವನದ ಕಲ್ಪನೆ ತಕ್ಕಮಟ್ಟಿಗೆ ಬರುವಂತಿದೆ.

**ವೀರಕಾವ್ಯಗಳಿಲ್ಲದುದರ ಕಾರಣ-ಮೀಮಾಂಸೆ.**

ನಂಜುಂಡ ಕವಿಯ 'ಕುಮಾರರಾಮನ ಕಥೆ' ಯೊಂದನ್ನು ಬಿಟ್ಟರೆ, ಕ್ರಿ. ಶ. ೧೬ನೆಯ ಶತಮಾನವು ಮುಗಿಯುವ ವರೆಗೆ ಕನ್ನಡದಲ್ಲಿ—ಐತಿಹಾಸಿಕ ವೀರವ್ಯಕ್ತಿಗಳನ್ನು ಕಥಾನಾಯಕರನ್ನಾಗಿಟ್ಟುಕೊಂಡು ಬರೆದ—ಕಾವ್ಯಗಳೇ ದೊರೆಯುವುದಿಲ್ಲವೆಂದು ಹೇಳಬಹುದು. ಹೀಗಾಗುವುದಕ್ಕೆ ಕಾರಣವೆಂದರೆ ಸಾಹಿತ್ಯವು ಆಧ್ಯಾತ್ಮಿಕ ವಿಷಯಪ್ರಧಾನವಾಗಿರಬೇಕೆಂದಿದ್ದ ನಮ್ಮ ಜನರ ಕಲ್ಪನೆ. ಕನ್ನಡದಲ್ಲಿ ಕಾವ್ಯಗ್ರಂಥಗಳು ಬೇಕಾದಷ್ಟು ಇವೆಯಾದರೂ, ಜೈನಕವಿಗಳು ತಮ್ಮ ಪುರಾಣಪುರುಷರನ್ನೂ ತೀರ್ಥಂಕರರನ್ನೂ ಕಾವ್ಯನಾಯಕರನ್ನಾಗಿ ಮಾಡಿಕೊಂಡಿರುವರು. ವೀರಶೈವ ಕವಿಗಳು ಶಿವಶರಣರನ್ನೆ ತಮ್ಮ ಕಾವ್ಯಗಳಲ್ಲಿ ತಂದು ತುಂಬಿರುವರು. ಬ್ರಾಹ್ಮಣಕವಿಗಳು ಬರಿಯೆ ತಮ್ಮ ಸಂಸ್ಕೃತದಲ್ಲಿರುವ ಪುರಾಣ-ಪುಣ್ಯಕಥೆ ಗಳನ್ನು ಕನ್ನಡಿಸುವ ಕೆಲಸವನ್ನು ಮಾಡಿರುವರು. ಇವರೆಲ್ಲರ ಸಾಹಿತ್ಯ ಅವರವರ ಮತದೃಷ್ಟಿಯಿಂದ ಜನತೆಯ ಸಂಸ್ಕೃತಿಗೆ ಪರಿಪೋಷಕವಾಗಿರ ಬಹುದಾದರೂ, ಜನಸಾಮಾನ್ಯರಲ್ಲಿ ದೇಶಾಭಿಮಾನವನ್ನೂ—ಐತಿಹಾಸಿಕ ವೀರಜೀವನ ಶ್ರವಣದಿಂದ ಉಂಟಾಗುವ—ಉತ್ಸಾಹವನ್ನೂ ಹರಡುವುದಕ್ಕೆ ಅಸಮರ್ಥವಾಯಿತು. 'ಮಾನವಮಾತ್ರರನ್ನು ಎಂದೂ ಹೊಗಳಿ ಹಾಡ-

ಲಾರೆವು' ಎಂದು ನಮ್ಮ ಪುರಾತನ ಕವಿಗಳು ಪ್ರತಿಜ್ಞಾಬದ್ಧರಾಗಿಯೆ ಹೊರಟಿರುವರು. ಅಂದಿನ ಕವಿಮಾರ್ಗವಿದರು ಹಾಗೆ ಅವರಿಗೆ ಕಟ್ಟು-ಕಟ್ಟಳೆಗಳನ್ನೂ ಹಾಕಿಯೆ ಬಿಟ್ಟಿದ್ದರು. ಆದುದರಿಂದಲೆ ನಮ್ಮ ವಿದಗ್ಧವಾಙ್ಮಯದಲ್ಲಿ, ಲೌಕಿಕ ಅಹಂಕಾರ ಪ್ರಧಾನಭಾವಗಳಾದ ಸ್ವಾಭಿಮಾನ, ಸ್ವದೇಶಾಭಿಮಾನಗಳನ್ನು ಪರಿಪೋಷಿಸುವಂತಹ ವೀರಚರಿತೆಗಳಿಗೆ—ಎಂದರೆ ಚಾರಣಕಾವ್ಯಗಳಿಗೆ—ಅವಕಾಶವೆ ದೊರೆತಿಲ್ಲ. ಅಂದಿನವರು ಕಾವ್ಯದಿಂದ ಅಪೇಕ್ಷಿಸುತ್ತಿದ್ದ ಪ್ರಯೋಜನಗಳೆಂದರೆ :—

**"ಧರ್ಮಾರ್ಥ ಕಾಮಮೋಕ್ಷೇಷು ವೈಚಕ್ಷಣ್ಯಂ ಕಲಾಸು ಚ |**
**ಪ್ರೀತಿಂ ಕರೋತಿ ಕೀರ್ತಿಂಚ ಸಾಧುಕಾವ್ಯ ನಿಷೇವಣಂ ||**

**ಭಾಮಹನ ಕಾವ್ಯಾಲಂಕಾರ ೧-೨.**

ಕನ್ನಡಿಗನಾದ **ನೃಪತುಂಗ**ನೂ ತನ್ನ '**ಕವಿರಾಜಮಾರ್ಗ**' ದಲ್ಲಿ ಹೇಳಿರುವುದು ಹೀಗೆಂದು :—

**"ಅಧಿಕೃತ ಸತ್‌ಪುರುಷಾರ್ಥ-**
**ಪ್ರಧಾನ ಧರ್ಮಾರ್ಥ ಕಾಮಮೋಕ್ಷಂಗಳವಾ ||**
**ಬುಧಜನ ವಿವಿಕ್ತ ಕಾವ್ಯ-**
**ಪ್ರಧಾರಿತಾರ್ಥಂಗಳಖಿಳ ಭುವನಹಿತಂಗಳ್ ||**

**ಕವಿರಾಜಮಾರ್ಗ ೧-೨೦.**

'**ಭರತೇಶವೈಭವ**' ವೆಂಬ ಕಾವ್ಯವನ್ನು—ಸಾಕಷ್ಟು ಶೃಂಗಾರರಸ ತುಂಬಿದ ಕಾವ್ಯವನ್ನು—ಬರೆಯಲು ಹೊರಟ **ರತ್ನಾಕರವರ್ಣಿ** ಕೂಡ, ತನ್ನ ಕಾವ್ಯರಚನೆಗೆ '**ಅಧ್ಯಾತ್ಮವೆ ನಿಚಿತ ಪ್ರಯೋಜನವೆನಗೆ**' ಎಂದು ಮುಕ್ತಕಂಠದಿಂದ ಹೇಳಿರುವನು. '**ಅಭಿನವ ದಶಕುಮಾರ ಚರಿತ್ರ**' ಕಾವ್ಯವನ್ನು ಬರೆದ **ಚೌಂಡರಸ**ನಿಗೆ ತಾನು ಮಾನವಕಥಾವಸ್ತುವುಳ್ಳ ಕಾವ್ಯ ಬರೆಯುತ್ತಿರುವೆನೆಂದು ಮನಸ್ಸಿಗೆ ಹೇಗೆಹೇಗೆಯೋ ಎನಿಸಿರಬಹುದು; ತನಗೆ ಎನಿಸಿರದಿದ್ದರೂ ಇನ್ನಾರಾದರೂ ತನ್ನನ್ನು ತೆಗಳಿ ಮಾತನಾಡಬಹುದೆಂದೂ ತೋರಿರಬಹುದು, ಎಂತಲೆ ಅವನು ತನ್ನ ಕಾರ್ಯವನ್ನು ಹೀಗೆಂದು ಸಮರ್ಥಿಸಿಕೊಂಡಿರುವನು :—

“ ಸಕಲಾಂತರ್ಯಾಮಿ ಜೀವಪ್ರಕರ ವಿವಿಧ ಚೈತನ್ಯರೂಪಂ ಜಗದ್ವ್ಯಾ-
ಪಕ ಭಾವಂ ವಿಷ್ಣುವೆಂದಾಗಮತತಿ ಸತತಂ ಸಾರ್ವ ಸಂಬಂಧದಿಂ ಕೌ-
ತುಕದಿಂದಾವಾವುದಂ ಬಣ್ಣಿಸಿದೊಡದು ಹರಿಸ್ತೋತ್ರಮೆಂದೀಗಳೀ ಚಿ-
ತ್ರಕಥಾ ವಿಸ್ತಾರಮುಂ ಬಣ್ಣಿಸಲೊಡರಿಸಿದೆಂ ಸತ್ಕವಿಶ್ರೇಣಿ ಮೆಚ್ಚಲ್!”

ಅ. ದ. ಕು. ಚ. ೧. ೧೬.

**ವೀರಸಾಹಿತ್ಯವು ಇಲ್ಲದುದಕ್ಕಾಗಿ ನಮಗುಂಟಾದ ಕೊರತೆ**

ಇವೆಲ್ಲ ಉದಾಹರಣೆಗಳಿಂದ ನಮ್ಮ ಜನರ—ಕಾವ್ಯದ ವಿಷಯದಲ್ಲಿರುವ—ಅಪೇಕ್ಷೆಯ ಕಲ್ಪನೆ ಬರಬಹುದಾಗಿದೆ. ಈ ಬಗೆಯ ನಿಯಮಗಳನ್ನು ಹಾಕಿಕೊಂಡು ಹೊರಟುದರಿಂದಲೆ ಬೇರೆಬೇರೆ ರಾಜರ ಆಶ್ರಯದಲ್ಲಿದ್ದ ನಮ್ಮ ಪ್ರಾಚೀನ ಕವಿಗಳನೇಕರು, ತಮ್ಮ ತಮ್ಮ ಆಶ್ರಯದಾತೃಗಳ ಚರಿತ್ರೆಗಳನ್ನು ಹಾಡಿಹೊಗಳಿ ತಮ್ಮ ಕೃತಜ್ಞತೆಯನ್ನು ತೋರಿಸಬೇಕೆಂದು ಮನಸ್ಸಿನಲ್ಲಿದ್ದರೂ, ವಾಚ್ಯವಾಗಿ ಹಾಗೆ ಮಾಡದೆ ಹೋದರು ; ಆದರೆ ಕೆಲವರು ಮಾತ್ರ ಅವರ ಚರಿತ್ರೆಗಳು ಸೂಚ್ಯವಾಗಿ ಬೋಧವಾಗುವಂತೆ ಪೌರಾಣಿಕ ವ್ಯಕ್ತಿಗಳಲ್ಲಿ ಅವರನ್ನು ಅಡಗಿಸಿಬಿಟ್ಟಿರುವರು. ಕನ್ನಡಿಗರಲ್ಲಿ ಕನ್ನಡ ನಾಡು-ನುಡಿಗಳ ಅಭಿಮಾನವೂ ಐತಿಹಾಸಿಕ ವೀರರ ವಿಷಯಕವಾದ ಹೆಮ್ಮೆಯೂ ಉಜ್ವಲವಾಗಿ ಬೆಳಗದಿರುವುದಕ್ಕೆ ಐತಿಹಾಸಿಕ ವಸ್ತುರಹಿತವಾದ ನಮ್ಮ ಪ್ರಾಚೀನ ವಾಙ್ಮಯವೂ ಒಂದು ಕಾರಣವಾಗಿದೆ. ರಾಜಸ್ಥಾನದಲ್ಲಿಯ ಚಾರಣ-ಪರಂಪರೆಯೂ ಮಹಾರಾಷ್ಟ್ರದಲ್ಲಿಯ ಶಾಹೀರ್ ಪರಂಪರೆಯೂ—ವರ್ತಮಾನಕಾಲದಲ್ಲಿ ಕೂಡ—ನೂತನ ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ಒಳ್ಳೆಯ ಸಾಧನವಾಗಿ ಪರಿಣಮಿಸಿದೆ ; ಅಂತಹ ವೀರಜೀವನ ಮಿಲಿತ ಸಾಹಿತ್ಯಪರಂಪರೆಯ ಬೆಂಬಲ ಕನ್ನಡಿಗರಿಗಿದ್ದುದು ಕ್ರಿ. ಶ. ೧೬ನೆಯ ಶತಮಾನದ ಕೊನೆಯವರೆಗೂ ನಮಗೆ ಕಾಣುವುದಿಲ್ಲ.

**ವೀರಸಾಹಿತ್ಯದ ಆವಶ್ಯಕತೆ ಎನಿಸಿದ ಕಾಲ**

ಕ್ರಿ. ಶ. ೧೭ನೆಯ ಶತಮಾನದಲ್ಲಿ ವಿಜಯನಗರದ ಸಾಮ್ರಾಜ್ಯದ ಆಧಿಪತ್ಯವು ಸಂಪೂರ್ಣವಾಗಿ ತಪ್ಪಿಹೋಯಿತು. ಸಾಮ್ರಾಜ್ಯಕ್ಕೆ ಅಧೀನರಾಗಿದ್ದ ಕನ್ನಡ **ಪಾಳೆಯಗಾರರು** ಅಲ್ಲಲ್ಲಿ ಸ್ವತಂತ್ರರಾಗಿ ತಲೆಯೆತ್ತಲು ತೊಡಗಿದರು. ಅವರಲ್ಲಿಯ ಒಬ್ಬೊಬ್ಬರಿಗೂ ವಿಜಯನಗರದಂತಹ ಸಾಮ್ರಾಜ್ಯವನ್ನು ಮರಳಿ ಕಟ್ಟಿ ಆಳಬೇಕೆಂಬ ಮಹತ್ವಾಕಾಂಕ್ಷೆ. ಎಂತಲೆ ಆಗ ಒಬ್ಬ ಪಾಳೆಯಗಾರ ಇನ್ನೊಬ್ಬನನ್ನು ತನ್ನ ಅಧೀನಪಡಿಸಿ

ಕೊಳ್ಳಲಿಕ್ಕೆ ಹವಣಿಸುತ್ತಿದ್ದನು; ಅದಕ್ಕಾಗಿ ಹೋರಾಡಲು ದಂಡು-ದಳಗಳನ್ನು ಕಟ್ಟುತ್ತಿದ್ದನು. ಮಧ್ಯೆ ಮಧ್ಯೆ ದಂಡೆತ್ತಿ ಬರುತ್ತಿದ್ದ ಉತ್ತರದ ಮುಹಮ್ಮದೀಯ ಸರದಾರರಿಗೆ ಎದುರುಗೊಟ್ಟು ನಿಲ್ಲುವ ಸಂದರ್ಭ ಈ ಪಾಳೆಯಗಾರರಿಗೆ ಬರುತ್ತಿದ್ದಿತು. ಅದಕ್ಕಾಗಿ ತಂತಮ್ಮ ಪ್ರಾಂತ್ಯದ ಜನರಲ್ಲಿ ಸಂಘಟನೆಯನ್ನು ಮಾಡಬೇಕಾಗಿದ್ದಿತು. ಜನಸಾಮಾನ್ಯರಲ್ಲಿ ನಿರಂತರವಾದ ಉತ್ಸಾಹವನ್ನು ಹರಡುವುದು ಆವಶ್ಯಕವೆನಿಸಿತು; ಅದಕ್ಕಾಗಿ ತಮ್ಮ ತಮ್ಮ ಕುಲದ ಚಲದ ವಿಷಯದಲ್ಲಿ ಕೈಕೆಳಗಿನವರಲ್ಲಿ ಶ್ರದ್ಧೆಯನ್ನು ಹೆಚ್ಚಿಸಬೇಕಾಗಿ ಬಂದಿತು. ಆದುದರಿಂದಲೆ ಅಂದಿನ ಅನೇಕ ಜನ ಪಾಳೆಯಗಾರರಿಗೆ ತಂತಮ್ಮ ಆಶ್ರಿತಕವಿಗಳಿಂದ ತಂತಮ್ಮ ವೀರಚರಿತೆಗಳನ್ನೂ ಜಾನಪದಕಾವ್ಯಗಳನ್ನೂ ಬರೆಯಿಸಬೇಕಾದ ಆವಶ್ಯಕತೆ ತೋರಿತು. ಅಲ್ಲದೆ ಇಷ್ಟರಲ್ಲಿಯೆ ಅಂದಿನ ಜನರಿಗೆ ಮುಹಮ್ಮದಿಯ ಸಂಸ್ಕೃತಿಯ ಹೊಕ್ಕುಬಳಕೆ ಸಾಕಷ್ಟು ಆದುದರಿಂದ, ಅವರ '**ಷಾಯರ್‌ನಾಮಾ**' ಗಳ ಅನುಕರಣಮಾಡಬೇಕೆಂಬ ಬುದ್ಧಿಯೂ ಉಂಟಾಗಿರಬಹುದು. ಎಂತಲೆ ೧೭ನೆಯ ಶತಮಾನದಲ್ಲಿ ಕೆಲವು ಐತಿಹಾಸಿಕ ಕಾವ್ಯಗಳು ನಮ್ಮಲ್ಲಿ ತಲೆದೋರಿವೆ. ಆ ಕಾವ್ಯಗಳು ವೀರಜೀವನವನ್ನೇ ಚಿತ್ರಿಸಲು ಹೊರಟುವುಗಳಾಗಿವೆ. ಇಂತಹ ಕಾವ್ಯಗಳಲ್ಲಿ ಮೊದಲನೆಯದಾಗಿ ಸಿಕ್ಕುವ ಮಹತ್ತ್ವದ ಕಾವ್ಯವೆಂದರೆ ಕ್ರಿ. ಶ. **೧೬೪೮** ರಲ್ಲಿ ರಚಿತವಾದ **"ಕಂಠೀರವ ನರಸರಾಜ ವಿಜಯ"**. ಇದನ್ನು ಬರೆದವನು **ಗೋವಿಂದ ವೈದ್ಯ** ಎಂಬ ಹೆಸರಿನ **ಕನ್ನಡ ಚಾರಣಕವಿ.**

## ೨. 'ಕಂಠೀರವ ನರಸರಾಜ ವಿಜಯ' ವಿಚಾರ

**ಕಂಠೀರವ ನರಸರಾಜನು** ಮೈಸೂರೊಡೆಯರ ವಂಶಕ್ಕೆ ಸೇರಿದ ಒಬ್ಬ ಮಹಿಮಾಶಾಲಿಯಾದ ದೊರೆಯು. ಇವನು **ಶ್ರೀರಂಗಪಟ್ಟಣವನ್ನು** ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿಯೆ ಆಳುತ್ತಿದ್ದ; ಕ್ರಿ. ಶ. ೧೬೩೮ ರಿಂದ ೧೬೫೯ ರ ವರೆಗೆ ರಾಜ್ಯವನ್ನಾಳಿದ. ಈತನ ಪರಾಕ್ರಮದ ಬಗೆಗೆ ಮೈಸೂರುರಾಜರ ಚರಿತ್ರೆಯಲ್ಲಿ ತುಂಬ ಆಶ್ಚರ್ಯಕಾರಕವಾದ ಕತೆಗಳಿರುವುವು. ಎಲ್ಲರನ್ನೂ ಮಾರಿ ನಿಂತು ತನ್ನ ಬಿರುದನ್ನು ಮೆರೆಯಿಸಿಕೊಳ್ಳುತ್ತಿದ್ದ **ತಿರುಚಿನಾಪಳ್ಳಿಯ** ಒಬ್ಬ ಜಟ್ಟಿಯನ್ನು, ಈ ದೊರೆಯು ಇನ್ನೂ ಚಿಕ್ಕವನಿರುವಾಗಲೆ ಸೋಲಿಸಿದನು.

**ಕನ್ನಡದೊರೆ ರಣಧೀರ ಕಂಠೀರವ ನರಸರಾಜ**

ಇವನ ಕೈಯಲ್ಲಿಯ '**ವಿಜಯನಾರಸಿಂಹ**' ಎಂಬ ಹೆಸರಿನ ಕತ್ತಿಯ ಪವಾಡದ ಕತೆಗಳೂ ಹಲವು ಉಂಟು. ತನ್ನ ಪರಾಕ್ರಮದಿಂದ ಈ ದೊರೆ ದಕ್ಷಿಣದಲ್ಲಿಯ ಹಲವು ಜನ ಪಾಳೆಯಗಾರರನ್ನು ವಶಪಡಿಸಿಕೊಂಡು, ಮೈಸೂರು ರಾಜ್ಯದ ಗಡಿಯನ್ನು ದಿನದಿನಕ್ಕೆ ಹೆಚ್ಚು ವಿಸ್ತರಿಸತೊಡಗಿದ್ದನು. ಇದರಿಂದ ಇವನು **ಇಕ್ಕೇರಿ, ತಂಜಾವೂರು, ಮಧುರೆ**ಗಳ ಪಾಳೆಯಗಾರರ ಕಣ್ಣಲ್ಲಿ ಒತ್ತಲು ತೊಡಗಿದ್ದನು. ಅಲ್ಲದೆ **ವಿಜಾಪುರ**ದ ಬಾದಶಹನಿಗೂ ತಲೆಭಾರವಾಗಿ ನಿಂತಿದ್ದನು. ಎಂತಲೆ ಬಾದಶಹನು, ಈ ದೊರೆಯನ್ನು ಅಧೀನ ಪಡಿಸಿಕೊಳ್ಳಬೇಕೆಂದು ಆಗಾಗ ದೊಡ್ಡದೊಡ್ಡ ಸೈನ್ಯಗಳನ್ನು ಕೊಟ್ಟು, ಬೇರೆ ಬೇರೆ ಸರದಾರರನ್ನು ಇವನೊಂದಿಗೆ ಯುದ್ಧಕ್ಕೆ ಕಳುಹುತ್ತಿದ್ದನು.

**ಕನ್ನಡದಲ್ಲಿಯ ಮೊದಲನೆಯ ವೀರಕಾವ್ಯ**

'ಶಾಲಿವಾಹನ ಶಕೆ ೧೫೬೧ ನೇ (A. D. ೧೬೩೯) ಬಹುಧಾನ್ಯ ಸಂವತ್ಸರದ ಪುಷ್ಯ ಬಹುಳ ೮ ಶುಕ್ರವಾರದಲ್ಲಿ'* **ರಣದುಲ್ಲಾ ಖಾನ**ನೆಂಬ ಸೇನಾಪತಿಯೊಡನೆ ವಿಜಾಪುರದ ಬಾದಶಹನು '೪೦ ಸಾವಿರ ಕುದುರೆಗಳನ್ನೂ ಅದಕ್ಕೆ ತಕ್ಕ ಕಾಲ್ಬಲ ಮುಂತಾದ ಯುದ್ಧಸಾಮಗ್ರಿಗಳನ್ನೂ ಕೊಟ್ಟು. . ಶ್ರೀರಂಗ ಪಟ್ಟಣಮಂ ಸಾಧಿಸಿಕೊಂಡು ಬರುವುದಾಗಿ ಹೇಳಿ'† ಕಳುಹಿದನು. ಅವನು ಮೈಸೂರಿಗೂ ಶ್ರೀರಂಗ-ಪಟ್ಟಣಕ್ಕೂ ಮುತ್ತಿಗೆ ಹಾಕಿ, **ಕಂಠೀರವ ನರಸರಾಜ**ನಿಂದ ಮೈಯನ್ನು ಸುಗ್ಗುನುಗ್ಗಾಗಿ ಮಾಡಿಸಿಕೊಂಡು ಓಡಿಹೋದನು. ಮುಂದೆ ೨ನೆಯ ವರ್ಷವೆ (ವಿಕ್ರಮ ಸಂವತ್ಸರದಲ್ಲಿ) ಮತ್ತೆ ದಂಡೆತ್ತಿ ಕಳುಹಿದ ಖಾನ್. ಖಾನ್ ಎಂಬ ಸರದಾರನು 'ಮಹಾಪರಾಕ್ರಮಶಾಲಿಗಳಾದ ಶ್ರೀರಂಗ-ಪಟ್ಟಣದ ದೊರೆಗಳ ಸಂಗಡ ತನಗೆ ಸಾಮರ್ಥ್ಯವಿಲ್ಲ' ಎಂದು ದೂರದಿಂದಲೆ ತಿರುಗಿದನು. ಅದೇ ವರುಷ (ವಿಕ್ರಮ ಸಂವತ್ಸರದ ಪುಷ್ಯ ಬಹುಳ ೬ ರಲ್ಲಿ) **ಮುಸ್ತಾಫ್‌ಖಾನ್** ಎಂಬ ಇನ್ನೊಬ್ಬ ಸರದಾರನು ದೊಡ್ಡದಾದ ಸೈನ್ಯದೊಂದಿಗೆ ಯುದ್ಧಕ್ಕೆ ಬಂದು, ಅವನೂ, ಕಂಠೀರವ ನರಸರಾಜನ ಪೆಟ್ಟಿನಿಂದ ಮಣ್ಣುಮುಕ್ಕುತ್ತ ಮರಳಿ ಓಡಿಹೋಗಬೇಕಾಯಿತು. ಕಂಠೀರವ ನರಸ-ರಾಜನ ಸೇನಾಪತಿಯು **ದಳವಾಯಿ ನಂಜರಾಜ**ನೆಂಬವನು. ಇವನ ದೊರೆಗೆ ಸಮೀಪಸಂಬಂಧಿಯೂ ಅಹುದು. ಇವನೂ ತುಂಬ ಪರಾಕ್ರಮಶಾಲಿ.

---

* ಶ್ರೀಮನ್ಮಹಾರಾಜರವರ ವಂಶಾವಳಿ ಭಾಗ ೧; ಪುಟ ೭೩

† ,, ,, ,, ಪುಟ ೮೫

ಕಂಠೀರವ ನರಸರಾಜನದು ಅಚ್ಚುಕೆಚ್ಚಿನ ವೀರಜೀವನ. ಈತನಿಗೆ '**ರಣಧೀರ**' ಎಂಬ ಬಿರುದಿದ್ದುದು ಕೇವಲ ಅಲಂಕಾರದ ಬಿರುದಲ್ಲ, ಅನ್ವರ್ಥಕವಾದುದು. **ಗೋವಿಂದವೈದ್ಯ** ಈ ದೊರೆಯ ಆಸ್ಥಾನಕವಿಯಾಗಿದ್ದನು. ಅವನು ನರಸರಾಜನ ಧೈರ್ಯ-ಶೌರ್ಯ-ಪರಾಕ್ರಮ-ವಿಜಯಗಳನ್ನೆಲ್ಲ ಕಣ್ಣಾರೆ ಕಂಡವನು. ಅಂತಹ ಕವಿ ಆ ದೊರೆಯ ಜೀವನಕಾಲದಲ್ಲಿಯೆ (ಕ್ರಿ. ಶ. ೧೬೪೮) ಆತನ ವೀರಚರಿತ್ರೆಯನ್ನು-ಅಭಿಮಾನದಿಂದ ಕಾವ್ಯವನ್ನಾಗಿ ಬರೆದನು. ಆ ಕಾವ್ಯವೆ '**ಕಂಠೀರವ ನರಸರಾಜ ವಿಜಯ**'.

**'ಕಂಠೀರವ ನರಸರಾಜ ವಿಜಯ'ದ ವೈಶಿಷ್ಟ್ಯಗಳು.**

ಕನ್ನಡ ಸಾಹಿತ್ಯಪ್ರಪಂಚದಲ್ಲಿ ಗೋವಿಂದವೈದ್ಯನ ಈ ವೀರಕಾವ್ಯವು ತನ್ನದೊಂದು ವಿಶಿಷ್ಟಸ್ಥಾನವನ್ನೆ ಪಡೆದುಕೊಂಡು ನಿಂತಿದೆ. ಇದರ ನಾಯಕ ದೇವಪುರುಷನಲ್ಲ; ಪೌರಾಣಿಕ ವ್ಯಕ್ತಿಯಲ್ಲ; ತೀರ್ಥಂಕರನಲ್ಲ; ಶಿವಶರಣನಲ್ಲ; ಸಂನ್ಯಾಸಿಯಲ್ಲ..ಕನ್ನಡಿಗರಿಗೆ ಮೆಚ್ಚಿನ ದೊರೆಯಾಗಿದ್ದ **ರಣಧೀರ ಕಂಠೀರವ-ನರಸರಾಜ**ನೆಂಬ ಐತಿಹಾಸಿಕ ಪುರುಷ..ನಮ್ಮಂತೆಯೆ ನರಮನುಷ್ಯ. ಆದರೆ ಇವನು '**ಬಿರುದಂತೆಂಬರ ಗಂಡ, ಭೀಮಪರಾಕ್ರಮಿ, ಧುರಧೀರ, ಕರ್ಣಾಟಕ ಚಕ್ರೇಶ!**' ಅಲ್ಲದೆ '**ಪರಬಲಮೇಘಾನಿಲ, ಆಂಧ್ರಬಲಸಂಘ ಕರಿಕುಲ ಕಂಠೀರವೇಂದ್ರ, ಅರಿಪಾಂಡ್ಯಭೂಭೃದ್‌ಗಿರಿವಜ್ರದಂಡ**'! ಇಷ್ಟೆ ಅಲ್ಲದೆ '**ಕೊಂಕಣ, ಮಲೆಯಾಳ, ಕೊಡಗು ಭೂಪಾಲರ ಬಿಂಕವ ಮರ್ದಿಪ ಶೂರ!**' ಇಂತಹ ಶೂರ ವೀರ ಕನ್ನಡಿಗನು ಈ ಕಾವ್ಯಕ್ಕೆ ನಾಯಕನಾಗಿರುವನು. ಇದರಲ್ಲಿಯ ವಿಷಯವು ಕೇವಲ ನಾಯಕ-ನಾಯಕಿಯರನ್ನು ಕೂಡಿಸಿ, ಅಗಲಿಸಿ, ಬೆರೆಯಿಸುವ ಶೃಂಗಾರರಸದ ಮಾಟದಿಂದ ಕೂಡಿದುದಲ್ಲ; ವಿದೂಷಕನ ಹುಚ್ಚುನಗೆಯಿಂದ ಬೆರೆತುದಲ್ಲ; ಕರುಣಾನಾಯಕನ ಅಳುವಿನ ರಗಳೆಯಿಂದ ತುಂಬಿದುದಲ್ಲ. ಮೊದಲಿನಿಂದ ಕೊನೆಯ ವರೆಗೂ ಉತ್ಸಾಹವನ್ನು ಸೂರೆಮಾಡುತ್ತ ಹೋಗುವಂತಹ ಯುದ್ಧವಿಷಯವು ಪ್ರಧಾನವಸ್ತುವಾಗಿ ಉಳ್ಳುದು; ವೀರರಸಪ್ರಚುರವಾದುದು. ಮತ್ತೆ ಇದರಲ್ಲಿಯ ಯುದ್ಧವು ಯಾವುದೋ ದೇಶದ ಯಾವುದೋ ಕಾಲದ ಯಾರಾರಲ್ಲಿಯೊ ನಡೆದ ಯುದ್ಧವಲ್ಲ. ಕನ್ನಡಿಗರು ತಮ್ಮ ರಾಜನ—ತಮ್ಮ ದೇಶದ—ಅಭಿಮಾನ-ವಿಶ್ವಾಸಗಳಿಂದ, ತಮ್ಮ ವೈರಿಗಳೊಂದಿಗೆ ನಡೆಯಿಸಿದ ಯುದ್ಧ. ಪ್ರತಿಯೊಂದರಲ್ಲಿಯೂ ಕನ್ನಡ ದೊರೆಗೆ ಜಯವು ದೊರೆತ ಯುದ್ಧ. ಆದುದರಿಂದಲೆ ಇದು '**ಚಾರಣಕಾವ್ಯ!**' ಬರೆದವನು '**ಚಾರಣಕವಿ!**'

ಇದನ್ನು ಓದುವ ಇಂದಿನ ಕನ್ನಡಿಗರಲ್ಲಿ ಕನ್ನಡನಾಡಿನ ಹೆಮ್ಮೆಯ ನೆತ್ತರು ಕುಣಿದಾಡಬಹುದಾಗಿದೆ !

ಈ ಕಾವ್ಯದಲ್ಲಿಯ ಇನ್ನೊಂದು ಗುಣವೈಶಿಷ್ಟ್ಯವೆಂದರೆ ಇದರಲ್ಲಿ ಅಂದಿನ ಕಾಲದ ಕನ್ನಡ ಜನಜೀವನ ಒಡಮೂಡಿ ನಿಂತುದು. ಅರಮನೆಯ ಅಂಗಾಂಗದ ವರ್ಣನೆ ಇದರಲ್ಲಿದೆ ; ಪುರಜನರ ಜೀವನವೈವಿಧ್ಯವೂ ಇದರಲ್ಲಿ ಚಿತ್ರಿತವಾಗಿದೆ. ಅಂದಿನ ಬೇರೆಬೇರೆಯ ಜನರು ಆಡುವುದೇನು, ಊಡುವುದೇನು ; ಉಡುವುದೇನು, ತೊಡುವುದೇನು; ನುಡಿಯುವುದು ಹೇಗೆ, ನಡೆವಳಿ ಎಂತಹದು; ಸಮರಜೀವನ ಹೇಗೆ, ಹಬ್ಬ-ಹರಿದಿನ ಹೇಗೆ.. ಇತ್ಯಾದಿ ಯಾವ ಮಾತನ್ನೂ ಈ ಕಾವ್ಯದಿಂದ ಕಂಡುಹಿಡಿಯಬಹುದಾಗಿದೆ. ಲಾಕ್ಷಣಿಕರ ಒರೆಗೆ ಈ ಕಾವ್ಯವು ಹತ್ತಿ ನಿಲ್ಲಲಾರದು. ಈ ಕಾವ್ಯದ ಪ್ರಯೋಜನ ಜನಸಾಮಾನ್ಯರಿಗೆ ಆದರೆ ಸಾಕೆಂಬ ಅಪೇಕ್ಷೆ ಕವಿಗೆ ಇರಬಹುದಾದುದರಿಂದ, ಅವನು ಜಾನಪದ ಛಂದವಾದ **ಸಾಂಗತ್ಯ**ವೃತ್ತವನ್ನೆ ತನ್ನ ಕಾವ್ಯದ ಹೆಣಿಕೆಗಾಗಿ ಆರಿಸಿರುವನು. ವ್ಯಾಕರಣ ನಿಯಮಗಳನ್ನೆಲ್ಲ ಮೂಲೆಯಲ್ಲಿ ಕೂರಿಸಿ, ರೂಢಗನ್ನಡ ಭಾಷೆಯನ್ನೆ ಬಳಸಿಬಿಟ್ಟಿರುವನು. ಅರ್ಥ-ಭಾವಗಳನ್ನು ಹೊರಕ್ಕೆ ಹಾಕಲಾರದಂತಹ ಅಲಂಕಾರ-ಕವಿಸಮಯಗಳ ಬಿಗಿತವು ಎಲ್ಲಿಯೂ ಈ ಕಾವ್ಯದಲ್ಲಿ ಇಲ್ಲ. ಅಷ್ಟಾದಶ ವರ್ಣನೆಗಳನ್ನು ತಂದುಹಾಕಿ ಲಾಕ್ಷಣಿಕರ ಮನಸ್ಸನ್ನೂ ತೃಪ್ತಿಗೊಳಿಸಬೇಕೆಂದು ಕವಿ ಪ್ರಯತ್ನಿಸಿರುವನಾದರೂ, ಆ ಪ್ರಯತ್ನ ಪಂಡಿತರ ದೃಷ್ಟಿಯಲ್ಲಿ ಅಯಶಸ್ವಿಯಾಗಿದೆ. ಆದರೆ '**ಚಾರಣಕಾವ್ಯ**' '**ಶಾಹೀರ್‌ಕಾವ್ಯ**'ಗಳ ದೃಷ್ಟಿಯಿಂದ ವಿಮರ್ಶಿಸಿ ನೋಡಿದರೆ ಇವನ ಕೃತಿ ತುಂಬ ಯಶಸ್ವಿಯಾಗಿದೆ. ಸ್ವದೇಶಾಭಿಮಾನ ನಿರ್ಮಿತಿಗಾಗಿ ನಮಗೀಗ '**ಕಂಠೀರವ ನರಸರಾಜ ವಿಜಯ**'ದಂತಹ ಕಾವ್ಯ ನೂರಾರು ಬೇಕಾಗಿವೆ. ಆದರೆ ನಮ್ಮ ಪ್ರಾಚೀನ ಕವಿಗಳಲ್ಲಿ ಗೋವಿಂದವೈದ್ಯನಂತಹ ರಾಷ್ಟ್ರವಿಚಾರಪರಿಪೋಷಕ ಕೃತಿನಿರ್ಮಾಣವನ್ನು ಇನ್ನಾರೂ ಮಾಡದಿರುವುದು ನಮ್ಮ ದುರ್ದೈವ ; ನಮ್ಮ ನಾಡಿಗೊಂದು ದೊಡ್ಡದಾದ ನಷ್ಟ !

ಗೋವಿಂದ ವೈದ್ಯ ತನ್ನ ಕಾವ್ಯದಲ್ಲಿ ತನ್ನ ವಿಷಯವನ್ನು ಹೆಚ್ಚಾಗಿ ಎಲ್ಲಿಯೂ ಹೇಳಿಕೊಂಡಿಲ್ಲ. ಕಾವ್ಯದ ೨೬ ಸಂಧಿಗಳಲ್ಲಿ ಎಲ್ಲಿಯೂ—ಒಂದೆ

**ಗೋವಿಂದ ವೈದ್ಯ** ಒಂದು ಸಲವೂ—ತನ್ನ ಹೆಸರನ್ನು ಕೂಡ ತಿಳಿಸಿಲ್ಲ.

**ಕವಿ ಪರಿಚಯ** ಕಂಠೀರವ ನರಸರಾಜನ '**ದಳವಾಯಿ ನಂಜರಾಜೇಂದ್ರ ತನ್ನ ಒಡೆಯನ ಕಾರ್ಯದ ಏಳಿಗೆಯ ಗಡಣವ ಚರಿತೆಯಾಗಿ ಒಲಿದು ಪೇಳಿಸಿದ**

ಎಂದು ತನ್ನ ಕಾವ್ಯಪ್ರೇರಕನ ಹೆಸರನ್ನು ಪೀಠಿಕಾಸಂಧಿಯ ಕೊನೆಯ ಪದ್ಯದಲ್ಲಿ ಹೇಳಿದ್ದಾನೆ. ಕಾವ್ಯದ ಕೊನೆಯಲ್ಲಿರುವ ಗದ್ಯಭಾಗವೊಂದರಲ್ಲಿ "........ರಂಗನಾಥಸ್ವಾಮಿಯ ಕೃಪೆಯಿಂದ ಶ್ರೀನಿವಾಸ ಪಂಡಿತರ ಮಗ ಗೋವಿಂದವೈದ್ಯನು, ಕಂಠೀರವನರಸರಾಜ ವಿಜಯವನ್ನು ವಿರಚಿಸಿ, ಆಚಂದ್ರಾರ್ಕವಾಗಿ ಭೂಮಿಯೊಳಿರಲಿ ಎಂದು ಭಾರತಿನಂಜನ ಮುಖದಿಂದ ವಾಚಿಸಿ ರಾಜಾಸ್ಥಾನದಲ್ಲಿ ವಿಸ್ತಾರಪಡಿಸಿದನು." ಎಂದು ಬರೆದಿದ್ದಾನೆ. ಅದೇ ಗದ್ಯಭಾಗದಲ್ಲಿ ತನ್ನ ಕಾವ್ಯವು "ಶಾ. ವಾ. ಶಕ ೧೫೭೦ ಸಂದ (ಕ್ರಿ. ಶ. ೧೬೪೮) ಸರ್ವಧಾರಿ ಸಂವತ್ಸರ ಜ್ಯೇಷ್ಠ ಶುದ್ಧ ೧೧ ಚಂದ್ರವಾರದಲ್ಲಿ" ಮುಗಿಯಿತೆಂಬುದನ್ನೂ ಸ್ಪಷ್ಟಪಡಿಸಿದ್ದಾನೆ. ಕವಿಯ ವಿಷಯದಲ್ಲಿ ಈ ಗ್ರಂಥದಿಂದ ತಿಳಿದುಬರುವ ಸಂಗತಿಯಿಷ್ಟೆ. ಈ ಕವಿಯನ್ನು ಚಾರಣಕವಿ ಯೆಂದು ಕರೆಯುವುದಕ್ಕೆ ಕಾರಣವೆಂದರೆ ಈತನು ಅನುಸರಿಸಿದ ಕಾವ್ಯಮಾರ್ಗ; ಐತಿಹಾಸಿಕ ವೀರಚರಿತೆಯನ್ನು ಜನಸಾಮಾನ್ಯರೆದುರು ಹಾಡಿತೋರಿಸಲು ಅನುಕೂಲವಾಗುವಂತೆ ಮಾಡಿದ ಸುಲಭ ಕೃತಿರಚನೆ. ತಾನು ಮಾನವನ ಕಥೆಯನ್ನು ಹೇಳುತ್ತಿದ್ದೇನೆಂಬ ಕಳವಳವು ಗೋವಿಂದ ವೈದ್ಯನ ಮನಸ್ಸನ್ನೂ ಕಚ್ಚದೆ ಬಿಟ್ಟಿಲ್ಲ. ಇದಕ್ಕಾಗಿ ಅವನು ಜನರಿಗೆ ಹೇಳುವ ಸಮಾಧಾನವು ಹೇಗೆಂದರೆ :—

"ದೇವತಾ ಸ್ತುತಿಯಲ್ಲ ಕೇಳ್ವೊಡೆ; ನರಸ್ತುತಿ,
ಯಾವ ವೆಗ್ಗಳವೆನಬೇಡ!
ನಾವಿಷ್ಣುಃ ಪೃಥಿವೀಪತಿಯೆಂದು ವೇ-
ದಾವಳಿಗಳು ಸಾರುತಿವೆಕೊ!"

ಇಷ್ಟು ಹೇಳಿಯೂ ಸಮಾಧಾನವೆನಿಸದಿರಬಹುದವನಿಗೆ, ಎಂತಲೆ ಮುಂದೆ :

"ಇನಿತಲ್ಲದಂದಿನ ನರಸಿಂಹ ಕಲಿಯುಗ-
ದನುಜರ ಸಂಹರಿಸುವೊಡೆ।
ಮನುಜಾವತಾರದೆ ಬಂದರಸನ ಕಥೆ
ವಿನುತ ವಿಜಯ ಕೇಳ್ದರಿಗೆ!"

ಎಂದು ಹೇಳಿರುವನು. ಗೋವಿಂದವೈದ್ಯನ ನಿರೀಕ್ಷೆಯಲ್ಲಿ ಅಂದಿನ ಹಿಂದೂ-ವಿರೋಧಿಗಳಾದ ಮುಹಮ್ಮದೀಯರು 'ಕಲಿಯುಗದನುಜರು'! ಅವರನ್ನು ಸಂಹರಿಸಲೆಂದು ಪೂರ್ವಕಾಲದ ನರಸಿಂಹನೆ ಕಂಠೀರವ ನರಸರಾಜನಾಗಿ

ಅವತಾರ ತಾಳಿದ. ತನ್ನ ಭಾವನೆ ಸತ್ಯವೆಂಬುದಕ್ಕೆ ಕವಿ ಕೊಡುವ ಪ್ರಮಾಣವಿದು :

"ಇದಕೆ ತಾರ್ಕಣೆಯಾವುದೆನೆ ನರಹರಿಯುಂ-
ದುದುಭವಿಸಿದ ಮಾಸ-ತಿಥಿಯು
ಪುದಿದತಿ ಶುಭವಾರ ಸಂಜೆಯೊಳುದಿಸಿದ ;
ಪದುಮಾಕ್ಷನೀತ ತಾನೈಸೆ ?" *

ಗೋವಿಂದ ವೈದ್ಯನ **ಕರ್ಣಾಟಕ**ವೆಂದರೆ ಅಂದಿನ ಮೈಸೂರು ರಾಜ್ಯಕ್ಕೆ ಅಧಿನವಾಗಿದ್ದ ಪ್ರದೇಶ ಮಾತ್ರ. ಉತ್ತರ ಕರ್ಣಾಟಕವು ವಿಜಾಪುರದವರ

**ಗೋವಿಂದವೈದ್ಯನ ದೇಶಾಭಿಮಾನ**

ವಶದಲ್ಲಿ ಇದ್ದುದರಿಂದ, ಅದನ್ನು ಗೋವಿಂದ ವೈದ್ಯನಂತೆಯೆ ಅಂದಿನ ಎಲ್ಲ ದಕ್ಷಿಣಕನ್ನಡಿಗರು ಕರ್ಣಾಟಕವೆಂದು ಗಣಿಸುತ್ತಲೆ ಇರಲಿಲ್ಲವೆಂದು ತೋರುವುದು. ಗೋವಿಂದ ವೈದ್ಯನಿಗೆ ಕರ್ಣಾಟಕದ ಅಭಿಮಾನ ತುಂಬ ಇದೆ, ಎಂತಲೇ:

"ಚಪ್ಪನ್ನದೇಶರಾಜಿತಮಾ ಸ್ತ್ರೀಮುಖ-
ದರ್ಪಣದಂತೆ ಮೋಹನದೆ ||
ಇರ್ಪುದು ಕರ್ಣಾಟಕರಾಜ್ಯ ಚೆಲುವಾಂತು
ಒಪ್ಪುವ ಸಕಲ ಸಂಭ್ರಮದೆ!"

ಎಂದು ಮನವಾರೆ ಹೊಗಳಿರುವನು; ಅಲ್ಲದೆ:

"ಜಾತಿಸಂಕರವಿಲ್ಲ, ಜಡದೇಹಿಗಳಿಲ್ಲ,
ನೀತಿಹೀನರು ಚೋರರಿಲ್ಲ,
ಘಾತುಕರಿಲ್ಲ, ದುರ್ಜನರಿಲ್ಲ, ಕರ್ಣಾಟ-
ರೀತಿಯನೆಂತು ಬಣ್ಣಿಸುವೆ ?"

ಎಂದು ಅಭಿಮಾನ ಭರದಿಂದ ಕೊಂಡಾಡಿ ಕೊನೆದಿರುವನು.

---

* "ಶಾ, ಶಕ ೧೫೩೭ನೇ (A. D. ೧೬೧೫) ರಾಕ್ಷಸ ಸಂವತ್ಸರದ ವೈಶಾಖ ಶುದ್ಧ ಚತುರ್ದಶಿ ಸೋಮವಾರ ಸ್ವಾತೀ ನಕ್ಷತ್ರ ೩ನೆಯ ಪಾದ ನೃಸಿಂಹಜಯಂತಿಯಲ್ಲಿ, ಬೆಟ್ಟದ ಚಾಮರಾಜ ಒಡೆಯರವರ ಧರ್ಮಪತ್ನಿ ಹುರದ ಗುರುವಾಜಮ್ಮಣ್ಣಿಯವರ ಗರ್ಭಾಂಬುಧಿಯಲ್ಲಿ ಜನಿಸಿದರು." ಶ್ರೀಮನ್ಮಹಾರಾಜರ ವಂಶಾವಳಿ ಭಾಗ ೧. ಪುಟ ೬೫.

ಮೈಸೂರು ದೇಶದ, ಮೈಸೂರುನಗರದ, ಮೈಸೂರಿನ ದೊರೆಯ ವಿಷಯಕ ಅಭಿಮಾನವನ್ನಂತೂ ಕವಿ ತನ್ನ ಕಾವ್ಯದುದ್ದಕ್ಕೂ ಸೂರೆಮಾಡಿ-ದ್ದಾನೆ. "ಶಚೀಪತಿಪುರದ ಚೆಲ್ವಿಕೆಯ ಏಪೊತ್ತು ನಗುವಂತೆ, ಮೈಸೂರು ಕೀರ್ತಿ-ಪ್ರತಾಪದಿ ಮೆರೆವುದು" ಎಂದು ಹೇಳಿ, 'ಮೈಸೂರ್' ಎಂಬ ಹೆಸರಿನ ಮೇಲೆ ಈ ರೀತಿ ಶ್ಲೇಷ ಮಾಡಿದ್ದಾನೆ :

"ಧರೆಯ ಮೇಲಣ ವೈರಿನೃಪರ ದಂಡಿಸಿ ತಂದ
ವರವಸ್ತುಚಯವೆಸೆದಿರಲು,
ಮೆರೆವುದು ಮೈಸೂರೆಂದೆಂಬ ನಾಮದೊಂ-
ದುರುತರ ಧ್ವನ್ಯರ್ಥವಾಗಿ!"

ಇನ್ನೊಂದು ಕಡೆಗಿವನು ಮೈಸೂರನ್ನು ಬಣ್ಣಿಸಿದುದು ಹೀಗೆ :

"ಪೊಗಳಲಳವೆ ಭೂಮಂಡಲದೊಳಗಿಹ
ನಗರ-ಗಿಗರ ದುರ್ಗ-ಗಿರ್ಗ!
ಅಗಣಿತವಹ ಪುರ-ಗಿರ ಮೈಸೂರಿಗೆ
ಮಿಗೆ ಸರಿಯೆಂದೆನಬಹುದೆ?"

ಇಷ್ಟೇ ಅಲ್ಲ; 'ಚಾಮುಂಡಿದೇವಿಯ ಕೃಪೆಯ ವಿಲಾಸದೊಳು ಈ ಪುರದ ಬಾಲರೆ ಬಂಟರಾಗಿಹರು' ಎಂದು ಹೆಮ್ಮೆಯಿಂದ ಹೇಳುವನ್ನು ಮೈಸೂರಿನ ವೀರರ ಬಗೆಗಂತೂ ಕವಿಗೆ ತುಂಬ ವಿಶ್ವಾಸ; ಆದುದರಿಂದಲೆ

"ಕರಿವಿಂಡುಗಳು ಸಿಂಹದ ಹೊಲದಲಿ ಬಂದು
ನೆರೆ ಮೇವಕೊಂಡು ಜೀವಿಪುವೆ?
ಧರೆಯೊಳು ಮೈಸೂರವರ ಕೂಡೆ ವೈರವ
ಬೆರಸಿದವರು ಹುರುಳಹರೆ?"

ಎಂದು ತುಂಬುನಂಬುಗೆಯಿಂದ ಕೇಳಿರುವನು. ಇನ್ನೊಂದೆಡೆಯಲ್ಲಿ :

"ಸುತ್ತಣ ದೊರೆಗಳಂತಲ್ಲ; ಮೈಸೂರವ-
ರೆತ್ತಿದ ಬಿರುದಿನ ಭಟರು!
ಕತ್ತಲೆ ಹಗಲಿನಂತಿರುವುದವರಿಗೆ! ...."

ಎಂದು ಮೈಸೂರುದೇಶದ ಕಡುವೈರಿಗಳ ಬಾಯಿಂದ ನುಡಿಸಿರುವನು.

ಕಂಠೀರವ ನರಸರಾಜನ ವಿಷಯಕವಾಗಿದ್ದ ಕವಿಯ ಅಭಿಮಾನವಂತೂ ಎಲ್ಲರ ಮನಸ್ಸನ್ನೂ ಆ ದೊರೆಯ ಕಡೆಗೆ ತಿರುಗಿಸುತ್ತದೆ :

“ ಧರೆಗೆ ದುರ್ಜನರಾದ ತುರುಕರ ಬಲವನು
ಹರಿಹಂಚ ಮಾಡಿ ಓಡಿಸಿದ
ದೊರೆ ರಾಯ ನರಸರಾಜೇಂದ್ರನ ಕೆಣಕಿ ಮು-
ತ್ತರಿಗಳುಳಿವರೇ ಲೋಕದಲಿ ?

ಮೊಲವರಿ ಸಿಂಗದೊಡನೆ ಬಲುಸಂಗರ-
ಕೆಳಸಿ ಭೂಮಿಯೊಳು ಜೀವಿಪುದೆ ?
ಚಲದಂಕ ಕಂಠೀರವೇಂದ್ರನ ಕೆಣಕಿ ಮು-
ತ್ತುಳಿವರೆ ರಿಪು ಮನ್ನೆಯರು ?

ಕರ್ಣಾಟಕವ ಕೆಡಿಸಲು ಬಂದ ತುರುಕರ
ನಿರ್ನಾಮವ ಮಾಡಿ ಜಗವ
ಪೂರ್ಣದೆ ಸಲಹಿದ ಕಂಠೀರವೇಂದ್ರ ಸು-
ಪರ್ಣವಾಹನ ಮೂರ್ತಿಯೈಸೆ ! ”

ಎಂದು ಮೊದಲಾಗಿ ನರಸರಾಜನ ಧೈರ್ಯ-ಶೌರ್ಯ-ವೀರ್ಯ ಗಳನ್ನು ಸಂದರ್ಭ ಸಿಕ್ಕಿದಾಗಲೆಲ್ಲ ಹೆಮ್ಮೆಯಿಂದುಬ್ಬಿದ ಎದೆಯಿಂದ ಕವಿ ಬಣ್ಣಿಸುತ್ತಾನೆ. ಗೋವಿಂದವೈದ್ಯನು ಸ್ವದೇಶಾಭಿಮಾನಿ, ಸ್ವರಾಜಾಭಿ ಮಾನಿ, ಸ್ವಜನಾಭಿಮಾನಿ. ಇವುಗಳನ್ನೆ ತನ್ನ ಕಾವ್ಯದ ತುಂಬ ತೂರಿ ಬಿಟ್ಟಿದ್ದಾನೆ. ರಾಜಸ್ಥಾನದ ಚಾರಣಕವಿಗಳು ಮಾಡಿದುದು ಇಂತಹ ಕಾರ್ಯವನ್ನೇ; ಎಂತಲೆ ಗೋವಿಂದವೈದ್ಯನನ್ನು ‘ **ಕನ್ನಡ ನಾಡಿನ ಚಾರಣ ಕವಿ** ’ ಎಂದು ಹೇಳುವುದಕ್ಕೆ ಯಾವ ಅಭ್ಯಂತರವೂ ಇಲ್ಲ.

ಇನ್ನೊಂದು ಮಾತೆಂದರೆ : ಗೋವಿಂದವೈದ್ಯ ತನ್ನ ಕಾವ್ಯವನ್ನು ಕೇಳುವುದಕ್ಕೆ ಆಹ್ವಾನಿಸುವುದು ಯಾರನ್ನು ಗೊತ್ತೆ? ಮನೆಹಿಡಿದು ಕೂಡುವ ಅಲಸಿಗರನ್ನಲ್ಲ, ‘ **ಕಡುಗಲಿಗಳು ಲಾಲಿಪುದು** ’ ಎಂದು ಕಾವ್ಯಪ್ರಾರಂಭ ದಲ್ಲಿಯೆ ಹೇಳುವನು. ‘ **ಚದುರ ಕಂಠೀರವೇಶ್ವರನ ಪುದಿದ ಪ್ರತಾಪ ದೇಳಿಗೆಯ ಸಂಧಿ** ’ ಗಳನ್ನು ಕೇಳಲಿಕ್ಕೆ ತಕ್ಕ ಅಧಿಕಾರಿಗಳು ಕನ್ನಡದ **ಕಡುಗಲಿಗಳೆ** ಅಲ್ಲವೆ ?

## ೩. ಕರ್ಣಾಟಕಕ್ಕೆ ಖಾನರು ಬಂದುದು.

**ಕಾವ್ಯರಚನೆಯ ಕಾಲದ ಕನ್ನಡನಾಡು**

ನಮಗೀಗ **ಗೋವಿಂದವೈದ್ಯ** ಕವಿಯ ಕಾಲದ ಜನಜೀವನ ವೈವಿಧ್ಯದ ಚಿತ್ರವನ್ನು ತೆಗೆಯಬೇಕಾಗಿದೆ; ಆದರೆ ಈ ಕವಿಯ ಕೃತಿಯಲ್ಲಿಯ ವೈಶಿಷ್ಟ್ಯವಾದ **ಸಮರಜೀವನಚಿತ್ರ**ವನ್ನೇ ಮೊದಲು ವಿವರಿಸುವುದು ಹೆಚ್ಚು ಸಮಂಜಸವಾದುದು. ಏಕೆಂದರೆ ಐತಿಹಾಸಿಕ ಕಾಲದ ಕನ್ನಡಿಗರ ಬಂಟತನದ ಬಾಳನ್ನು ಇವನಷ್ಟು ವಿಶದವಾಗಿಯೂ—ಅಭಿಮಾನಪೂರ್ವಕವಾಗಿಯೂ—ವಿವರಿಸಿದವರು ಇನ್ನಾರೂ ಇರಲಾರರು. ಕಂಠೀರವ ನರಸರಾಜನ ತಂದೆ **ಬೆಟ್ಟದ ಚಾಮರಾಜರ** ಆಳಿಕೆಯಲ್ಲಿಯೆ '**ಕಲಿಯುಗದ ಮಹಿಮೆಯಾಗಿ ನರರಕ್ಕಸರು ತಲೆದೋರಿ, ದುರ್ಮಾರ್ಗದಿಂದ ನಡೆದು, ದೇವ–ಭೂದೇವ ( ಬ್ರಾಹ್ಮಣ ) ರುಗಳನ್ನು ಬಾಧಿಸತೊಡಗಿದರು.**' ಅವರು '**ಯಜನ–ಯಾಜನಗಳನು ಅಳಿದರು; ಸುಜನರುಗಳನು ಹಿಂಡಿ ಹಿಳಿದರು; ಹಲವು ಬಗೆಯಿಂದ ಗಜಬಜವನು ಮಾಡಿ ನಿಜವಾಗಿಯೂ ಅಧರ್ಮವನ್ನು ಬಲಿದರು.**' ಅಲ್ಲದೆ '**ಗೋವುಗಳನು ಸದೆಬಡಿದರು; ದೇವತಾಶಿಲೆಗಳನು ಒಡೆದರು; ಪಾವನೆಯರಾದ ಸಾಧ್ವಿಯರನು ಭಂಗಕೆ ತಂದು ಹಾವಳಿಯನು ಮಾಡಿದರು.**' ಮತ್ತೆ '**ತಟಾಕವನು ಒಡೆದರು. ಧರ್ಮವೃಕ್ಷಗಳನ್ನು ಕಡಿದರು; ಮುನಿಗಳ ತಪವನಳಿದು ಕಂಗೆಡಿಸಿದರು.**' ಇದರಿಂದ '**ದೇವರ್ಕಳ ಮಹತ್ತು ಕೆಟ್ಟಿತು; ಮಳೆಬೆಳೆ ನಷ್ಟವಾಯಿತು; ಧರ್ಮಗಳೆಲ್ಲ ಬಿಟ್ಟು ಓಡಿದುವು. ಕಷ್ಟವನ್ನು ಕೊಡುವ ಮ್ಲೇಚ್ಛರು ಎಲ್ಲೆಲ್ಲಿಯೂ ಹೆಚ್ಚಿದರು**'. ಆಗ ಭೂದೇವಿ ಖಳರ ಬಾಧೆಯನ್ನು ತಾಳಲಾರದೆ ಚಿಂತಿಸತೊಡಗಿದಳು. ಚಿಂತಿಸಿ ಚಿಂತಿಸಿ ಕೊನೆಗೆ ಆಕೆ ಕ್ಷೀರಸಾಗರವಾಸಿಯಾದ ಶ್ರೀಮನ್ನಾರಾಯಣನನ್ನು ಹೀಗೆಂದು ಮೊರೆಹೊಗುವಳು :

**"ಅಂದಿನ ಖಳರೀಗ ಬಂದು ತುರುಕರಾಗಿ**
**ಮುಂದುಗೆಡಿಸಿ ಗೋ-ದ್ವಿಜರ,**
**ಕೊಂದು ಕೂಗುತ ಧರ್ಮದಂದವನಳಿದರು;**
**ಕಂದರ್ಪಪಿತನೇ ಚಿತ್ತೈಸು!"**

* * * *

**" ದುಷ್ಕರ ಹೊರಲಾರೆ ನಿನ್ನಯ ಕರುಣಾ-**
**ದೃಷ್ಟಿಯೊಳೆನ್ನನುದ್ಧರಿಸಿ**
**ತಟ್ಟನೆ ಸಲಹೆಂದು ಹರಿಚರಣಕೆ ನೊಸ-**
**ಲಿಟ್ಟಳು ಮತ್ತೆ ಭೂದೇವಿ ".**

ಆಗ ಶ್ರೀಹರಿ '**ಬೆಟ್ಟದ ಚಾಮುಭೂಪಾಲನ ಪಟ್ಟದ ಹೆಂಡತಿ ಗುರುವಂಬೆಯ ಹೊಟ್ಟೆಯಿಂದ ಹುಟ್ಟಿಬಂದು ಖಳರನ್ನು ಕೊಲ್ಲುತ್ತೇನೆ**' ಎಂದು ವಚನಕೊಡುವನು. ಅದರಂತೆಯೆ ಕಂಠೀರವ ನರಸರಾಜನಾಗಿ (೧೬೧೫) ಅವತರಿಸುವನು. ಈತನಿಂದ ತರುವಾಯ ೧೮–೧೨ ವರ್ಷಗಳಲ್ಲಿಯೆ **ಮಹಾರಾಷ್ಟ್ರ**ದಲ್ಲಿ ಹುಟ್ಟಿದ **ಶಿವಾಜಿಯು** ಶಿವನ ಅವತಾರವೆಂಬ ಕಲ್ಪನೆ ಮಹಾರಾಷ್ಟ್ರದಲ್ಲಿ ಉಂಟು.

**ಕಂಠೀರವ ನರಸ-ರಾಜ ಮತ್ತು ಶಿವಾಜಿರಾಜ**

ಇದಕ್ಕೆ ಕಾರಣವೆಂದರೆ ಧರ್ಮನಿಷ್ಠರಾದ ಹಿಂದುಗಳೆಲ್ಲ, ವಿಧರ್ಮೀಯರಾದ ಮಹಮ್ಮದೀಯರ ಹಿಂಸೆ–ಛಲನೆಗಳನ್ನು ತಾಳಲಾರದೆ ಅಂದು ಗೋಳಿಡುತ್ತಿದ್ದರು; ಅಂತಹ ವೇಳೆಯಲ್ಲಿ ಈ ವೀರಪುರುಷರು ತಾರಕರಾಗಿ ಬಂದುದರಿಂದ, ಭಗವದ್ಗೀತಾ ವಚನದಲ್ಲಿ ಸಂಪೂರ್ಣ ಶ್ರದ್ಧೆಯಿದ್ದ ನಮ್ಮ ಕನ್ನಡಿಗರೂ ಮರಾಟಿಗರೂ, ಇವರನ್ನು ಅವತಾರಿಗಳೆಂದು ಭಾವಿಸಿರುವರು. ಗೋವಿಂದ-ವೈದ್ಯನು ನರಸರಾಜನನ್ನು ಶ್ರೀನರಸಿಂಹನ ಅವತಾರಿಯೆಂದಂತೆಯೆ, ಶಿವಾಜಿಯ ವಿಷಯಕವಾಗಿದ್ದ ಶಾಹೀರ್‌ಗೀತಗಳೆಲ್ಲ ಶಿವಾಜಿಯನ್ನು **ಶ್ರೀಶಿವಾವತಾರಿ**ಯೆಂದು ಹೇಳುತ್ತವೆ. ಶಿವಾಜಿಗೆ **ಭವಾನಿ**ಯ ವರ-ಪ್ರಸಾದವಿದ್ದಂತೆಯೆ ಕಂಠೀರವ ನರಸರಾಜನಿಗೆ **ಬೆಟ್ಟದ ಚಾಮುಂಡಿ**ಯ ವರಪ್ರಸಾದವಿರುವುದು; ಹೇಗೆಂದರೆ:

**" ಬೆಟ್ಟದ ಚಾಮುಂಡಿಯಾ ನೃಪಾಲಕ ಬೇಡಿ-**
**ದಿಷ್ಟಾರ್ಥವನಿತ್ತಾಗ |**
**ಕಟ್ಟೆರಕದೆ ಕಾದಿಹಳಾ ಭೂಪನ**
**ಧಿಟ್ಟತನಕೆ ಸರಿಯುಂಟೆ ? "**

**" ಚಂಡಿಕಾ ದೇವಿಯಾ ಕಂಠೀರವೇಂದ್ರನ**
**ಖಂಡೆಯದಲಗಿನೊಳಾಗ**
**ಮಂಡಿಸಿ ಮೆರೆವಳಾತನ ಪ್ರತಾಪಕೆ ಮಿಕ್ಕ**
**ಮಂಡಲೇಶ್ವರರೆಣೆಯುಹರೆ ? "**

ಶಿವಾಜಿಯು ಕಾಳಗದ ಕತ್ತಿ '**ಭವಾನೀ ತರವಾರ್**' ಆದರೆ, ಕಂಠೀರವ ನರಸರಾಜನದು '**ವಿಜಯನಾರಸಿಂಹ**'! ಇಬ್ಬರೂ ಬೆಳೆದು ಬಾಳಿದುದು ಒಂದೆ ಶತಮಾನದಲ್ಲಿ; ಒಂದೆ ಬಗೆಯ ಪರಿಸ್ಥಿತಿಯಲ್ಲಿ! ಆದರೆ ಕಂಠೀರವ ನರಸರಾಜನು ತನ್ನ ವೀರಚಾರಿತ್ರ್ಯವನ್ನು ಮುಗಿಸಿ ದಿವಂಗತನಾಗುವಾಗ (೧೬೫೯), ಶಿವಾಜಿಯ ಹೆಸರು ಇನ್ನೂ ಭಾರತದಲ್ಲಿ ಬಹುಜನರಿಗೆ ಗೊತ್ತಾಗಿರಲಿಲ್ಲ ಕೂಡ. ಎಂತಲೆ ಶಿವಾಜಿಗೆ ಸಂಬಂಧಿಸಿದ '**ಭವಾನೀ ತರವಾರ್**' '**ಭವಾನೀ ವರಪ್ರಸಾದ**'ದ ಮಾತುಗಳು, ಕಂಠೀರವ ನರಸರಾಜನ '**ವಿಜಯನಾರಸಿಂಹ**' '**ಚಾಮುಂಡೀ ವರಪ್ರಸಾದ**'ಗಳ ಅನುಕರಣದ ಫಲಗಳಾಗಿರಬಹುದಾಗಿದೆ. ಶಿವಾಜಿ 'ದೇವಬ್ರಾಹ್ಮಣ ಪಾಲಕ' ನೆನಿಸಿಕೊಂಡುದೂ ಈ ದೊರೆಯ ಪ್ರಭಾವದಿಂದ ಇರಬಹುದಾಗಿದೆ. ಹೀಗಾಗುವುದಕ್ಕೆ ಕಾರಣವೂ ಇಲ್ಲದೆ ಇಲ್ಲ; ಶಿವಾಜಿಯ ತಂದೆ **ಶಹಾಜಿ**ಯು ಬಹುದಿನಗಳವರೆಗೆ—ವಿಜಾಪುರದ ಬಾದಶಹನ ಪ್ರತಿನಿಧಿಯಾಗಿ—**ಬೆಂಗಳೂರ**ಲ್ಲಿದ್ದನೆಂಬುದನ್ನು ಇತಿಹಾಸವು ಹೇಳುತ್ತದೆ. ಆತನ ಕಡೆಗೆ ಆಗಾಗ ಬಂದು ಬಂದು ಹೋಗುತ್ತಲಿರಬಹುದಾದ ಹಲವು ಜನ ಮರ್ಹಾಟರಿಗೆ, ಕಂಠೀರವ ನರಸರಾಜನ ಚರಿತ್ರೆ ಗೊತ್ತಿರದೆ ಇರಲಾರದು. ಅಲ್ಲದೆ ಕಂಠೀರವನರಸರಾಜನು ನರಸಿಂಹಾವತಾರಿಯೆಂಬ ಕಲ್ಪನೆ ಆ ದೊರೆಯ ಜೀವಿತಕಾಲದಲ್ಲಿಯೆ ಜನಜನಿತವಾಗಿತ್ತೆಂಬುದಕ್ಕೆ ಗೋವಿಂದವೈದ್ಯನ ಕೃತಿಯೆ (೧೬೪೮) ಪ್ರತ್ಯಕ್ಷ ಪ್ರಮಾಣವಾಗಿದೆ.

**ಮುಹಮ್ಮದೀಯರ ಆಕ್ರಮಣ**

ಕಂಠೀರವ ನರಸರಾಜನು ರಾಜ್ಯವಾಳುತ್ತಿರುವಾಗ ಒಮ್ಮೆ (೧೬೩೮) **ಇಕ್ಕೇರಿಯ ವೀರಭದ್ರನಾಯಕನಿಗೂ ಬಸವಾ ಪಟ್ಟಣದ ಹನುಮಪ್ಪನಾಯಕ** (ಕೆಂಗೇಂದ್ರ) ನಿಗೂ ಎಲ್ಲೆಕಟ್ಟಿನ ಮಾತಿಗೆ ಪಂಥವುಂಟಾಗಿ, ಹಟವು ಹುಟ್ಟಿ ಮುನಿಸು ತಲೆದೋರಿತು. ಆದರೆ ವೀರಭದ್ರನಾಯಕನು ತನಗಿಂತ ಸಾಮರ್ಥ್ಯವಂತನಾದುದರಿಂದ '**ಆತನ ಕೂಡ ಕಾದಲರಿಯದೆ ವಿಜಯಾಪುರದ ಭೂತಳೇಶ (ಬಾದಶಹ) ನ ಬಳಿಗಾಗ ದೂತನು ಅಟ್ಟಿದ**'. ಅಟ್ಟಿದ ಆ ದೂತನು '**ಬಂದು ಆಗಲೆ ಪಾತ್ಶ್ಯಾವನು ನೆರೆ ಬೇಗದಲಿ ಸಂದಿಸಿಕೊಂಡು, ನಿಂದು ಕಾಣಿಕೆಯಿಕ್ಕಿ**' ರೊಕ್ಕದ ಆಶೆಯನಿತ್ತು, ಆತನ ದಂಡನ್ನು ಇಕ್ಕೇರಿಯ ಪ್ರದೇಶದ ಮೇಲೆ ಎತ್ತಿತಂದನು. ಆ ದಂಡಿನ ಅಧಿಪತಿಯಾದ ರಣದುಲ್ಲಾಖಾನನು ಹನುಮಪ್ಪನಾಯಕನ ಬಲವನ್ನೂ ಸಹಕರಿಸಿಕೊಂಡು 'ಇಕ್ಕೇರಿಯ ದಳವನ್ನು ಮುರಿಯಲಿರಿದು' ಬೆನ್ನಟ್ಟಿ, ಪುರವನ್ನು

ಮುತ್ತಿದನು. ಇದರಿಂದ ಬೆದರಿದ ಇಕ್ಕೇರಿಯ ಭೂಪನು ಓಡಿಹೋಗಿ ಮಲೆಯನ್ನು ಹೊಕ್ಕನು. ಖಾನನು ಆಕ್ಷಣವೆ **ದೂಳಿಗೋಟೆಯನ್ನು** ಕೊಂಡನು. ಆಗ ಖಾನನ ಸೈನ್ಯವು ಮಾಡಿದ ಹಾವಳಿಯನ್ನು ಕವಿ ಹೀಗೆ ಹೇಳುತ್ತಾನೆ :

**" ಹಿಡಿದು ಹೆಣ್ಣುಗಳ, ದೇವರ ಮೂರ್ತಿಗಳ ತಲೆ-**
**ಯೊಡೆದು, ಪುರವ ಸೂರೆಮಾಡಿ,**
**ಕೆಡಿಸಿ ಪತಿವ್ರತೆಯರ, ಗೋವುಗಳ ಸದೆ-**
**ಬಡಿದರೇವೇಳ್ವೆನದ್ಭುತವ ? "** ( ಸಂಧಿ ೧೧, ಪದ್ಯ ೬ )

**ಅರಮನೆಯೊಳಗಿಹ ಸಕಲವಸ್ತುವ ಕೊಂಡು**
**ಹರುಷದೆ ರಣಧೂಳಿಖಾನ**
**ಪುರಕೆ ಠಾಣೆಯನಿಕ್ಕಿ ಪಾತ್ಶ್ಯಾವಿನೆಡೆಗೈದಿ**
**ಭರದೆ ಕಾಣಿಕೆಯ ಮಾಡಿದನು ! "** ( ಸಂಧಿ ೧೧, ಪದ್ಯ ೬ )

ಆಗ ಬಾದಶಹನಿಗೆ ತುಂಬ ಸಂತೋಷವಾಯಿತು. ' ರಣಧೂಳಿಖಾನ 'ನ ಶೌರ್ಯವನ್ನು ಕೊಂಡಾಡಿ, ಅವನಿಗೆ **' ಸರಿಲಸುಕರತನವಿತ್ತು, ತುರಗದಳವ ಕೂಡಿಕೊಟ್ಟು, ಇರದೆ ಕರ್ಣಾಟಕವ ಸಾಧಿಸು ಹೋಗು '** ಎಂದು ಹೇಳಿದ; ಜೊತೆಗೆ ಅಂಕುಶಖಾನನೆ ಮೊದಲಾದ ಮಹಾಮಹಾ ಶೂರರನ್ನು ಕೊಟ್ಟು ಬೀಳ್ಕೊಟ್ಟ. **' ಬಳಿಕ ಆ ಖಾನ ಸಲಾಮೆಂದು ತಳುವದೆ ತಳತಂತ್ರ (ಸೈನ್ಯ) ಗೂಡಿ ಸನ್ನಾಹದೊಳು ಅಳವಟ್ಟು ಉಬ್ಬಿನಲಿ ನಡೆದ. " ಕಂಠೀರವ ನರಸ-ರಾಜ ವಿಜಯ '** ಕಾವ್ಯದ ೧೧ನೆಯ ಸಂಧಿಯಿಂದ ಮೊದಲುಮಾಡಿ ೧೯ನೆಯ ಸಂಧಿ ಪೂರ್ಣವಾಗುವ ವರೆಗೂ ಬರಿಯೆ ಯುದ್ಧಗಳ ವಾಸ್ತವ ವರ್ಣನೆಯಿದೆ. ಈ ಯುದ್ಧಗಳಲ್ಲಿ ತೋರಿಸಿದ ಕನ್ನಡವೀರರ ಪರಾ-ಕ್ರಮಕ್ಕೂ ಕೈಚಳಕಕ್ಕೂ ಮೇರೆಯಿಲ್ಲ.

**ರಣಧೂಳಿಖಾನನ ದಾಳಿ**

ಕರ್ಣಾಟಕಕ್ಕೆ ದಂಡೆತ್ತಿ ಹೊರಟ **' ರಣಧೂಳಿಖಾನ '** ನೆಂದರೆ ಸಾಮಾನ್ಯವೀರನಲ್ಲ. **' ರಣಧೂಳಿಖಾನನೆಂದೊಡೆ ಹೆಂಗಳ ಗರ್ಭ ಮಣಿದು ಬೀಳ್ವುವು ಭೂತಳಕೆ '.** ಇಂತಹ ಖಾನನು ಅಸಂಖ್ಯ ಸೈನ್ಯದೊಂದಿಗೆ ಬಂದು, ಬಸವಾಪಟ್ಟಣದ ಹನುಮಪ್ಪ ನಾಯಕನ ಸ್ನೇಹ-ಸಹಾಯಗಳನ್ನು ಪಡೆದುಕೊಂಡು ಮುಂದುದರಿಯಲು ತೊಡಗಿದ. ಮೈಸೂರಿನ ಅಂದಿನ ಗಡಿಯ ಕೋಟೆಗಳಾದ **' ಹರುಪನಹಳ್ಳಿ, ಕನಕಗಿರಿ, ಸೊಂಡೂರು, ಉಜ್ಜನಿ'**

ಮೊದಲಾದ ಸ್ಥಳಗಳ ಪಾಳೆಯಗಾರರೆಲ್ಲ ಖಾನನಿಗೆ ಸಹಾಯಕರಾಗಿ ಬಂದರು. ಅದರಂತೆಯೆ **ರಾಯದುರ್ಗದವರು, ಹಟ್ಟಿಯ ವೀರಪ್ಪನಾಯಕ, ದೊಡ್ಡೇರಿಯ ಅರಸ, ಕುಂದುರುಪೆಯ ಸೈನಿಕರು** ಇವರೂ ಖಾನನನ್ನು ಕೂಡಿದರು. ಇವರೆಲ್ಲ ರನ್ನೂ ಕೂಡಿಸಿದವನು ಬಸವಾಪಟ್ಟಣದ ಹನುಮಪ್ಪನಾಯಕ. **ಹಿರಿಯೂರ ತಮ್ಮಣನಾಯಕನೂ; ಚಿಕ್ಕನಾಯಕನ ಹಳ್ಳಿಯ ಬೈರನಾಯಕನೂ; ತುರುಗೆರೆ, ಬೇಲೂರು, ನರಸಿಂಹಪುರ, ಪಾಲುಪರೆಗಳ ಅರಸರೂ** ಹನುಮಪ್ಪನಾಯಕನ ಕಡೆಯವರೇ ! ಇವರಲ್ಲದೆ 'ತನ್ನ ಸಮಾನದ ಬಿರುದಿನ ಖಾನರು' ಐವತ್ತು ಜನರಿದ್ದರು. ದಂಡಿನಲ್ಲಿ ಆನೆಗಳೆಷ್ಟು, ಕುದುರೆಗಳೆಷ್ಟು, ಕತ್ತಿಯಾಳು ಗಳೆಷ್ಟು, 'ಕುಂತ-ನೇಜೆಯ-ಕೈಯಿಟ್ಟಿ' ಗಳವರೆಷ್ಟು! ಈ ಸೈನ್ಯದ 'ನಡತೆ ಯಿಂದ **ಗಿರಿದುರ್ಗ** ಅಡಗಿದುವು ; ಕುಡಿತೆಯಿಂದ **ಜಲದುರ್ಗ** ಬತ್ತಿದುವು; ಕೋಪದ ಕಿಡಿಯೊಳು **ವನದುರ್ಗ** ಬೆಂದುವು'.

ಮುಹಮ್ಮದೀಯರ ಸೈನ್ಯದ ವರ್ಣನೆಯನ್ನು ಕವಿ ಕಣ್ಣಾರೆ ಕಂಡವ ನಾಗಿಯೆ ಮಾಡಿದ್ದಾನೆ; ಹೇಗೆಂದರೆ :

> **"ಬಳಿಕಾಗ ಖಾನ-ಖಾನರು ಫೌಜ ಬೇರೆ ಬೇ-**
> **ರಳವಡಿಸಿಯೆ ನಡೆತರಲು,**
> **ಸಿಲೆಯ ಸಂಜೋಗದ ರಾವುತರೊಗ್ಗಲಿ**
> **ಖಳನೈತಂದನುಬ್ಬಿನಲಿ!"** (೧೧-೨೯)

**ಮುಹಮ್ಮದೀಯರ ಸೈನ್ಯವರ್ಣನೆ.**

ಸೈನ್ಯದ ಮುಂದೆ ನಾಲ್ಕೆಂಟು ಸಾವಿರದಷ್ಟು 'ಧಾಳಿಯ ಕುದುರೆ' ಗಳಿದ್ದುವು. ಎಲ್ಲರೂ ಆಗಾಗ 'ತೂಳುವ ಬಲುಬೊಬ್ಬೆಯಿಂದ' ಆಕಾಶ ಮಂಡಲವೆ ಘೀಳಿಟ್ಟಿದ್ದಿತು. ಆನೆಗಳ ಮೇಲಿನ ತೊಟ್ಟಿಲು, ಚಪ್ಪರ (ಅಂಬಾರಿ) ಗಳಲ್ಲಿ 'ಸುಮ್ಮಾನದ ಬಿಬ್ಬಿಯರೊಡನೆ ಕುಳಿತು' ಹಲವು ಜನ ಖಾನರು 'ಆನಂದವಾಡುತ' ಬರುತ್ತಿರುವರು. ಕುದುರೆಯ ಸೈನ್ಯದ ಮೇಲಧಿಕಾರಿಗಳಾದ ಖಾಸರ ವಲ್ಲಭೆಯರು '**ಪಲ್ಲಕ್ಕಿ-ದಂಡಿಗೆಗಳ** ಮೇಲೆ' ಬರುತ್ತಿರುವರು. '**ಡಮಾಣ**' ಬಿಗಿದ ಅಗಣಿತ **ಒಂಟೆ**ಗಳೂ, ಝಗಝಗಿಸುವ ಕಾಂತಿಯಿಂದ ಸೊಗಸುವ **ಕೊಲ್ಲಾ**ರಗಳೂ ದಂಡಿನೊಂದಿಗೆ ಇದ್ದುವು. ಸೈನಿಕರೊಂದಿಗೆ '**ಕೂಳಪಾಳೆಯ** (ಬಾಜಾರ ಬಣಗು)' **ಒಂದು** ಇದ್ದೆ ಇರಬೇಕಲ್ಲವೆ? ಆ 'ಕೂಳಪಾಳೆಯದ ಸಂಗಡ, ಕುದುರೆಯ

ಮೇಲೆ—**ಕಾಲಕುಪ್ಪಸ** ( ಚೆಲ್ಲಣ ), **ಪಾಪೋಸು**, ಜೋಲುವ **ರವಿಕೆ**ಯು ಮೊಲೆಕಟ್ಟು ಇವುಗಳಿಂದ ಕೂಡಿದ—ಚೆಲುವೆಯರಾದ ಸೂಳೆಯರು ಬರುತ್ತಿದ್ದರು. ‘ ಹೂಡಿದ ಬಂಡಿಗಳೊಳಗೆ ಈಡಿರಿದ ( ತುಂಬಿದ ) **ಪಿರಂಗಿ** ( ತೋಫು ) ’ ಗಳು ಅಗಣಿತವಾಗಿ ನಡೆದಿದ್ದುವು. **ಸರಳು** ( ಬಾಣ ) ಗಳು ತುಂಬಿದ **ತರಕಸ** (ಬತ್ತಳಿಕೆ) ಗಳು, ಸಾವಿರಾರು ಬಂಡಿಗಳಲ್ಲಿ ತುಂಬಿತುಂಬಿ ಸಾಗಿದ್ದುವು. ಅದರಂತೆಯೆ **ಕರಿಯ ಮದ್ದಿನ ತಿತ್ತಿ, ಬಾಣದ ಹೇರು**ಗಳೂ, **ಅಪಿನಿಯ** (ಆಫೀಮು) **ಸಾಲ-ಮೊಟ್ಟೆ**ಗಳೂ ಲಕ್ಷಸಂಖ್ಯೆಯಲ್ಲಿ ಬರುತ್ತಿದ್ದುವು. **ಬಂಗಿಯ ಹೇರು**ಗಳೂ, ಸಾಸಿರಗಟ್ಟಲೆ **ಗಂಗಸಾರ** (ಒಂದು ಜಾತಿಯ ಹೆಂಡ ), **ಸಾರಾಯ**ಗಳು ತುಂಬಿ ಸೂಸುವ **ಸೀಸ**ಗಳೂ ಲೆಕ್ಕ-ವೀಸೆಂದು ಹೇಳಲಿಕ್ಕೆ ಬಾರದಷ್ಟು ದಂಡಿನೊಂದಿಗೆ ಇದ್ದುವು. ದಂಡಿನ ‘ **ಸಂಜೋಗ** ( ಸಮವಸ್ತ್ರ ) ’ ಗಳನ್ನು ಎತ್ತಿನ ಮೇಲೆ ಹೇರಿಕೊಂಡು **ವಾಣಿಜಿಕರ** ಮೊತ್ತವೆ’ ಹೊರಟಿದ್ದಿತು. ಸೈನ್ಯದ ಪಾಳೆಯ ಬಿಟ್ಟಲ್ಲೆಲ್ಲ ಕೆಲಸಮಾಡಲು ‘ **ಕಾಮಾಟಿ** ’ ರು ಬೇಕಲ್ಲವೆ? ಅಂತಹ ‘ **ಕಾಮಾಟದ ಬಿಡುಮಂದಿ** ’ ಕೊಡಲಿ, ಕೈಮಚ್ಚು, ಗುದ್ದಲಿ, ಮೊನೆಹಾರೆ, ಕುಡುಗೋಲು, ತಡಿಕೆ, ಮಕ್ಕರಿ ( ದೊಡ್ಡಬುಟ್ಟಿ ) ಇವುಗಳನ್ನೆಲ್ಲ ತೆಗೆದುಕೊಂಡು ಹೊರಟಿದ್ದರು. ಇವರಲ್ಲದೆ ‘ **ಕೊಟ್ವಾಣಿಗರು** ( ಕುಟ್ಟು-ಬೀಸುವವರು ) ’ **ಕಮ್ಮಾರರು,** ಬಹುಬಗೆಯ ರೊಟ್ಟಿ–ಸಕ್ಕರೆ–ತುಪ್ಪ–ಮೊಟ್ಟೆಗಳನ್ನೆಲ್ಲ ಮಾರುವ **ಬೇಹಾರಿಗ**ರು ಮೊದಲಾದವರು ಇಟ್ಟಣಿಸುತಲಿ ಐದಿದರು.

> **“ ಒಡನೀ ಪರಿಯ ಸಮಸ್ತ ಸಂಜೋಗದೆ**
> **ಪಡೆ ಸಹ ರಣಧೂಳಿ ಖಾನ**
> **ಬಿಡದೆ ಕರ್ಣಾಟ ರಾಜ್ಯವ ಪೊಕ್ಕು ಧಾಳಿಯ-**
> **ನಿಡುವ ಸಂಭ್ರಮವನೇವೇಳ್ವೆ !”** ( ೧೧-೪೨ )

ಮುಸ್ತಫಾಖಾನನೆಂಬ ಇನ್ನೊಬ್ಬ ಸರದಾರನನ್ನು ಬಾದಶಹನು ಕರ್ನಾ-ಟಕದ ಮೇಲೆ ಕಳುಹಿಕೊಟ್ಟನು. ಈ ಖಾನನಂತೂ ತನ್ನ ಒಡೆಯನೆದುರು :

> **“ ಹಲವು ಮಾತೇಕೆಲೆ ಜೀಯ, ವೀಳ್ಯವಕೊಟ್ಟು**
> **ಕಳುಹೆನ್ನ ! ಕರ್ಣಾಟಕವ**
> **ಸೆಳೆದು ನಿಮ್ಮಯ ವಶಮಾಡದೊಡಾಸ್ಥಾನ-**
> **ದೊಳಗೆನ್ನನಿರಿಸಬೇಡ. . . .”**

ಎಂದು ಪ್ರತಿಜ್ಞೆಮಾಡಿ ಹೊರಟವನು. ಇವನು ‘ತುರುಗೆರೆಗೆ ಅರೆಗಾವುದದೆ’

ಬೀಡನ್ನು ಬಿಟ್ಟನು. ಅವನ ಬೀಡಿನಲ್ಲಿ **ಗುಡಿ, ಗೂಡಾರ,** ನೀಟಿನ **ಸರವತಿಗೆ** ( ? ) ಇವು ಪ್ರತಿಯೊಬ್ಬ ಖಾನನಿಗೂ ಇದ್ದುವು. **ಕರಿಗಳಶಾಲೆ** ಯಿದ್ದಿತು; **ತುರಗಗಳ ಲಾಯ**ವಿದ್ದಿತು; 'ಬಹುವಸ್ತು ಪರಿಶೋಭಿಪ' **ಅಂಗಡಿಗೇರಿ** ಇದ್ದಿತು. **ಭಂಗಿಯ ಹೇರು, ಅಪಿನಿಯ ಮೊಟ್ಟೆ, ಸಾರಾಯದ ಅಂಗಡಿ, ಸುರೆಯ ತಿತ್ತಿ**ಗಳ ಜಂಗುಳಿ ಇವುಗಳ **ಸಾಲಪಸರ**ವು ಇದ್ದಿತು. **ಡೋಳಿ**ನ ಕುದುರೆಗಳೂ, **ಡಮಾನ**ದ ( ದೊಡ್ಡ ನಗಾರಿಗಳು ) ಮದಕರಿಗಳೂ, **ಟಮುಕು** ( ಚಿಕ್ಕ ನಗಾರಿ ) ಗಳ ಒಂಟೆಗಳೂ—ಪಾಳೆಯದ ಅಂಗರಕ್ಷೆಯ ರಾವುತರ ಕೂಡ ಸಪ್ಪಳಮಾಡುತ್ತ ತಿರುಗುತ್ತಿದ್ದುವು. ದಂಡಿನ ಎಚ್ಚರಿಕೆಯ ಕಾವಲಿಗೆಂದು 'ಹೊಸ ಮನುಷ್ಯರ ಗವಲಿಗೆ (ವಾಸನೆಗೆ) ಗಳ್ಳಿಕ್ಕುತ ಮುಸುಕಿ ಮುಂಬರಿವ' **ನಾಯಿ**ಗಳು ಶೋಭಿಸುತ್ತಿದ್ದುವು.

ಮೇಲೆ ಹೇಳಿದ ಖಾನರಿಬ್ಬರ ಪಾಳೆಯದ ಬಣ್ಣನೆಯನ್ನು ನೋಡಿದರೆ ಅಂದಿನ ಕಾಲದ ಮಹಮ್ಮದೀಯರ ಯುದ್ಧಸನ್ನದ್ಧಸೇನೆಯ ಚಿತ್ರ ಕಣ್ಣೆದುರು ಕಟ್ಟದಿರದು. ಇನ್ನು ಮಹಮ್ಮದೀಯರ ಸೈನ್ಯ, ನಾಡಿನಲ್ಲಿ ಅಂದು ಹೇಗೆ ಹೇಗೆ ಹಾವಳಿ ನಡೆಯಿಸುತ್ತಿದ್ದಿತೆಂಬುದನ್ನು ನೋಡಬೇಕಾದರೆ ನಾವು ರಣಧೂಳಿಖಾನನ ಸೈನ್ಯದ ಮುಂಬರಿತವನ್ನು ನೋಡುತ್ತ ಹೋಗಬೇಕು.

* * * *

**ಸೀರೆಯ**ವಸು ಸೂರೆಮಾಡಿ ಖಾನನು, (ಅಲ್ಲಿಯ) ಆ ಭೂಪನನು ಯಮನ ಪಟ್ಟಣಕೆ ಸೇರಿಸಿದನು. ಮುಂದೆ ತನ್ನ **ವಾರುವ ದಳ** (ಕುದುರೆಯ ಸೈನ್ಯ) ಸಹಿತನಾಗಿ, ಕ್ರಮಕ್ರಮವಾಗಿ ದಾಳಿಯಿಡ **ಕರ್ಣಾಟಕದಲ್ಲಿ** ತೊಡಗಿದನು. ಖಾನನ ದಾಳಿಗೆ ತುಮಕೂರ **ನಡೆಯಿಸಿದ ಹಾವಳಿ** ಭೂನಾಥನು ಕಂಗೆಟ್ಟು, ಸಕಲ ರಾಜ್ಯವ ಬಿಟ್ಟು, ಆನಲಾರದೆ (ಎದುರಿಸಲಾರದೆ) ಗಿರಿದುರ್ಗಕ್ಕೆ ತೆರಳಿದನು. 'ಕೊಡದೆ ಕಾದಿಪ ಪಳ್ಳಿ-ಪಳ್ಳಿ-ಪುರಗಳನು ತುಡುಕಿ, ಲಗ್ಗೆಗೆ ಬಿಟ್ಟು, ಅಲ್ಲಿಯ ಸಕಲ ಜನರ ಕಡಿಖಂಡವ ಮಾಡಿ' ಖಾನನು ಮುಂವಕೆ ಅಡಿಯಿಟ್ಟ. ಖಾನನ ಸೈನ್ಯವು ಮುತ್ತಿ ಒಡೆದುಹಾಕಿದ ಪುರ, ಪಳ್ಳಿ, ಅಗ್ರಹಾರಗಳ ನಿವಾಸಿಗಳಾದ ಜನರೆಲ್ಲ ಕಡುಭೀತಿಯ ತಳೆದು ಆಗ ಹೆಡಗೆಗಳಲ್ಲಿಯೂ ಹೇರುಗಳಲ್ಲಿಯೂ ಅಕ್ಕಿ-ಹುಡಿಹಿಟ್ಟುಗಳನು ತುಂಬಿತುಂಬಿಕೊಂಡು ಕೊಡಗಿನ ಕಾಡನ್ನು ಸೇರಿದರು.

" ತಾಯೊಂದೆಸೆ ಮಕ್ಕಳೊಂದೆಸೆ ಕೊಟ್ಟಿಹ
ಬೀಯಗರೊಂದೆಸೆಯಾಗಿ,
ಬಾಯ ಬಿಡುತ ಬಲು ಭೀತಿಯೊಳಗೆ ಹೊಕ್ಕ-
ರಾಯಾಸಗೊಂಡು ಹೆಮ್ಮಲೆಯ ! " (೧೧-೪೭)

ಅಲ್ಲದೆ ' **ಹಗೆ, ಪೆಟ್ಟಿಗೆ,** ಕಣಜಗಳಲ್ಲಿರುವ ರಾಶಿ ರಾಶಿ ಧಾನ್ಯಗಳನ್ನು ಬಗೆದು ಭಾವಿಸದೆ ಎಲ್ಲವನ್ನೂ ಸೂರೆಗೊಟ್ಟು, ಮಿಗೆ ಬೆಳೆದಿಹ ಪೈರುಗಳ ಬಿಟ್ಟು, ಜನವೆಲ್ಲ ಅಂಜಿ ಅಂಜಿ ಜಗುಳಿದರು.' ಅದರಂತೆಯೆ ' ಎತ್ತು, ಕರೆವ-ಹಸು, ಎಮ್ಮೆಯ ಹಿಂಡುಗಳು ಇವೆಲ್ಲ ಎತ್ತಲಾದರೂ ಹೋಗಲೆನುತ ಜನ ತಲೆಕೆದರಿಕೊಂಡು ( ಗಾಬರಿಯಿಂದ ) ಗುಡ್ಡ-ಬೆಟ್ಟಗಳನ್ನು ಹತ್ತಲುತೊಡಗಿದರು '. ಆಗ ಎಲ್ಲರ ಕಾಲಲ್ಲಿಯೂ ' ಮೂಡಿದ ದಸಿ, ಮುಳ್ಳುಗಳು ತಾಕಿ ಸೀಳಿದ ಮೈಗಾಯದಿಂದ ಜೋಲಿ ಸುರಿವ ಬಿಸುರಕ್ತದಿಂದ ಆ ಜನಜಾಲ ದೆಸೆದೆಸೆಗೆ ಐದಿತು '.

" ಅದೊ ಬಂದುವು ಕುದುರೆಯ ಹಿಂಡುನೋಡಿತ್ತ-
ಲಿದೆ ಬಲುಪೌಜೆಂದೆನುತ,
ಬೆದರಿ ಓಡುವ ಜನಗಳ ಕಂಡು ಜಗವೆಲ್ಲ
ಗದಗಾಪುಗೊಂಡುದೇವೇಳ್ವೆ ! " (೧೧-೫೧)

' **ಹೆಂಡಿರುಗಳನು ಬಿಟ್ಟು ಓಡಿದವರ ಶಿಶುತಂಡವನು ಈಡಾಡಿದವರ, ಗಂಡನ ಬಿಟ್ಟು ಬಾಯ್ಬಿಡುತ್ತಿದ್ದ ಹೆಂಗಳ ಅಂಡಲೆ ( ದುಃಖ ) ಗಳನು '** ಬಣ್ಣಿಸಿ ಹೇಳಲಿಕ್ಕಾಗದು. ಗೂಳೆಯೆದ್ದ ಜನರಲ್ಲಿಯ ಅನೇಕ ಬಸಿರೆಯರು ಗಿಡಗಳ ಬುಡದಲ್ಲಿಯೆ ಹೆತ್ತುಬಿಟ್ಟರು; ಆ ಬಾಣಂತಿಯರನ್ನೂ ತುಂಬಿದ ಬಸಿರೆಯರನ್ನೂ ಒಡನೆ ಸಾಗಿಸಲಾರದವರು, ' ಕಡುಗಲಿ ರಣಧೂಳಿಖಾನನ ಅಬ್ಬರಕಂಜಿ ' ಅಡವಿಗಳನ್ನು ಸೇರಿದರು ಆಗ ಎಲ್ಲೆಲ್ಲಿಯೂ :

" ಕಣ್ಣಿನೊಳಗೆ ಖಾನ, ಕನಸಿನೊಳಗೆ ಖಾನ,
ಬಣ್ಣಿಸೆ ಮನದೊಳು ಖಾನ !
ತಿಣ್ಣವಡೆದ ಖಾನನ ಸುದ್ದಿ ಜಪವಾಗಿ
ಬಣ್ಣಗೆಟ್ಟುದು ಲೋಕವೆಲ್ಲ ! " (೧೧-೫೪)

ಮುಂದೆ ಖಾನನು ಹಾಗೆಯೆ ಮುಂಬರಿಯುತ್ತ ' **ನೊರಸುರಾಜ್ಯ** ' ವನ್ನು ಮುತ್ತಿ ವಶಪಡಿಸಿಕೊಂಡನು. **ಬೆಂಗಳೂರು ಕೋಟೆಯನ್ನು**

ವಶಪಡಿಸಿಕೊಂಡು ಅಲ್ಲಿ **ಶಹಾಜಿ** (ಶಿವಾಜಿಯ ತಂದೆ) ಯನ್ನು ಬಾದಶಹನ ಅಪ್ಪಣೆಯಂತೆ ಅಧಿಪತಿಯನ್ನಾಗಿ ನಿಯಮಿಸಿದನು. **ರಾಮಗಿರಿ, ಕುಣಿಗಿಲು ಬಲ್ಲಾಳಪುರ, ಕೋಳಾಲ, ಬಿಜ್ಜಾವರ, ಚಿಕಬಳಲಾಪುರ, ಹೊಳವನ ಹಳ್ಳಿ, ಹೊಸಕೋಟೆ, ಬಾವಲೂರು, ಹೊಸೂರು, ಕಗ್ಗೊಂದಿ, ಮಾಸ್ತಿ, ದೇವಂಡಪುರಿ, ಸೂರೆಬಲೆ, ಸಿಡಿಲ್‌ಗಟ್ಟ** ಇಲ್ಲಿಯ ಪ್ರಭು-ಮನ್ನೆಯ-ಅರಸು-ನೃಪರುಗಳೆಲ್ಲ ಸೋತು ಖಾನನಿಗೆ ಶರಣಾಗತರಾದರು. ಬಳಿಕ ಖಾನನು ಇವರೆಲ್ಲರಿಗೆ ಅಧಿರಾಜನಾದ **ಕಂಠೀರವ ನರಸರಾಜನು** ಇರುವ ಪಟ್ಟಣವನ್ನೇ ಮುತ್ತಬೇಕೆಂದು ಆಲೋಚನೆ ಮಾಡಿದನು.

> **“ ಎಂದಾಗಳಾಲೋಚಿಸಿ ಖಾನಖಾನರಿ-**
> **ಗಂದಾಗಳುಡುಗೊರೆಯಿತ್ತು,**
> **ಮುಂದಣ ಪಯಣವ ನಿರ್ಧರಗೈದಾಗ**
> **ಬಂದು ಬಿಟ್ಟನು ಹೊರಬೀಡ ” !**

**ಆ ಕಾಲದಲ್ಲಿಯ ಹಿಂದುಗಳ ಮನಃಸ್ಥಿತಿ**

ಆಗಿನ ಕಾಲದ ಮುಹಮ್ಮದೀಯರು ಕೇವಲ ಧರ್ಮಾಭಿಮಾನದಿಂದ ಹಿಂದುಗಳೊಡನೆ ಕಾದುತ್ತಿದ್ದರಾದರೂ, ಹಿಂದುಗಳಲ್ಲಿ ಧರ್ಮಾಭಿಮಾನವು— ಜನಸಾಮಾನ್ಯರಲ್ಲಿ—ಅಷ್ಟೊಂದು ಜಾಗೃತವಾಗಿರಲಿಲ್ಲ ವೆಂದು ತೋರುವುದು; ಏಕೆಂದರೆ ಮುಹಮ್ಮದೀಯರ ಸೈನ್ಯದಲ್ಲಿ ಸೇರಿಕೊಂಡು, ಕನ್ನಡಿಗರ ರಾಜ್ಯಗಳಾದ ವಿಜಯನಗರ, ಮೈಸೂರುಗಳೊಡನೆ ಎದುರಿಸಿ ನಿಂತ ಪರಪ್ರಾಂತೀಯ ಹಿಂದುಗಳು ಎಷ್ಟೋ ಜನರು. ಅದ ರಂತೆಯೆ ಈಗ ಕೂಡ ‘ರಣಧೂಳಿಖಾನ’ನ ಸೈನ್ಯದ ಮುಖ್ಯಸ್ಥರಲ್ಲಿ **ವೇದೋಜಿ, ಶಹಾಜಿ, ಸಖಾಜಿ, ರಾಘವಪಂಡಿತ** ಮೊದಲಾದ ಮರಾಟಿಗ ರಿದ್ದರು. ಸೈನ್ಯದಲ್ಲಿಯೂ ‘ನೆರೆ ಗುಜ್ಜರಾತಿ, ಕನ್ನೋಜಿ, ಖುರೇಸಾನಿ’ ಮೊದಲಾದ ಜನರಿದ್ದರು. ಸ್ವಾರ್ಥಿಯಾದ ಬಸವಾ ಪಟ್ಟಣದ **ಕೆಂಗೇಂದ್ರ ಭೂಪತಿಯೂ** ತನ್ನ ಜನರೊಂದಿಗೆ ಮುಹಮ್ಮದೀಯ ಸೈನ್ಯದಲ್ಲಿ ಕೂಡಿದ್ದನು. ಇವರಲ್ಲದೆ ಖಾನನ ಸೈನ್ಯದಲ್ಲಿಯ ಮುಖ್ಯ ಮುಖ್ಯರಾದ ಮುಹಮ್ಮದೀಯ ರೆಂದರೆ **‘ಪರಾತಖಾನ್, ಕೈರಿತಿಖಾನ್, ಬಲವಂತಖಾನ್ (?) ಮುಸ್ತಫಖಾನ್, ಅಬುದುಲ್ಲಾಖಾನ್, ಯಕಲಾಸಖಾನ್, ಅಂಬರ ಖಾನ್, ಸಿದ್ದೀರಹೀಮುಖಾನ್, ಅಂಕುಶಖಾನ್, ಸೊಲ್ಲಾಪುರದ ಸಿದ್ದೀಮಲ್ಲಿಗೆಖಾನ್, ಅದ್ದಮುಖಾನ್, ಜಿಲಹರಖಾನ್, ಮಹಮೂದ**

**ಖಾನ್, ಗಲೀಖಾನ್, ಫತ್ತೇಖಾನ್** ಮೊದಲಾದವರು ಇದ್ದರು.* ಖಾನನು ತನ್ನ ಸೈನಿಕರನ್ನೂ ಸೈನ್ಯಾಧಿಕಾರಿಗಳನ್ನೂ ಕರೆದು, ಮೈಸೂರಿನವರ ಮಹತಿಯನ್ನೂ ಯುದ್ಧಪದ್ಧತಿಯನ್ನೂ ಹೀಗೆಂದು ವರ್ಣಿಸಿ ಹೇಳಿ ಎಚ್ಚರಿಕೆ ಕೊಟ್ಟ :

**" ಸುತ್ತಣ ದೊರೆಗಳಂತಲ್ಲ, ಮೈಸೂರವ-**
**ರೆತ್ತಿದ ಬಿರುದಿನ ಭಟರು !**
**ಕತ್ತಲೆ ಹಗಲಂತಿಹುದವರಿಗೆ ನೀವು**
**ಜತ್ತಾಯತದೆ ತೆರಳಿ...."** ( ೧೧-೧೦೪ )

**" ಬಟ್ಟೆಯೊಳಗೆ ಮೈಮರೆದೈದುವರ ಕೈ-**
**ಸಟ್ಟುಗ-ಚೂರಿ-ಬಾಕಿನಲಿ**
**ಮೆಟ್ಟಿ ಮೂಗರಿದು ಅಡಗುವರಂತೆ ನೀವತಿ**
**ಕಟ್ಟೆಚ್ಚರದೊಳೈದಿರಿ !...."** ( ೧೧-೧೦೯ )

ಇಲ್ಲಿಯ ಎರಡನೆಯ ಪದ್ಯದಲ್ಲಿ ಹೇಳಿದ ಯುದ್ಧರೀತಿ ಆಗ '**ಕಗ್ಗೊಲೆ ಕಾಳೆಗ**' ಎಂಬ ಹೆಸರನ್ನು ಪಡೆದಿದ್ದಿತು. ಮೈಸೂರಿನ ವೀರರು ಈ ಬಗೆಯ ಯುದ್ಧದಲ್ಲಿ ತುಂಬ ಪ್ರವೀಣರೆಂಬುದನ್ನು, ವಿಜಾಪುರದ ಇನ್ನೊಬ್ಬ ಸರದಾರನಾದ ಮುಸ್ತಫಾ ಖಾನನು ತನ್ನ ಸೈನಿಕರನ್ನು ಕುರಿತು ಹೀಗೆ ಹೇಳಿದ್ದಾನೆ :

**ಮೈಸೂರವರ ಕಗ್ಗೊಲೆಕಾಳೆಗ**

**" ಕಗ್ಗೊಲೆಗಳ ಕಾಳೆಗದೆ ಮೈಸೂರವ-**
**ರಗ್ಗಳೆಯುರು ಜಗದೊಳಗೆ !**
**ಬಗ್ಗನಿಲ್ಲಿಂದೈದಿ ನಾವು ನಮ್ಮಯ ಗಡಿ-**
**ದುರ್ಗದೊತ್ತಲಿ ನಿಲ್ವೆವೆಂದ "** ( ೧೯-೪೯ )

ಕಗ್ಗೊಲೆ ಕಾಳೆಗವೆಂದರೆ ( ಕಳ್ + ಕೊಲೆ = ಕಗ್ಗೊಲೆ ) ಒಮ್ಮೆಲೆ ಕಳ್ಳತನದಿಂದ ನುಗ್ಗಿ ಮೇಲೆ ಬಿದ್ದು ಮಾಡುವ ಕೊಲೆಯ ಯುದ್ಧ. ಈ ರೀತಿಯನ್ನೇ ಮುಂದೆ ಮಹಾರಾಷ್ಟ್ರೀಯರು ಅನುಸರಿಸಿರಬಹುದೇ ?..

---

* ಇವೆಲ್ಲ ಖಾನರ ಹೆಸರುಗಳಲ್ಲಿಯ ಎಷ್ಟೋ ಹೆಸರುಗಳು, ಕನ್ನಡಿಗರ ಬಾಯಲ್ಲಿ ಅಪಭ್ರಂಶಹೊಂದಿವೆಯೆಂದು ತೋರುವುದು.

ಎಂದು ಎನಿಸುವುದು. ಏಕೆಂದರೆ ಅವರದೊಂದು ವೈಶಿಷ್ಟ್ಯವೆಂದು ಹೆಸರಾಗಿರುವ '**ಗನಿಮಿಾಕಾವಾ**' ಎಂಬ ಯುದ್ಧರೀತಿಯು, ಈ '**ಕಗ್ಗೊಲೆಕಾಳಿಗ**'ದ ಪ್ರತಿರೂಪವೆ ಆಗಿರುವುದು. ಈ ಗ್ರಂಥ ಶಿವಾಜಿಯ ಉದಯಕ್ಕಿಂತ ಮೊದಲಿನದೆಂಬುದನ್ನು ಯಾರೂ ಮರೆಯಲಾಗದು.

*   *   *   *

**ಮೈಸೂರವರ ಮುನ್ನೆಚ್ಚರಿಕೆ**

ಖಾನನು ದಂಡೆತ್ತಿ ಬರುತ್ತಿರುವ ವಾರ್ತೆಯನ್ನು ಒಡನೆಯೆ **ಬೇಹಿನವರು** (ಗುಪ್ತಚಾರರು) ಬಂದು **ಗಡಿಯಮನ್ನೆಯ**ರಿಗೆ ಹೇಳಿದರು; ಅವರು **ದಳವಾಯಿ**ಯೆಡೆಗೆ ಚರರನ್ನು ಅಟ್ಟಿದರು. ಚರರು ಬಂದು **ದಳವಾಯಿ ನಂಜೇಂದ್ರ**ನ ಸಂದಿಸಿಕೊಂಡು ಖಾನನು ದಂಡೆತ್ತಿ ಬಂದಿರುವುದನ್ನೂ, '**ರಾಮಗಿರಿಯ ದುರ್ಗದೊತ್ತಿನ ಮುಂದಣ ತೊರೆಯ ದಂಡೆಯಲಿ**' ತನ್ನ ಅಸಂಖ್ಯ ದಂಡಿನೊಂದಿಗೆ ಬೀಡನ್ನು ಬಿಟ್ಟಿರುವುದನ್ನೂ ಬಿನ್ನವಿಸಿವರು. ಬಳಿಕ ದಳವಾಯಿ ನಿರ್ಭೀತಿಯ ಸ್ವರದಲ್ಲಿಯೆ 'ಬಂದರೇನಾಯ್ತು, ನೀವು ನಿಮ್ಮಯ ದುರ್ಗಗಳನು ಎಚ್ಚರದಿಂದ ಕಾದಿರಿ!' ಎಂದು ಹೇಳಿಅವರನ್ನು ಬೀಳ್ಕೊಟ್ಟು, ತಾನು ಅರಮನೆಗೆ ನಡೆದ; ಅಲ್ಲಿ ಬಂದು ದಾದಿಯೊಬ್ಬಳನ್ನು ಬರಮಾಡಿಕೊಂಡು ಅವಳೊಂದಿಗೆ ರಾಜಕಾರ್ಯವಿದೆಯೆಂದು ದೊರೆಗೆ ಹೇಳಿಕಳುಹಿದ. ಆಗ :

> **" ಮಿರುಪ ರತ್ನದ ಶಾರದಾಮಂಟಪದೊಳು**
> **ವರಹಂಸತೂಳ ತಲ್ಪದಲಿ,**
> **ತರುಣಿರನ್ನೆಯರ ವಿದ್ಯಾವಿನೋದದೊಳಿಹ**
> **ಧರಣೀಶನ ಕಂಡಳವಳು ".**

ಕಂಡು ಮೈಸೂರಿನ ದೊರೆಗಳ ಮಹತಿಯನ್ನು ಕೊಂಡಾಡುತ್ತಲೆ ಖಾನನು ದಂಡೆತ್ತಿಬಂದ ವರ್ತಮಾನವನ್ನು ದಾದಿ ದೊರೆಗೆ ಬಿನ್ನವಿಸುವಳು. ಆಗ ದೊರೆ '**ಓಲಗದ ಅಬಲೆಯರನ್ನೆಲ್ಲ ಬೀಳ್ಕೊಟ್ಟು, ಚಿಕ್ಕೊಳಿಗದವರನ್ನು ಒಡಗೂಡಿ, ಲೀಲೆಯಿಂದ ರತ್ನ ಡಾಳಿಪ ಓಲಗದ ಚಾವಡಿಗೆ ಐದಿದ**'. ಅಲ್ಲಿ ಹಲವು ಜನ ಮನ್ನೆಯ–ಮಂಡಲಿಕರು ಸೇರಿ ಸಭೆ ನಡೆಯಿತು. ಸಭೆಯಲ್ಲಿ ದೊರೆಯು 'ಬಂದನೆ ಖಾನ....ಮುಂದೈದುವುದನರಿಯದೆ ನಮ್ಮನು ಕೆಣಕಿದನು' ಎಂದು ಗರ್ಜಿಸಿ :

**" ಪಟ್ಟಣ ಮೊದಲಾದ ಗಡಿಯ ದುರ್ಗಂಗಳ-**
**ಗೊಟ್ಟಿಸಿ ಸಂವರಣೆಗಳ**
**ಕಟ್ಟಿಚ್ಚರೊಳಿರಿಸೆಂದು ನಂಜೇಂದ್ರಗೆ**
**ಸೃಷ್ಟೀಶ್ವರ ನೇಮಿಸಿದ ".***

## ೪. ಕನ್ನಡಿಗರ ಸಮರಜೀವನ ಚಿತ್ರ

ಇತ್ತ ರಣಧೂಳಿಖಾನನು ತನ್ನ ಫೌಜಿನೊಂದಿಗೆ—ಶ್ರೀರಂಗ ಪಟ್ಟಣಕ್ಕೆ ಮುತ್ತಿಗೆ ಹಾಕಬೇಕೆಂದು ಬಂದು ಊರ ಉತ್ತರ ದಿಕ್ಕಿನಲ್ಲಿ ಪಾಳೆಯಬಿಟ್ಟ. ಆಗ ಎಲ್ಲಿ ನೋಡಿದರೂ ' **ಗುಡಿ-ಗೂಡಾರ, ಹಯ ಮುಹಮ್ಮದೀಯರ ಶಾಲೆ** ' ಗಳೂ ' **ಗಜಗೇಹ** ' ಗಳೂ ' **ನಾನಾವಾದ್ಯದ ಪಾಳೆಯ ಬಲುಘುಲ್ಲಣೆಯೂ** ' ತುಂಬಿಬಿಟ್ಟಿದ್ದುವು. ಇಡುವ **ಪೆಟಲು**, ಮೇಲಕೇಳುವ **ಬಾಣ**, ಸಿಂಗಾಡಿಯ **ಅಂಬು** ಇವೆಲ್ಲ ನೋಡುವವರಲ್ಲಿ ಹೆದರಿಕೆ ಹುಟ್ಟಿಸುತ್ತಿದ್ದುವು. ನಿಟಿಲಾಕ್ಷನ ಕಣ್ಗಿಚ್ಚಿನ ಕಿಡಿಗಳ ಆರ್ಭಟೆಯಂತೆ ' **ಶತಘ್ನಿ** ' ಗಳ ಗುಂಡುಗಳು ಮೇಲಕ್ಕೆ ಪುಟಿಯುತ್ತಿದ್ದುವು. ಇಡುವ **ತುಬಾಕಿಯ** ಗುಂಡುಗಳು ಸಂಜೆಯ ತಾರಗೆ ಮೂಡಿ ಭೂಮಿಗೆ ಸಿಡಿದು ಬರುವಂತೆ ತೋರಿದುವು. ಬಿಡುವ ಬಾಣಗಳಿಂದ ಆಕಾಶ ಹೆಣಿಕೆಗೊಂಡಂತಾಯಿತು.

ಅದರಂತೆ ' ಊರೊಳಗಿನ ಪಟುಭಟರ ಪೆಟಲಗುಂಡು, ಭೋರನೈತಹ ಬಾಣಗಳು ' ಇವು ಹೊರಪಾಳೆಯದ ಮುಂದಿಯನೆಲ್ಲ ಗೋರುಗೊಳಿಸಿದುವು. ಈ ಸಮಯದಲ್ಲಿ ಕಂಠೀರವ ನರಸರಾಜನು ' **ತುರುಕರ** ಬಲವನ್ನು ' ನೋಡಲಿಕ್ಕೆಂದು ಬಂದ, ಹೇಗೆಂದರೆ :

**" ಬಿರುದಿನ ಡೋಳು ಡಮಾಮಿ ನಾನಾವಾದ್ಯ-**
**ದುರುಘೋಷಣೆ ದೆಸೆದೆಸೆಯ**
**ನೆರೆತೀವೆ, ಮಕರ-ಟೆಕ್ಕೆಯದ ಸಾಲುಗಳಿಂದ**
**ಸಿರಿಧರನೊಲು ನಡೆತಂದ ".**

---

* ನಂಜರಾಜನು ಮಾಡಿಸಿದ ಕೋಟೆಕೊತ್ತಳಗಳ ಸಂವರಣೆಯ ವಿಷಯವೆಲ್ಲ ಇದೇ ಗ್ರಂಥದ ' ಕೋಟೆಗಾಳೆಗ ' ಎಂಬ ಪ್ರಬಂಧದಲ್ಲಿ ( ಪುಟ ೩೩ ) ಬಂದಿದೆ.

" ಎಡಬಲದೊಳು ಸಿಂಗರದಂಗನೆಯರು
ಪಿಡಿದು ಚಾಮರವ ಢಾಳಿಸಲು,
ಕುಡುವಿಲ್ಲ ಸಮರೂಪ ಕಂಠೀರವೇಂದ್ರ ಬಲ್‌.
ಪಡಗರದೊಳಗೈತಂದ ! "

**ಕಂಠೀರವ ನರಸ-ರಾಜನ ವೈರಿಸೈನ್ಯ ನಿರೀಕ್ಷಣೆ**

ಆಗ ಆ ದೊರೆಯೊಂದಿಗೆ ' **ಮುತ್ತಿನ ಸತ್ತಿಗೆ** ' ಇದ್ದಿತು. ' ತಳತಳಿಪ **ಆಲವಟ್ಟ**ಗಳು ' ಇದ್ದುವು. ' **ಚಿಂತಾಮಣಿ** ' ಎಂಬ ಹೆಸರಿನ ಪಲ್ಲಕ್ಕಿಯನ್ನೇರಿ ದೊರೆ ಕುಳಿತಿದ್ದನು. ' ನೊಸಲ ಕತ್ತುರಿಯ ತಿಲಕದ **ಮನ್ನೆ**ಯರುಗಳು ' ಎಡಬಲಗಳಲ್ಲಿ ಬರುತ್ತಿದ್ದರು. ' ಚಿನ್ನದ ಹರಡೆ ಬೆಳ್ಳಿಯ ಕಟ್ಟಿನ **ನೇಜೆಯದವರು** ( ಭರ್ಜಿಯ ಸೈನ್ಯ ) ' ಬೆಂಗಾಪಿನವರಾಗಿ ಬರುತ್ತಿದ್ದರು. **ಸಬಳದ ಆಳು**ಗಳ ನೆರವಿಯೂ ಜೊತೆಗೆ ಬರುತ್ತಿದ್ದಿತು. ಅಲ್ಲದೆ ತೀರ ಹತ್ತಿರ ಎಡಬಲಗಳಲ್ಲಿ ' **ಉಡೆಯ ಪಟ್ಟಿಯ ದಟ್ಟ ಚೆನ್ನ ಜಲ್ಲಿ ( ಬಿಲ್ಲು ) ಯ ವೀರರು** ' ಬರುತ್ತಿದ್ದರು. ಅವರ ಕಿವಿಗಳಲ್ಲಿ ' **ನಾಗರಪಣಿ** ' ಗಳಿದ್ದುವು ; ಕೊರಳಲ್ಲಿ ' **ಹೊಸಹೊನ್ನ ಸವಡಿದಾರ** ' ಗಳಿದ್ದುವು ; ಹಳದಿಬಣ್ಣದ ' **ತೋಳಪಾವಡೆ** ' ಗಳಿದ್ದುವು; ಹೀಲಿಯ ಜಲ್ಲಿ ( ನವಿಲುಗರಿಯನ್ನು ಕಟ್ಟಿದ ಬಿಲ್ಲು ) ಗಳಿದ್ದುವು. **ಊಳಿಗದವರು ಕರಗ, ಕಾಳಾಂಜಿ, ಹಡಪ, ಗಿಂಡಿ, ಚಮರ**ಗಳನ್ನು ಹಿಡಿದುಕೊಂಡು ನಡೆದಿದ್ದರು. ಬಿರುದುಗಳನ್ನು ಕೊಂಡಾಡುವ **ಪಾಠಕ**ರೂ ಇದ್ದರು. ಎಲ್ಲರನ್ನೂ ಕೂಡಿಕೊಂಡ ಕಂಠೀರವ ನರಸರಾಜ 'ಬಾಗಿಲ ಸೆಜ್ಜೆಯ (ಹೆಬ್ಬಾಗಿಲ ಗೋಪುರದ)' ಮೇಲೆ ರಂಜಿಸಿದ. ಖಾನನ ಸೈನ್ಯವನ್ನೆಲ್ಲ ವಿವರವಿವರವಾಗಿ ನೋಡುತ್ತ ' ಇವರು ಯಾರು ? ಇವರು ಯಾರು !' ಎಂದು ಒಬ್ಬೊಬ್ಬನನ್ನೂ ಕೇಳಿ ತಿಳಿದುಕೊಳ್ಳುವನು. ದಳಪತಿಯು ಎಲ್ಲ ವಿಷಯವನ್ನೂ ಹೇಳಿ ಕೊನೆಗೆ :

" ದೇವರ ಪರಿಯಂತೀಕಿವರಿಗೆ ನಿಮ್ಮ
ಸೇವಕ ಸಾಸಿರುತಿರಲು "

ಎಂದು ಹೇಳುವನು. ಅದರಂತೆಯೆ **ಹರದಪುರ, ಚೆನ್ನಪಟ್ಟಣ, ಸತ್ಯಾಗಾಲ, ಕೋಟೆ, ಚೆನ್ರಾಯಪಟ್ಟಣ, ತುರುಗೆರೆ, ಪಿರಿಯಪಟ್ಟಣ, ಮಳವಳ್ಳಿ, ನಾಗಮಂಗಲ, ಮೈಸೂರು** ಮೊದಲಾದ ನಾಡುಗಳ ಮನ್ನೆಯರೂ ಬಂಟನುಡಿಗಳನ್ನಾಡುವರು. ಆಗಲೆ ರಣಧೂಳಿಖಾನನಟ್ಟಿದ ಚರರು ಅಲ್ಲಿಗೆ ಬರುವರು.

**"ಬಿಡದೆ ನಿಮ್ಮೊಳು ಸ್ನೇಹವೆರಸಿ ಕಪ್ಪವ ಕೊಂಡು**
**ಒಡನೆ ನಿಮ್ಮಯ ಬಲಸಹಿತ**
**ನಡೆವೆವು ದಿಗ್ವಿಜಯಕೆ ಮುಂದೀಗ ನ-**
**ಮ್ಮೊಡೆಯನಾಡಿದನೀ ಮಾತ"**

ಎಂದು ಹೇಳುವರು. ಆಗ ಮುಗುಳುನಗೆ ನಗುತ್ತ ಕಂಠೀರವ ನರಸರಾಜನು ಖಾನನ ದೂತರಿಗೆ ಹೀಗೆ ಹೇಳುವನು :

**"ಕಪ್ಪವ ಕೊಡೆವು ; ತಮ್ಮೊಳು ಸ್ನೇಹಕೆ ನಾವು**
**ಬಪ್ಪವರಲ್ಲ; ಮುಂದೆಮ್ಮ**
**ದರ್ಪವ ನೋಡಲು ಕದನಕೆ ಬರಹೇಳು**
**ತಪ್ಪದೆ ತಳತಂತ್ರ ಸಹಿತ!"**

ಇಷ್ಟೇ ಅಲ್ಲದೆ "ನಮ್ಮನ್ನೇನು ಸುತ್ತಣ ಬಡದೊರೆಗಳಂತೆ ಮಾಡಿದನೆ? ಆಯಿತು ಮುತ್ತಿಗೆ ಇಕ್ಕಿದ್ದಾನೆ; ಇನ್ನೇನು! ತನ್ನ ಪೌರುಷ ಬತ್ತಿ ಹೋಗುವುದನ್ನು ನಿಮ್ಮ ಖಾನ ತಾನೆ ನೋಡುತ್ತಾನೆ; ಹೋಗು!" ಎಂದು ಹೇಳಿದ. ಬಳಿಕ ಪದ್ಧತಿಯಂತೆ ಖಾನನ ಭಟರಿಗೆ **ಉಡುಗೊರೆ**ಯನ್ನು ಕೊಡಿಸಿ ಕಳುಹಿಸಿ, ಅರಮನೆಗೆ ಮರಳಿ ಬಂದ. ವೈರಿಗಳೆಂದು ಗೊತ್ತಾದರೂ ಉಡುಗೊರೆ ಕೊಡುವ ಪದ್ಧತಿಯೆಂತಹದೋ ಅಂದಿನದು!

ಕಂಠೀರವ ನರಸರಾಜನ ಕಡೆಗೆ ಅಟ್ಟಿದ ದೂತರು ಮರಳಿ ಬಂದು, ಖಾನನಿಗೆ ತಾವು ಕಂಡ ಆ ದೊರೆಯ ದೊಡ್ಡಿತೆಯನ್ನು ಬಿನ್ನವಿಸುವರು.

**ರಣಧೂಳಿಖಾನನ ಮುತ್ತಿಗೆ**

ಅದನ್ನು ಕೇಳಿದ ಖಾನನು ಕೋಪದಿಂದಲೆ ಅವರೆಲ್ಲರನ್ನು ಬೀಳ್ಕೊಟ್ಟು, ತನ್ನ '**ಮಿಸುನಿಯ ಗೂಡಾರಕೆ**' ಬರುವನು. ಬಳಿಕ '**ತನ್ನ ಆಪ್ತಖಾನರುಗಳ ಕರೆಸಿ, ಆಲೋಚನೆ ಗೈದು, ಪುರವನೊತ್ತರಿಸಿ ಮುತ್ತಿಗೆಯಿಕ್ಕಿ ಸೆಳೆವುದು ಪಿರಿದಹ ಕಾರ್ಯವಿದು**' ಎಂದು ಹೇಳಿದ. ಆಗ ಹೊತ್ತುಮುಳುಗಲು '**ಖಾನ-ಖಾನರುಗಳೋಲಗದಲಿ ಸುರುಚಿರ ದೀವಟಿಗೆಗಳು ಮೆರೆದುವು**'. ಮರುದಿನ ನೋಡುತ್ತಿರುವಾಗ ಯುದ್ಧಸನ್ನದ್ಧರಾದ ಮೈಸೂರಿನ ದೊರೆಯನ್ನೂ ಸೈನಿಕರನ್ನೂ ಖಾನನು ನೋಡಿದನು. ಅದೊಂದು ಪ್ರಳಯ-**ಕಾಲ ಸಮಾಪಿಸಿದಂತಹ ನೋಟ :**

" ಕಾಲಾಳು, ಮೇಲಾಳು, ಒಂಟರಿಗಾರರ
ಜಾಲ, ಬಿರುದಿನ ನಾಯಕರ
ಸಾಲುಸಾಲಿಸೆದಿರೆ ಸಂವರ್ತರುದ್ರಾ-
ಭೀಳಪಂಚಾಸ್ಯಗಳಂತೆ! "

ಆಗ ಖಾನನಿಗೆ ಯಾರೋ ಹೇಳಿದರು : ' ಇಂತಹ ಭದ್ರವಾದ ಪಟ್ಟಣಕ್ಕೆ ದಾಳಿಯಿಡಬೇಕೆಂಬ ಹಟವೇಕೆ? ಸುಮ್ಮನೆ ಸಂಧಿ ಮಾಡಿಕೊಂಡರೆ ಆಗದೆ?' ಎಂದು. ಕೇಳಿದ ಖಾನನು ಕೋಪವ ತಾಳಿ ಗರ್ಜಿಸಿದ : **' ಕೋಟೆಯನ್ನು ಫಿರಂಗಿಯಲಿ ಇಡು! ಅಗಳ ಹೂಳು! ಮೇರುವೆಯ ಎಬ್ಬಿಸು! ತುಡುಕಿ ಲಗ್ಗೆಯನೇರು!** ' ಎಂದು ಮೊದಲಾಗಿ **' ವಜೀರಗೆ '** ಅಪ್ಪಣೆ ಮಾಡಿದ. ಅದರಂತೆಯೆ ಅವರೆಲ್ಲ ವರ್ತಿಸಿದರು ; ಕೋಟೆಗೆ ಲಗ್ಗೆಯಿಕ್ಕಿದರು. ಆಗ ಗಣನೆಯಿಲ್ಲದೆ ಖಾನರು ಲಗ್ಗೆಯಲ್ಲಿ ನೊಂದರು. ಅದನ್ನು ಕಂಡ ಖಾನನು ಕೋಪದಿಂದ **' ಕಣುಗಿಡಿಗೆದರೆ ಎಣಿಕೆಯಿನ್ನೇಕೆ ? ಪಟ್ಟಣ ಬಂಧಿಸಿ '** ಎಂದು ಕೂಗಿ ಹೇಳಿದ. ಸೈನಿಕರು ಒಡೆಯನ ಅಪ್ಪಣೆಯಂತೆ ಮುತ್ತಿಗೆ ಹಾಕಲು, ಮೈಸೂರಿನ ದೊರೆಯು ತನ್ನ ದಳವಾಯಿ ನಂಜೇಂದ್ರನನ್ನು ಕರೆಯಿಸಿ ನಿರೂಪಿಸಿದ :

" ಇಳೆಯ ಮನ್ನೆಯರ ಮಾರ್ಬಲವ
ತಳುವದೆ ಬರಸಿ, ಮಾರ್ಗವ ಕಟ್ಟಿ ತುರುಕರ
ಗಳಿಲನೆ ಮೂಗರಿಸೆಂದ ".

' ಮೂಗರಿಸು ' ಎಂದರೆ ಮೂಗುಕೊಯ್ಯು ಎಂದು. ಕಗ್ಗೊಲೆಯು ಕಾಳಗದಂತೆಯೆ ವೈರಿಸೈನ್ಯದ ಮೂಗುಕೊಯಿದು ಬಿಡುವುದೂ ಒಂದು ಮೂಗರಿಯುವ ಮೈಸೂರಪರ ಯುದ್ಧದ ವೈಶಿಷ್ಟ್ಯವೆಂದು ಕಾಣು ಯುದ್ಧದ ಮಾದರಿ ವುದು. ಒಡೆಯನ ಅಪ್ಪಣೆಯಂತೆಯೆ ದಳವಾಯಿ **' ತಳುವದೆ ಮಾರ್ಬಲ ಸಹಿತ ಗಡಿಯ ಮನ್ನೆಯರ ಕರೆಯಿಸಿ ಕಾರ್ಯದ ಅಳವಿಯ ಹೇಳಿದ '**. ದಳವಾಯಿಯ ಅಪ್ಪಣೆಯಾಗುವುದೇ ತಡ:

" ಅರಕೆರೆಯೊಳು ಬೀಡ ಬಿಟ್ಟಿರ್ದ ತುರುಕರ-
ನಿರುಳು ಕಗ್ಗೊಲೆಯೊಳು ಬಿದ್ದು,
ಎರಡು ಸಾಸಿರ ಮೂಗರಿದು ತಂದಾಕ್ಷಣ
ಪಿರಿದು ಸಾಹಸವ ಮಾಡಿದರು ".

ಚೆನ್ನಪಟ್ಟಣ, ಮದ್ದೂರು, ಯಾದವಾದ್ರಿ, ನಾಗಮಂಗಲ, ಚೆನರಾಯ ಪಟ್ಟಣ, ಕಿಕ್ಕೇರಿ, ಬೂಕನಕೆರೆ, ಮೈಸೂರು ಮೊದಲಾದ ಊರುಗಳ ಪಟು-ಭಟಕೋಟಿಯೆಲ್ಲ, ಬೇರೆ ಬೇರೆಯಾಗಿ ಮೇಲೆ ಬಿದ್ದು, ೧೨೦೦೦ ಜನ ತುರುಕರ ಮೂಗುಗಳನ್ನು ಕೊಯಿದರು. ಆ '**ಮೂಕೊರೆಯರು**' ಎಲ್ಲರೂ ವಿಜಯಪುರಕ್ಕೆ ಓಡಿಹೋಗಿ ವ್ಯಸನದಿಂದ '**ಪಾತ್ಶ್ಯಾವಿನಡಿಯೊಳು ನಿಂತು ಅಡ್ಡಬಿದ್ದರು**'. ಪಾತ್ಶ್ಯಾವು ಅವರನ್ನು ನೋಡಿ ವಿಸ್ಮಿತನಾಗಿ, ಅವರಿಗೆಲ್ಲ '**ಕೂಡುಂಬಳಿ** ( ಪೆನ್‌ಶನ್ )' ಇತ್ತು, ತನ್ನ ಪಟ್ಟಣದ ಒಂದು ಕೊನೆಯ ಭಾಗದಲ್ಲಿ ಮೂಕೊರೆಯರಿಗಾಗಿಯೆ ಒಂದು ಪ್ರತ್ಯೇಕ ಬೀದಿಯನ್ನು ಮಾಡಿಸಿದನಂತೆ. ದೇಶದೇಶಗಳ ಜನರು ಅವರನ್ನು ನೋಡಲಿಕ್ಕೆಂದು ಬಂದು, ಆಶ್ಚರ್ಯದಿಂದ ಬೆರಳು ಕಚ್ಚಿ, ತಮ್ಮೊಳಗೆಯೆ ಹೀಗೆ ಮಾತನಾಡಿಕೊಳ್ಳುತ್ತಲಿದ್ದರಂತೆ :

**“ ಹಿಂದಣ ಯುಗದಲಿ ದಶಮುಖನನುಜೆಯ**
**ಕುಂದದೆ ಕಿವಿಮೂಗನರಿದ**
**ಇಂದೀವರಾಕ್ಷನಿಂ ವೆಗ್ಗಳವಹ ಶೌರ್ಯ**
**ಹೊಂದಿತು ಮೈಸೂರ ನೃಪಗೆ ! ”**

ಏಕೆಂದರೆ

**“ ಆತನೊಬ್ಬಸುರೆಯ ಮೂಗ ಖಂಡಿಸಿದ ; ಮ-**
**ತ್ತೀತ ಹನ್ನೆರಡು ಸಾಸಿರದ**
**ಖ್ಯಾತಿಯ ನರರಕ್ಕಸರ ಮೂಗರಿದನೀ**
**ಭೂತಳೇಶನಿಗೆಣೆಯಾರು ? ”**

ನೋಡಿದವರೆಲ್ಲರಿಗೂ ಕನ್ನಡ ದೊರೆಯ ಕಾರ್ಯಕ್ಕಾಗಿ ತುಂಬ ಸಂತೋಷ. ಈ ವಾರ್ತೆ ದಿಲ್ಲಿಯ '**ಕೂರ್ಮಪಾತ್ಶ್ಯಾ**' ಎಗೂ ಆತನ '**ಹೇಜೀಬರ**' ಮುಖಾಂತರ ಗೊತ್ತಾಯಿತು. ಆಗವನು '**ಮೂಗಿನ ಮೇಲೆ ಬೆರಳಿಟ್ಟು ಅಚ್ಚರಿವಟ್ಟು ತಲೆಯ ತೂಗಿದ ; ಮೈಸೂರ ಭೂಗಧಿಪತಿಯ ಪೊಗಳಿದ**' ಹೇಗೆಂದರೆ :

**“ ಧರೆಯೊಳು ರಾಮರಾಜಗೆ ನೆರೆ ಮಣಿಯದ**
**ತುರುಕರ ಭಂಗಕೆ ತಂದ**
**ದುರಗಲಿ ಕಂಠೀರವ ರಾಜ ಲೋಕಕೆ**
**ನರನಾರಾಯಣನೆಂದ ”**

ಇಲ್ಲಿಯ 'ರಾಮರಾಜ' ಯಾರೆಂಬುದನ್ನು ಬೇರೆಯಾಗಿ ಹೇಳುವ ಕಾರಣವೇನೂ ಇಲ್ಲವಷ್ಟೆ? **ರಕ್ಕಸತಂಗಡಿಯ** ಯುದ್ಧದಲ್ಲಿ ಮುಹಮ್ಮದೀಯರಿಗೆ ಸೋತುಹೋದ ವಿಜಯನಗರದ **ರಾಮರಾಜನೇ** ಇವನು.

* * * *

ತನ್ನ ಸೋಲಿನ ಸುದ್ದಿ ದಿಲ್ಲಿಯ ಬಾದಶಹನಿಗೆ ತಿಳಿದುದನ್ನು ಕೇಳಿದ ವಿಜಯಪುರದ ಬಾದಶಹನು 'ಪಟ್ಟಣವ ಸೆಳೆಯ ಹೇಳೆಂದು' ದೂತರನ್ನು ಅಟ್ಟಿದ; ಅವರು ಬಾದಶಹನ ಕೋಪದ ವಿಷಯವನ್ನು ಹೇಳಲು ಖಾನನೂ ಕನಲಿದನು; ಆಗ

**" ಕುಡಿಮೀಸೆ ಕುಣಿದುವು; ತಾಮ್ರಾಕ್ಷಿಯೊಳಂ-**
**ದೊಡನೆ ಕಿಡಿಗಳುದುರಿದುವು.**
**ಕಡಿದು ಮುಂಗೈಯ ಕೋಪಾಟೋಪದಲಿ ಖಳ**
**ಜಡಿದು ಖಂಡೆಯವ ಚಿಮ್ಮಿದನು".**

ಮುಂದೆ ಹೊತ್ತುಮುಳುಗಿ ಕತ್ತಲಾಯಿತು. ಖಾನನು ತನ್ನ '**ತುರುಕ ವಜೀರ-ಖಾನರನು ಕರೆಯಿಸಿ**' ಕೋಟೆಗೆ ಲಗ್ಗೆಯಿಕ್ಕಲೆ ಬೇಕೆಂದು ಆದೇಶ ಮಾಡಿದನು. ಕೋಟೆಗಾಳೆಗಕ್ಕೆ ಆರಂಭವಾಯಿತು.*

## ೫. ಕಗ್ಗೊಲೆಯ ಕಾಳಗದ ಕಥೆ

ಕೋಟೆಯ ಲಗ್ಗೆಯಲ್ಲಿ ಮುಹಮ್ಮದೀಯರಿಗೆ ಸಂಪೂರ್ಣವಾಗಿ ಸೋಲು ಉಂಟಾಯಿತು. ಆಗ 'ಲಗ್ಗೆಗೇರಿದ ಖಾನಖಾನರು ದೆಸೆದೆಸೆಗೆ ಮುರಿದೋಡಿ'

**ಕೋಟೆಗಾಳಗದಲ್ಲಿ ಮುಹಮ್ಮದೀಯರಿಗೆ ಸೋಲು.**

ಶ್ರೀರಂಗಪಟ್ಟಣದಿಂದ ಅರ್ಧಗಾವುದದ ಮೇಲೆ ಬೀಡನ್ನು ಬಿಟ್ಟರು. ತಮ್ಮ ಬೀಡಿನ ಸುತ್ತಲೂ ಸತ್ತುಸತ್ತು ಬಿದ್ದ ಹೆಣಗಳನ್ನು ಎತ್ತಿಹಾಕಬೇಕೆಂಬ ಅರಿವು-ಅಳವುಗಳು ಕೂಡ ಮುಹಮ್ಮದೀಯರ ದಣಿದ ಸೈನ್ಯದಲ್ಲಿ ಉಳಿದಿರಲಿಲ್ಲ. ಅಂದಿನ ರಾತ್ರಿ ಕಳೆದು, ಬೆಳಗುಜಾವದ ಕತ್ತಲೆ ಭೂಮಿಯನ್ನು ಬಾಸಣಿಸಿರಲು, ವೈರಿಗಳ ಸೈನ್ಯವು ಮೌನವಾಗಿ

---

*** ಈ ವಿಷಯ ಇದೇ ಗ್ರಂಥದ 'ಕೋಟೆಗಾಳೆಗ' ಎಂಬ ಪ್ರಬಂಧದಲ್ಲಿ (ಪುಟ ೪೪ ರಿಂದ ೫೦ ರ ವರೆಗೆ) ವಿಶದವಾಗಿ ವರ್ಣಿತವಾಗಿದೆ.**

ಬಿದ್ದುಕೊಂಡಿದ್ದಿತು. ಆಗ ಕಂಠೀರವ ನರಸರಾಜನು 'ಬೇಹಿನ ಚರರುಗಳ ತುರುಕರ ಪಾಳೆಯಕೆ' ಕಳುಹಿ, ಅವರ ಸ್ಥಿತಿಗತಿಗಳನ್ನು ತಿಳಿದುಕೊಂಡನು. ಹೋಗಿಬಂದ ಚರರು 'ಇಂದೀಗ ತುರುಕರನು ಇರಿದೋಡಿಸುವ ವೇಳೆ' ಎಂದು ದಳಪತಿಗೆ ಬಿನ್ನವಿಸಿದರು. ಏಕೆಂದರೆ ತುರುಕರ ಸೈನ್ಯವನ್ನು ಚೆನ್ನಾಗಿ ಅವರು ನೋಡಿದ್ದರು : ಅವರಲ್ಲಿಯ ಕೆಲವರು ತುಂಬ ಗಾಯವಡೆದಿದ್ದರು. ಇನ್ನು ಕೆಲವರು ಸತ್ತವರಿಗಾಗಿಯೂ ಗಾಯಗೊಂಡವರಿಗಾಗಿಯೂ ಮರುಗುತ್ತ ಮುಂಗಾಣದೆ ಕುಳಿತಿದ್ದರು. ಮತ್ತೆ ಕೆಲವರು 'ಸುರೆಯ ಸೊಕ್ಕೇರಿ' ಮೈಮರೆತು ಹೋಗಿದ್ದರು. ಬಹಳ ಜನರು 'ಬೆಳಗುಜಾವದ ಬಲುನಿದ್ರೆಗೆ' ಮನವಿತ್ತಿದ್ದರು. ಈ ವರ್ತಮಾನವನ್ನು ಕೇಳಿದ ದಳಪತಿಯು ನರಸರಾಜನ ಬಳಿಗೆ ಬಂದು 'ಇದೇ ವೇಳೆ ಜೀಯ! ಕಗ್ಗೊಲೆಯ ಕಾಳೆಗದಲ್ಲಿ ಮದಮುಖಖಾನನ ಬಲವ ಸದೆದು ಎಬ್ಬಿಸಬೇಕು' ಎಂದು ಬಿನ್ನವಿಸಿಕೊಂಡ. ದೊರೆಯೂ ಒಪ್ಪಿ ಎಲ್ಲ ಸೈನ್ಯವನ್ನು ಸನ್ನಾಹಗೊಳಿಸೆಂದು ದಳಪತಿಗೆ ಹೇಳಿ, ತಾನೂ ತನ್ನ **'ಸಂಜೋಗ'**ಕ್ಕೆ ತೊಡಗಿದ.

**ಕನ್ನಡ ದೊರೆಯ ಯುದ್ಧಸಿದ್ಧತೆ**

ಅಂದಿನ ಕಾಲದ ದೊರೆಗಳು ಯುದ್ಧಕ್ಕೆ ಹೊರಡುವಾಗ ವೇಷಭೂಷಣಗಳನ್ನು ಹೇಗೆ ಹೇಗೆ ಮಾಡಿಕೊಳ್ಳುತ್ತಿದ್ದರೆಂಬುದನ್ನು 'ಕಗ್ಗೊಲೆಯ ಕಾಳೆಗಕೆ' ಹೊರಟ ಕಂಠೀರವ ನರಸರಾಜನ ಸಿದ್ಧತೆಯಿಂದ ತಿಳಿದುಕೊಳ್ಳಬಹುದಾಗಿದೆ. ಅವನು **'ಮುತ್ತಿನ ದಗಲೆ, ವಜ್ರದ ಜೋಡು'** ಮೈಗೆ ಏರಿಸಿದ ; ತಲೆಗೆ **'ಸೀಸಕ'** ವನ್ನು ಇರಿಸಿಕೊಂಡ; ಕೊರಳೊಳಗೆ **'ಪುಸ್ತಂಗ'** ಧರಿಸಿದ, ಕಾಲಿಗೆ ಬಿರುದಿನ **ತೊಡರ** ( ಸರಪಣಿ ) ನ್ನು ತೊಡಕಿಸಿಕೊಂಡ. ಉಟ್ಟುದು '**ಮಿಸುನಿಯ ದಟ್ಟಿ**'; ನಡುವಿನಲ್ಲಿ '**ರತ್ನದ** ( ಹಿಡಿಕೆಯ ) **ಬಾಕು**'; ಕೈಯಲ್ಲಿ **ಒರೆಯುನುಗಿದ ಖಡ್ಗ**. ಆತನ ಕುದುರೆಗಳು 'ಬಿರುದಿನ **ಪೊಂಬಾವಡೆ**' ಗಳಿಂದಲೂ, 'ಸೆಡಕಿನ **ವಲ್ಲಿ**' ಗಳಿಂದಲೂ, ಕೊರಳೊಳಗಿನ '**ಮುತ್ತಿನ ಜೂಳೆಯ**' ಗಳಿಂದಲೂ ಬೇರೆ ರತ್ನಭೂಷಣಗಳಿಂದಲೂ ಅಲಂಕೃತವಾಗಿ ಖುರವೆತ್ತಿ ಕುಣಿಯುತ್ತಿದ್ದುವು. ಅವುಗಳಲ್ಲಿಯದೊಂದು '**ರಾಜತೇಜಿ** 'ಯ ನಡರಿ '**ಖಂಡೆಯುವ ಚಿಮ್ಮಿಸುತ ಕಡು ತವಕದಿ ಕಂಠೀರವರಾಜೇಂದ್ರ ಘುರಮುಂಡಲಕೆ ನಡೆದ**'. **ನಂಜರಾಜ, ಲಿಂಗರಾಜ**ರು ದಳಪತಿಗಳಾಗಿರುವ ಎರಡು ಫೌಜುಗಳನ್ನು ತನ್ನ ಎಡಬಲದಲ್ಲಿ ಅಳವಡಿಸಿಕೊಂಡಿದ್ದ. ಮುಂದೆ '**ಇದೆ ಬಂದೆವು ಕಗ್ಗೊಲೆಗೆ; ಎಚ್ಚರಿನೊಳಗೆ ಇದಿರಾಗಿ**' ಎಂದು ಮೊದಲೆ ದೂತರನ್ನಟ್ಟಿ ಎಚ್ಚರಿಕೆ

ಕೊಟ್ಟು ಹೇಳಿ ಕಳುಹಿದ; ಕೂಡಲೆ ಮನ್ನೆಯರೆಲ್ಲ ಯುದ್ಧಕ್ಕೆ ಹೊರಟರು. ಕೊಂಬು, ಕಹಳೆ, ರಾಯಭೇರಿ, ಬುರುಗು, ಬೊಂಬುಳಿ ಮೊದಲಾದ ರಣ-ವಾದ್ಯಗಳು ಅಬ್ಬರಿಸತೊಡಗಿದುವು; ಇದರ ಜೊತೆಯಲ್ಲಿಯೆ ಸೈನಿಕರ ಕೋಲಾಹಲ.

"ಇರಿ, ಕಡಿ, ತರಿ, ಅರಿ, ಇಂದು ವೈರಿಗಳನೆಂ-
ದುರುಬಿ ಚೌದೆಸೆಯೊಳಗಂದು
ದುರಗಲಿ ಕಂಠೀರವೇಂದ್ರ ನಿಟ್ಟಿಸೆ ಭಟ-
ರುರುಬಿ ಮುತ್ತಿದರರಿಗಳನು!

**ಕಗ್ಗೊಲೆ ಕಾಳೆಗಕ್ಕೆ ಪ್ರಾರಂಭ**

ಆಗ ಖಾನನ ಸೈನ್ಯದಲ್ಲಿಯೂ ಚೈತನ್ಯವು ತಲೆದೋರಿತು. ಅವರೂ ಸಮರವನ್ನೆದುರಿಸಿ ನಿಂತರು, ಅಲ್ಲದೆ 'ನಮ್ಮ ಬಲ ಪುರದ ಲಗ್ಗೆಯಲ್ಲಿ ನೊಂದಿದೆಯೆಂದು ಉಬ್ಬಿನಿಂದ ನಮ್ಮ ಮೇಲೆ ಬಂದು ಬಿದ್ದಿರಾ? ಇದು ನೋಡಿ, ನಮ್ಮ ತಲೆ ಹೋದರೂ ಬರಿಯೆ ಅಟ್ಟೆಯಿಂದ ಯುದ್ಧಮಾಡುವ ವೀರ ತುರುಕರು ನಾವು!' ಎಂದು ಪೌರುಷದ ಮಾತುಗಳನ್ನಾಡತೊಡಗಿದರು. ಆಗ ಕನ್ನಡ ಬಂಟರು ಅವರಿಗೆಂದುದು ಹೀಗೆ:

"ಗಾಯಗಾಣಿಸೆ ಹಲ್ಲುಕಿರಿದು ಸಲಾಮೆಂದು
ಬಾಯಬಿಡುವ ಹಂದೆಗಳಿರ!
ದಾಯದ ಪಂಥವೆ ನಿಮಗೆ?... "

"ಮಂಡಲೇಶ್ವರ ನರಸೇಂದ್ರನ ಪಟ್ಟದ
ಶುಂಡಾಲಗಳ ಕೈಯ ಗುಣದ
ದಂಡಿಯ ನೋಡಿ! ...."

ಈ ಬಗೆಯ ಬಿಂಕದ ಮಾತುಗಳಿಂದ ಮೈಸೂರ ವೀರರ ದಂಡು ತುರುಕರನ್ನು ಮುತ್ತಿ ವಿಷಮಯುದ್ಧಕ್ಕೆ ತೊಡಗಿತು. ವಿವಿಧಾಯುಧಗಳ ಕಾಳೆಗ! ಭಲ್ಲೆಹದಿಂದ ಇರಿದು ಅಶ್ವದ ಗಡಣವ ಬೀಳಗೆಡಹಿದರು; ಖಡ್ಗದಿಂದ ರಾವುತರ ಕೊರಳ ಕಡಿದಿಟ್ಟರು. ಸುರಗಿಯ ಸುಭಟರು ಸೂಟಿಯಿಂದ ಐತಂದು, ತುರುಕರ ಉರವ ಇಬ್ಬಗೆ ಮಾಡಿ ಬಿಸಿರಕ್ತವ ಭೂತಕೆ ಚೆಲ್ಲಿದರು. ಚಿನ್ನದ ಹರಡೆಯ ಇಟ್ಟಿಗಳ ಊಳಿಗದವರು ಖಾನವಜೀರರ ಬಲವನು

ಬೆನ್ನಟ್ಟಿ ಬೀಳಲಿರಿದರು. ಹರಿಗೆ ( ಢಾಲು ) ಯ, ಗದೆಯ, ಸೇಜೆಯದ ಒಂಟಿರಿಂಗಾರರು ಉರವಣಿಸುವ ತುರುಕರನು ಇರಿದು, ಮುಗನರಿದು, ಸರಗಟ್ಟಿ ತಂದು ಸೈನ್ಯದಲ್ಲಿ ಮೆರಸಿದರು. ಬೆಳ್ಳಿಯ ಕಟ್ಟಿನ ಬಿಲ್ಲಿನ ವೀರರು, ಬಲ್ಲಿದ ಖಾನಖಾನರನು ಎಚ್ಚು ಗಾಯಗಳನು ಮಾಡಿ ತಲ್ಲಣಗೊಳಿಸಿದರು. ಈ ಕಲಿಗಳು ಕರೆವ ಬಾಣದ ಶಿಖಿ, ಪ್ರಳಯಾಗ್ನಿಯಂತೆ ಖಳರ ಬಲವನ್ನು ಒಳಹೊಕ್ಕಿತು. ಪಟುಭಟರು ಇಡುವ ತುಪಾಕಿಯ ಗುಂಡುಗಳು ಮಾರ್ಬಲವ ಕಂಗೆಡಿಸಿದುವು. ಸಿಂಗಾಡಿಯಂಬು ರಿಪುಗಳ ತಲೆಯನ್ನು ಸ್ವರ್ಗಕ್ಕೆ ಸಿಡಿದಾಡಿ ಸಿದುವು. ಅಲ್ಲದೆ ಮೈಸೂರಿನ ಮಹಾವೀರರು ಕೈಯಿಟ್ಟಿಗಳಿಂದ ಇಟ್ಟರು; ಜವದಾಡೆಯಿಂದ ಮೆಟ್ಟಿ ಇರಿದರು; ಕೈಯಲ್ಲಿಯ 'ಹರಿಗೆ' ಗಳನ್ನು ಖಂಡಿಸಿದರು. ಬೆನ್ನಬಳಿಯ 'ತರಕಸ ( ಬತ್ತಳಿಕೆ )' ಗಳನ್ನು ಪುಡಿಮಾಡಿ ದರು. ಸಿರದ **ಮುಂಡಾಸವ** ಸೀಳ್ದಿಕ್ಕಿದರು. **ದಗಲೆ** ( ಅಂಗಿ ) ಯ ಪರಿಪಾಟ ಮಾಡಿದರು.

ಆಗ ಮುಹಮ್ಮದೀಯರ ಸೈನ್ಯದಲ್ಲಿ 'ಖಂಡೆಯದ ಪೆಟ್ಟಲಿ ಸಾಯದವ ರಿಲ್ಲ ; ಬಾಕಿನಲಿ ಗಾಯವಡೆಯದವರಿಲ್ಲ '! ಯಾರನ್ನು ನೋಡಿದರೂ **ಸೋತುಹೋದ** 'ಸುರಟಿಯ ಕತ್ತಿ' ಗಳ ಹುಯ್ಲ ಧಾರೆಗೆ ಇಕ್ಕಡಿ **ಸೈನ್ಯದ ಚಿತ್ರ** ಯಾದವರು '! ಮತ್ತೆ ಯಾರನ್ನು ನೋಡಿದರೂ 'ಸೇಜೆಯದ ಗಾಯದೆ ನೊಂದ ಮಾರಣದವರು '!

**" ಉರುಳುವ ನರಳುವ ತೆರಳುವ ಹೊರಳುವ**
**ಬೆರಳ ಕಚ್ಚುವ ಬೇಡಿಕೊಳ್ವ**
**ಕರುಳು-ಕಾಳಿಜಗಳು ಸುರಿವ ಖಾನರುಗಳ**
**ನೆರವಿಯೊಪ್ಪಿತು ರಣದೊಳಗೆ ! "**

ಆಗ **ವಂದಿಗಳು 'ಭಲರೆ ಭಾಪುರೆ ಕಲಿಕಂಠೀರವೇಂದ್ರನ ಸಲೆ ಪಟ್ಟದಾನೆಗಳೆ !'** ಎನುತ ಕೈವಾರಿಸಿದರು ( ಹೊಗಳಿದರು ).

ಸೋತು ಹೋದ ತುರುಕರ ಸೈನ್ಯದ ವಾಸ್ತವಚಿತ್ರವನ್ನು ಕವಿ ತುಂಬ ಸರಸವಾಗಿ ತೆಗೆದಿದ್ದಾನೆ. ಓದಿದವರಾರೂ 'ಅಯ್ಯೋ !' ಎಂದು ಕಳವಳದ ಉದ್ಗಾರ ತೆಗೆಯಬೇಕು.

" ತೊರೆಯುತ, ಮೊರೆಯುತ, ಸುರಿಯುತ ರಕ್ತವ
ಕರಚರಣಗಳಾಡಿಸುತ,
ಅರಿವೆಣಗಳು ಲೆಕ್ಕವಿಲ್ಲದೆ ನೋಟಕ-
ಚ್ಚರಿಯ ಪುಟ್ಟಿಸುತೊಪ್ಪಿದುವು !"

* * *

" ಅರಿಗಚ್ಚಿದ ನಾಲಗೆ, ಕಡೆವಾಯೊಳು
ಸುರಿಜೊಲ್ಲು, ಬಿಟ್ಟ ಕಣ್ಣುಗಳ
ನೆರೆಕೆತ್ತುವಂಗುಳ, ಜೀವ ಬಿಡುವ ಹೆಣ
ಧರಣಿಯೊಳ್ ಮೆರೆದುವದ್ಭುತದೆ !"

* * *

" ಒಡೆದ ತಲೆಗಳಿಂದ, ಕಡಿದ ಕಾಲುಗಳಿಂದ,
ಬಿಡದೆ ತುಂಡಾದ ಕೈಯಿಂದ,
ಸಿಡಿದ ತೊಡೆಗಳಿಂದ, ನಿಡಿಗರುಳುಗಳಿಂದ
ಜಡಿದುದು ರಣಭೂಮಿಯಾಗ !"

ರಣಭೂಮಿಯಲ್ಲಿ ಎಲ್ಲಿ ನೋಡಿದರೂ ಕಡಿದ **ಹರಿಗೆ,** ಸೀಳಾದ **ಸಿಂಗಾಡಿ**ಗಳು, ಉಡಿದ **ಹಕ್ಕರಿಕೆ** ( ಕುದುರೆಯ ಜೀನು )–**ರೆಂಚೆ** (ಆನೆಯ ಸನ್ನಣ) ಗಳು, ಹರಿದುಹೋದ **ದಟ್ಟೆದಗಲೆ-ಜೋಡು**ಗಳು ಕಾಣುತ್ತಿದ್ದುವು. ಮುರಿದ **ಸತ್ತಿಗೆ**ಗಳೂ **ಹರಿದ ಟೆಕ್ಕೆಯ**ಗಳೂ, ಜೀವತೊರೆದ ಕರಿ-ತುರಗಗಳ ಸಾಲಿಕ್ಕಿದ ಮೆದೆಯೂ ರಣಭೂಮಿಯನ್ನು ತುಂಬಿದ್ದುವು. ಎಲ್ಲಿ ನೋಡಿದರೂ ಖಂಡಿಸಿದ ಭಲ್ಲೆಯ-ನೇಜೆಯಗಳಿದ್ದುವು; ಎತ್ತ ನೋಡಿದತ್ತ ತುಂಡಾದ **ಖಡುಗ–ಕುಂತ**ಗಳು ಬಿದ್ದಿದ್ದುವು. ಸಿಂತಲ್ಲಿಯೆ ದಿಂಡುದರಿದು ಕೆಡಹಿದ **ಸಾಲಕೊಲ್ಲಾರಬಂಡಿ**ಗಳು ಸಡೆಗೆಟ್ಟು ಹೋಗಿದ್ದುವು. ರಣ-ವಾದ್ಯಗಳಾದ **ನಪಿರಿ, ಬುರುಗು,** **ಡೋಳು, ಕೊಂಬಿನ ಕಾಳೆ** ಇವೆಲ್ಲ ಸೀಳಿ ಬಿಟ್ಟಿದ್ದುವು. ಒಡೆದು ಹೋದ **ಡಮಾಮಿ**ಗಳದೊಂದು ರಾಶಿಯೆ ಬಿದ್ದುಕೊಂಡಿದ್ದಿತು.

ಗುಂಪುಗುಂಪಾಗಿ ಬಂದ **ಬಲಿಭುಕ್ಕು** ( ಕಾಗೆ ) ಗಳು ' ಹೊಸ ಹೊಸ ಹೆಣದ ಆಲಿ ( ಕಣ್ಣು ) ಗಳನು ಚಂಚುಪುಟದಿಂದ ಮಿಸುಕಿ ( ಎತ್ತಿ ಎತ್ತಿ)' ಕುಟುಕುಗೊಳುತ್ತಿದ್ದುವು. **ಗೂಗೆ**ಗಳು ಜೋತಾಡುವ ಕೆಂಗರುಳು-

ಗಳನ್ನು ಕೊಕ್ಕಿನಿಂದ ಕಚ್ಚಿ ಎಳೆದಾಡುತ್ತಿದ್ದುವು. ನರಿಗಳು ಬಲುಮೆಯಿಂದ ನೆಣವನ್ನು ಎಳೆದೆಳೆದು ಖಂಡವ ಕಚ್ಚಿಕೊಳುತ ಮೇಲಕ್ಕೆ ಮೊಗವನ್ನು ನೆಗಹಿ ಭೀಕರವಾಗಿ ಕೂಗುತ್ತಿರುವುವು.

ಮುಹಮ್ಮದೀಯರ ಸೈನ್ಯದಲ್ಲಿ ಬಹುಜನರೆಲ್ಲ ಬಿದ್ದು ಹೋದರು. ಮುಖ್ಯ ಮುಖ್ಯ ಸರದಾರರ ಬಂಧು-ಬಾಂಧವರೂ ಆಪ್ತ-ಮಿತ್ರರೂ ಎಷ್ಟೋ ಜನ ಸತ್ತುಹೋದರು. ಯಾರೂ ಯಾರನ್ನೂ ಕೇಳದಂತಹ ಪರಿಸ್ಥಿತಿ ಬಂದು ಒದಗಿತು, ಆದುದರಿಂದಲೆ '**ವಾರುವ (ಕುದುರೆ) ಗಳು ಡಾವಣಿನೇಣ್ (ಕಣ್ಣಿ) ಗಳ ಬಲು ಬೀರುಗುಣಿಕೆಗಳ ಪರಿದು, ತಮ್ಮಿಚ್ಚೆಯೊಳಗೆ ಕೇರಿಕೇರಿಯೊಳು ತಾರುಮಾರಾಗಿ ಓಡಿದುವು**'. ಅದರಂತೆಯೆ '**ಮದಕರಿಗಳು ಕಟ್ಟಿದ ಮಲ್ಲಗಂಭವನು ಒದೆದು ಕೆಡಹಿಕೊಂಡು, ಬೆದರಿ ತಮ್ಮ ಇಚ್ಚೆಯೊಳಗೆ ದೆಸೆ-ದೆಸೆಗೆ ಐದಿ, ಹದಗೆಟ್ಟು ಓಡಿಯಾಡಿದುವು**'. ಜೀವವನ್ನು ಉಳಿಸಿಕೊಂಡು ಓಡಿಹೋಗಬೇಕೆಂಬ ತುರುಕರು ಕೆಲವರು, ತಾವೇನು ಮಾಡುತ್ತಿರುವೆವೆಂಬ ಎಚ್ಚರವಿಲ್ಲದೆ 'ಕುದುರೆಯ ಬಾಲಕೆ **ಕಡಿವಾಣವನಿಕ್ಕಿ**, ಮೇಲುಮೊಗಕೆ **ಹಲ್ಲಣ** (ಜೀನು) ವ ಕಟ್ಟಿ' ದೆಸೆದೆಸೆಗೆ ಓಡಿಹೋಗುತ್ತಿದ್ದರು. ಮತ್ತೆ ಕೆಲವರು, ಹಳ್ಳಿಗರು ಒಟ್ಟಿದ ಪುಲ್ಲ ಬಣಬೆಗಳಲ್ಲಿ ಅಡಗಿಕೊಂಡಿದ್ದರು. ಅವರು ಗಟ್ಟಿಯಾಗಿ ಉಸಿರನ್ನು ಕೂಡ ಬಿಡದೆ, ಯಾರಾದರೂ ಬಂದು ನೋಡಿ ಇಲ್ಲಿ ಏಕೆಂದು ಕೇಳಿದರೆ ಕೈಮುಗಿಯುತ್ತ ಹಲ್ಲುಕಿರಿಯುತ್ತಿದ್ದರು ಬೇರೆಯ ಕೆಲವು ಜನ ಬಂಟರು ತಮ್ಮ **ವೀರಕಂಕಣ**ಗಳನ್ನು ಮುರಿದಿಟ್ಟು, ಕೊರಳಲ್ಲಿಯ ಹಾರಾದಿಗಳನ್ನು ಹರಿದೊಗೆದು, **ಪೈರಣೆ**ಗಳನ್ನು ಸೀಳಿಹಾಯ್ಕಿ, ತಲೆಯನ್ನು ಕೆದರಿಕೊಂಡು ತಾರುತಟ್ಟಾಗಿ ಓಡಿಹೋದರು. ಕಾಳೆಗಕ್ಕೆ ಹೆದರಿದ ಕೆಲವರು ಹುತ್ತವನ್ನೇರಿ ನಿಂತರು; ಇನ್ನು ಕೆಲವರು ಹುಲ್ಲನ್ನು ಕಚ್ಚಿ ನಿಂತರು; ಎಷ್ಟೋ ಜನರು ಕತ್ತಿ-ಕಠಾರಿಯ ಬಿಸುಟಿ ಬೆತ್ತಲೆಯಾಗಿ ನೀರೊಳಗೆ ಹೋಗಿನಿಂತರು (ಇವೆಲ್ಲ ಶರಣಾಗತರ ಚೇಷ್ಟೆಗಳು). 'ಇದೊಂದು ಸಲ ನನ್ನನ್ನು ಬದುಕಿಸಿದೆಯಾದರೆ ನೀನೆ ನನಗೆ ಜನ್ಮವನ್ನು ಕೊಟ್ಟಂತಾಗುವುದು' ಎಂದು ಕಲಿಗಳ ಕಾಲಿಗೆ ಎರಗಿ ಬಿಡಿಸಿಕೊಂಬ **ಹಂದೆ**ಗಳೂ ಅಲ್ಲಿ ಲೆಕ್ಕವಿಲ್ಲದಷ್ಟು ಜನ ಇದ್ದರು.

**"ತುರಗವನುಳಿದು, ಖಂಡೆಯವ ಬಿಸುಟು, ನಮ್ಮ**
**ಕೊರಳ ಸಲಹಿಕೊಳ್ಳೆನುತ**
**ಕರವ ಮುಗಿದು ಕಲಿಗಳಿಗೆ ಬಿಡಿಸಿಕೊಂಬ**
**ತುರುಕರಾವುತರೊಪ್ಪಿದರು."**

ರಾವುತರಂತೆಯೆ ಮಾವುತರೂ **‘ಗುಳವನೀಡಾಡಿ, ಗಜಗಳ ಮಸ್ತಕದಿಂದ ಇಳಿದು (ವೈರಿಗಳಿಗೆ) ಒಪ್ಪಿಸಿಕೊಟ್ಟು (ಅವರ) ನಂಬುಗೆಗೊಂಡು’** ಸ್ವಲ್ಪವೂ ತಡಮಾಡದೆ ದಿಕ್ಕುದಿಕ್ಕಿಗೆ ಓಡಿಹೋದರು.

**“ಸಿಂಗನ ಕೂಡಣ ಕಲಹದೆ ಕರಿಗಳ**
**ಜಂಗುಳಿ ಜೀವಿಸಲಹುದೆ?**
**ತುಂಗವಿಕ್ರಮನ ಕೆಣಕಿ ತುರುಕರ ಬಲ**
**ಭಂಗಕ್ಕೆ ಬಂದುದೇನೆಂಬೆ!”**

ಆಗ ಆ ಕಗ್ಗೊಲೆಯ ಕಾಳೆಗದಲ್ಲಿ ಸೋತುಹೋದ ಮುಹಮ್ಮದೀಯರನ್ನು ಕಂಡು ಸಂತೋಷಹೊಂದಿದ **ಪಾಠಕರು ‘ಚಂಡವಿಕ್ರಮ! ತ್ರೈಲೋಕ್ಯದ ವೀರರ ಗಂಡ! ಜಯಾಂಗನಾರಮಣ! ಪುಂಡರೀಕಾಕ್ಷ ಸದೃಶ! ಜಯತು!’** ಎಂದು ಕೊಂಡಾಡಿದರು. ಕಂಠೀರವರಾಜನು **‘ಕಾಳೆಗವನು ಗೆದ್ದ ಮನ್ನೆಯ ಸುಭಟರಿಗೆ ಮೇಲಾದ ಒಡವೆ-ವಸ್ತುಗಳ** (ವೈರಿಗಳ ಸೈನ್ಯದಲ್ಲಿ ದೊರೆತುದರಲ್ಲಿ) **ಪಾಲಿಸಿ ಪುರವನೈದಿದನು’.** ಅತ್ತ ಸೋತು ಖಿನ್ನನಾದ ಖಾನನು ಅಳಿದುಳಿದ ತನ್ನ ಸೈನ್ಯವನ್ನು ತೆಗೆದುಕೊಂಡು **‘ನಾದಿಪ ವಾದ್ಯವ ನಿಲಿಸಿ, ತನ್ನಯ ಬಿರುದನು ಓದುವ ಭಟ್ಟರ ಜಡಿದು, ಮೌನದೀಕ್ಷೆಯ ಕೊಂಡು’** ತನ್ನ ಪುರಕೆ ಹಾದಿಯನ್ನು ತೆಗೆದ.”

ಇದು ೩೦೦ ವರ್ಷಗಳ ಹಿಂದಿನದೊಂದು ಕನ್ನಡಿಗರ **ಸಮರಜೀವನದ** ಚಿತ್ರ. ಚಾರಣಕವಿಯಾದ ಗೋವಿಂದವೈದ್ಯ ತನ್ನ ವೀರಕಾವ್ಯದ ನಾಯಕನಾದ ಕಂಠೀರವ ನರಸರಾಜನ ಹಲವು ವಿಜಯಗಳನ್ನು ಕುರಿತು ಬಣ್ಣಿಸಿದ್ದಾನೆ. ಅವೆಲ್ಲವುಗಳಲ್ಲಿಯ ಸಮರಜೀವನವನ್ನೂ ಕಲ್ಪನೆಗೆ ತಂದುಕೊಡಲಿಕ್ಕೆ, ಈಗ ತೋರಿಸಿರುವ ಈ ಶಬ್ದಚಿತ್ರವೊಂದು ಸಾಕಷ್ಟಿದೆಯೆಂದು ಹೇಳಬಹುದಾಗಿದೆ.

## ೬. ಜನಜೀವನ ವೈವಿಧ್ಯ

**ಮೊದಲು-ಮಾತುಗಳೆರಡು**

ಗೋವಿಂದವೈದ್ಯಕವಿಯ ಚಾರಣಕವಿತ್ವಕ್ಕೆ ಸಾಕ್ಷಿಯಾಗಿ, ಅವನು ಬಣ್ಣಿಸಿದ ಕನ್ನಡಿಗರ ಶೌರ್ಯಜೀವನವನ್ನು ಇದುವರೆಗೆ ವಿಶದವಾಗಿ ಹೇಳಿ ಆಯಿತು. ಇನ್ನು ಮೇಲೆ, ತನ್ನ ಕಾಲದ ಬೇರೆಬೇರೆ ಬಗೆಯ ಜನರ ಜೀವನವನ್ನು ಕವಿಯು ಕಂಡು, ಅವುಗಳನ್ನು ತನ್ನ ಮಾತಿನ ಮಾಲೆಯಲ್ಲಿ ಹೇಗೆ ಹೇಗೆ ಕೋದಿದ್ದಾನೆಯೆಂಬುದನ್ನು ಒಂದೊಂದಾಗಿ ಇಲ್ಲಿ ವಿವೇಚಿಸಬೇಕೆಂದು

ಇರುವೆನು. ಈ ವಿವೇಚನೆಯಿಂದ ಈಗ ೩೦೦ ವರ್ಷಗಳಿಗೆ ಹಿಂದೆ ನಮ್ಮ ಹಿರಿಯರಾಗಿದ್ದವರು ತಮ್ಮ ದಿನದ ಬಾಳಿನಲ್ಲಿ ಹೇಗೆ ಆಡುತ್ತಿದ್ದರು, ಹೇಗೆ ಕೂಡುತ್ತಿದ್ದರು, ಹೇಗೆ ಉಣ್ಣುತ್ತಿದ್ದರು; ಉಡುತ್ತಿದ್ದರೇನು, ತೊಡುತ್ತಿದ್ದರೇನು; ಅವರ ಮನೆ ಹೇಗೆ, ಅವರ ಮಾರು ಹೇಗೆ—ಇವೆಲ್ಲ ಮಾತುಗಳ ಕಲ್ಪನೆ ತಕ್ಕಮಟ್ಟಿಗೆ ಬರಬಹುದಾಗಿದೆ. ವೀರಜೀವನದಂತೆಯೆ ಅಂದಿನವರ ಶೃಂಗಾರಜೀವನವೇನೂ ಕಡಿಮೆಯಿರಲಿಲ್ಲ. ಕವಿಗೋವಿಂದವೈದ್ಯನು ಮಾಡಿದ ಅಂದಿನ ಶೃಂಗಾರಜೀವನದ ಬಣ್ಣನೆ ಇಂದಿನವರ ಸದಭಿರುಚಿಗೆ ಒಗ್ಗಲಾರದೆಂಬ ಭಾವನೆಯಿಂದ, ಈ ಬರೆಹದಲ್ಲಿ ಶೃಂಗಾರಜೀವನ ಪ್ರದರ್ಶನಕ್ಕೆ ಅವಕಾಶವನ್ನೆ ಕೊಟ್ಟಿಲ್ಲ. ಮೈಸೂರು-ಶ್ರೀರಂಗಪಟ್ಟಣಗಳ ವೇಶ್ಯಾವಾಟಿಕೆ (ಸೂಳೆಗೇರಿ) ಯ ಬಣ್ಣನೆಯೂ, ಈ ವೀರಕಾವ್ಯಕ್ಕೆ ಎಳೆದುತಂದು ತೇಪೆ ಹಚ್ಚಿದಂತಿರುವ '**ಮದನಮೋಹಿನೀ**' ಕಥೆಯೂ, ಅಂದಿನ ಕನ್ನಡಿಗರ ಶೃಂಗಾರಜೀವನದಲ್ಲಿಯ ಸೂಕ್ಷ್ಮಾತಿಸೂಕ್ಷ್ಮ ಕುಸುರುಗಳನ್ನೂ ಚಿತ್ರಿಸಿ ತೋರಿಸುತ್ತಿರುವುವು. ಬೇಕಾದವರು ಮೂಲವನ್ನೆ ಓದಿನೋಡಿಕೊಳ್ಳಬಹುದು. ಸರಿ, ಈಗ ಪ್ರಸ್ತುತವಿಷಯವನ್ನು ಕುರಿತು ವಿಚಾರ ಮಾಡೋಣ!

**ಹೊಳೆಯ ತೀರದ ಸ್ವಾಭಾವಿಕ ಚಿತ್ರ**

ನಮ್ಮ ಜನಸಾಮಾನ್ಯರ ಜೀವನವು ಊರ ಜನರೆಲ್ಲ ನೀರುತರುವ ಹೊಳೆ-ಹಳ್ಳ-ಕೆರೆ-ತೊರೆಗಳ ದಂಡೆಯ ಮೇಲೆ, ಒಂದು ವಿಶಿಷ್ಟವಾದ ರೀತಿಯಲ್ಲಿ ಒಡಮೂಡಿ ನಿಂತಿರುವುದು. ಈಗ ಕೂಡ ಯಾವುದೇ ಒಂದೂ ಊರಿನ ಜನರೆಲ್ಲರ ನಡೆ-ನುಡಿಯ ಸಾಮಾನ್ಯ ಪರಿಚಯವನ್ನು ಒಮ್ಮೆಲೆ ಮಾಡಿಕೊಳ್ಳಬೇಕಾದರೆ, ನೀರಹೊಳೆಯ ತಡಿಯಲ್ಲಿಯೆ ಹೋಗಿ ನಿಂತುಕೊಳ್ಳಬೇಕು; ಈ ಮಾತಿನ ಸತ್ಯತೆಯ ಅನುಭವ ಅನೇಕ ಜನರಿಗೆ ಬಂದಿರಬಹುದು. ಗೋವಿಂದವೈದ್ಯನು ಚಿತ್ರಿಸಿದ **ಕಾವೇರಿ**ಯ ಸಹಜ ಶಬ್ದಚಿತ್ರದಲ್ಲಿಯೂ, ಅಂದಿನ ಜನಸಾಮಾನ್ಯರ ಆಚಾರ-ವಿಚಾರಗಳನ್ನು ನಾವು ಸಹಜವಾಗಿ ಗುರುತಿಸಬಹುದಾಗಿದೆ; ಹೇಗೆಂಬುದನ್ನು ನೋಡಿ:

"ನದಿಯ ಉಭಯ ತಟಗಳೂ ಸ್ನಾನ, ಸಂಧ್ಯಾವಂದನೆ, ಜಪ, ತಪ ಇವುಗಳನ್ನೆಲ್ಲ ಮೌನದೆ ಮಾಡುವ ಜ್ಞಾನಾಧಿಕರಿಂದ ಪರಿಶೋಭಿಸುತ್ತಿದ್ದುವು. 'ಚಾರುವಸನ ಪೊಂಬಟ್ಟೆ, ಬಿಳಿಯ ವಸ್ತ್ರ, ಸಾರಪೊಪ್ಪಳಿ ಮೊದಲಾದ ಸೀರೆ ಸಹಿತ' ಸ್ನಾನವನ್ನು ಮಾಡುವ ಬ್ರಾಹ್ಮಣಸ್ತ್ರೀಯರು ಇತ್ತಟ.

ಗಳಲ್ಲಿಯೂ ಕಾಣುತ್ತಿದ್ದರು. ಅವರಲ್ಲಿಯ ಕೆಲವು ಚೆಲುವೆಯರು ಸ್ನಾನಮಾಡಿ 'ಕುಂಕುಮಗಳ ಪಣೆಗೆ ಇಡುವರು'. ಬೇರೆ ಕೆಲವರು 'ಹರಿದ್ರುದ ಪಂಕ (ಅರಿಸಿಣದ ಕಲ್ಕ) ವ' ಮೈಗೆ ಲೇಪಿಸುತ್ತಿದ್ದರು. ಅಲ್ಲಲ್ಲಿ ಅನೇಕ ಜನ ಐದೆಯರು, ಕಳಸಗಳನ್ನಿಕ್ಕಿ ಅರಿಸಿಣ, ಕುಂಕುಮ, ಗಂಧಾಕ್ಷತೆ, ಫಲ, ಪುಷ್ಪ, ತಾಂಬೂಲ ಮೊದಲಾದ ಪೂಜಾದ್ರವ್ಯಗಳಿಂದ ಕಾವೇರಿಯನ್ನು ಪೂಜಿಸುತ್ತಿದ್ದರು. ಎಷ್ಟೋ ಕಡೆಗಳಲ್ಲಿ ಅಂಗನೆಯರು '**ಕಚೆಗಳ ಸಿಕ್ಕ (ಕೂದಲಿನ ತೊಡಕು) ಬಿಡಿಸುತ ಎಣೆಗಂಟಿಕ್ಕಿ, ಕುಚಮಧ್ಯದಲಿ ಹಾರವಿಡುತ, ವಿಚಲಿತ ನೇತ್ರಗಳಿಗೆ ಕಜ್ಜಲ (ಕಾಡಿಗೆ) ವನ್ನು ರಚಿಸುತ**'ಒಪ್ಪುತ್ತಿದ್ದರು. ಬ್ರಾಹ್ಮಣರ ಹುಡುಗಿಯರನೇಕರು ಹೊನ್ನತಂಬಿಗೆ, ಗಿಂಡಿ, ಪನ್ನೀರ ಚೆಂಬು ಇವುಗಳಲ್ಲಿ ನೀರನ್ನು ತುಂಬಿಕೊಂಡು, ಸುಸಜ್ಜಿತರಾಗಿ ಮನೆಗೆ ಹೊರಟಿದ್ದರು."

"ಆ ನದಿಯ ತಟದಲ್ಲಿ **ಶಿವಭಕ್ತರ** ಮೇಳವೂ ಕಂಗೊಳಿಸುತ್ತಿತ್ತು. ಅವರೆಲ್ಲ ಲಿಂಗಕ್ಕೆ ನೀರೆರೆದು ಅಂಗಕ್ಕೆ ವಿಭೂತಿಯನ್ನು ಲೇಪಿಸಿಕೊಳ್ಳು-ತ್ತಿದ್ದರು. **ಹರಿದಾಸರಿಗೇನು** ಸ್ನಾನಬೇಡವೇ? ಅವರು ಬಂದು '**ಹರಿವ ಜಲದೊಳಾಗ ಹರಿದು ಮಜ್ಜನವನು ಮಾಡಿ, ತಿರುನಾಮ–ತಿರುಚೂರ್ಣಗಳ ಪಣೆಯೊಳಗಿಟ್ಟು**' ಮರಳಿ ಮರಳಿ ಹರಿಯನ್ನು ಧ್ಯಾನಿಸುತ್ತಿದ್ದರು. ಅಲ್ಲದೆ ಆ ನದಿಯ ಮಧ್ಯದಲ್ಲಿಯೂ ಇಕ್ಕಡೆಯ ತಡಿಗಳಲ್ಲಿಯೂ ಅನೇಕ ಮಂಟಪಗಳಿದ್ದು, ಅವು ಶ್ರೀಹರಿಯ ಉತ್ಸವಕ್ಕೆ ಎಡೆಯಾಗಿರುವುವು."

"ಕಾವೇರಿಯು ಪುರ (ಶ್ರೀರಂಗ ಪಟ್ಟಣ) ವನ್ನು ಬಳಸಿ ಯಾವಾಗಲೂ ಭೋರ್ಗರೆಯುತ್ತಿರುವುದರಿಂದ 'ಆ ಪರಿಪೂರ್ಣ ಜಲದೊಳಗೆ ನಾವೆಯಲಿ ಜನವ ದಾಟಿಪ **ಜಲಗಾರರು**' ಅಲ್ಲಿ ಸಾಕಷ್ಟು ಜನರಿದ್ದರು. ಧರ್ಮವೆ ಒಂದು ಮಾರ್ಗವಾಗಿ ನಿಂತಿರುವುದೇನೋ ಎಂಬಂತೆ 'ಉಭಯ ಕಾವೇರಿಯ ಬಿಗಿದು ಒಪ್ಪುತಿಹ **ಸೇತುವೆ**' ಝುಗಝುಗನೆ ಹೊಳೆಯುತ್ತಿದ್ದಿತು.

ಕಾವೇರಿಯ ವಕ್ಷದ ಚಾರುಹಾರವೆಂಬಂತೆ ಅನೇಕ ಪರಿಕಾಲುವೆಗಳು ಊರನ್ನು ಬಳಸಿಕೊಂಡು ಹರಿಯುತ್ತಿರುವುವು. ಹೊಳೆಯ ದಂಡೆಯ ಬತ್ತದ ಗದ್ದೆಗಳಲ್ಲಿ '**ಮುಗುಳುಹೊಡೆ, ಅರೆಹೊಡೆ, ಮೇಲಕ್ಕೆ ನಿಗುರುವ ಹೊಡೆ, ಪಸುರ್ವೊಡೆ, ಹಾಲುದುಂಬುದೆನೆ**'

**ಬತ್ತದ ಹೊಲಗಳು**

ಇವೆಲ್ಲವುಗಳಿಂದ ಕೂಡಿದ ಬತ್ತದ ಬೆಳೆಗಳಿದ್ದುವು. ಈ ಬತ್ತಗಳಲ್ಲಿ ಅನೇಕ ಜಾತಿಯವುಗಳಿದ್ದುವು; ಅವಾವುವೆಂದರೆ :—

ಕಣಿವೆಯ ಸಣ್ಣ, ಸತ್ಯಾಗಾಲದ ಸಣ್ಣ, ಗೋವೆಯ ಸಣ್ಣ, ಪುಣಗು ವಾಸನೆಯನಾಂತಿಹ ಸಣ್ಣ, ಪಿರಿಯ ರಾಜಾನ್ನ, ಜೀರಿಗೆ ರಾಜಾನ್ನ, ಸೊಗಸು ರಾಜಾನ್ನ, ಕಸ್ತೂರಿರಾಜಾನ್ನ, ಸೋಮಶಾಲಿ, ಬಿಳುಮಲ್ಲಿಗೆ, ಕೆಂಬೂತಿ, ಹೇಮವರ್ಣದ ಕೊನೆವಾಳಿ, ಪುಷ್ಪಮಂಜರಿ, ಕೊಡಗು, ಮಳಲಕಂತೆ, ಹರಹಿನ ಡುಣ್ಣಗ, ಬೈರಾವಳಿ, ಚಂದ್ರೋದಯ, ಕೆಂದಳಗ, ಕಸ್ತೂರಿವರ್ಣ ಇತ್ಯಾದಿ.

ಆ ಕಾಲದಲ್ಲಿ ರೂಢವಾಗಿದ್ದ ಬತ್ತದ ಜಾತಿಯ ಹೆಸರುಗಳು ಈ ಕಾಲ ದಲ್ಲಿ ಎಷ್ಟೆಷ್ಟು ಉಳಿದುಕೊಂಡಿವೆಯೆಂಬುದಿದು ಪರಿಶೀಲಿಸಬೇಕಾದ ವಿಷಯ.

ಆ ಕಾಲದ ತೋಟಗಳಲ್ಲಿ ಅಡಕೆ, ಕೆಂದೆಂಗು, ಇಮ್ಮಾವು, ನೇರಿಲು, ದಾಳಿಂಬ, ಹೆರೀಳೆ, ಕಿತ್ತೀಳೆ, ಜಂಬೀರ (ಲಿಂಬಿ) ಮೊದಲಾದ ಫಲವೃಕ್ಷ

**ಹೊಳೆಯ ತಡಿಯ** ಗಳಿರುತ್ತಿದ್ದುವು. ವೈದ್ಯರ ಮನೆತನದಲ್ಲಿ ಹುಟ್ಟಿರುವ

**ತೋಟಗಳು** ಕವಿ, **ಜಂಬೀರ** (ಲಿಂಬೆ) ದ ಉಪಯುಕ್ತತೆಯನ್ನು ಹೀಗೆ ಬಣ್ಣಿಸಿರುವನು :

“ ಮಿಸುನಿಯ ಬಣ್ಣಕೆ, ನಾನಾಬಗೆಯ ವಟ-
ಕಸುಭೈಷಜ್ಯಕೆ, ನರರ
ರಸನೆಯ ಸವಿಗೆ ನಾವೆಂದಾಗ ಫಲ ಸಹಿ-
ತೆಸೆವ ಜಂಬೀರಗಳಿಹುವು!”

ತೋಟಗಳಲ್ಲಿ ‘ ಸವಿರಸ ಪುದುಗಿದ ಫಲಸಹಿತವಾದ’ ಹಲಸಿನ ಮರ ಗಳೂ ಇದ್ದುವು. ರಸವಾಳೆ, ಪುಟವಾಳೆ, ರಾಜವಾಳೆ, ಸಕ್ಕರೆವಾಳೆ, ದೇವಾಳೆ ಕಬ್ಬಾಳೆ, ಪಚ್ಚೆಬಾಳೆ, ನಾಡಬಾಳೆ, ಮಧುರಂಗಬಾಳೆ ಮೊದಲಾದ ನಾನಾ ಜಾತಿಯ ಬಾಳೆಯ ಬನಗಳೂ ಅಲ್ಲಿ ಇದ್ದುವು. ಅಲ್ಲದೆ ಪದುಮ, ಮಲ್ಲಿಗೆ, ಸಂಪಗೆ, ಸುರಗಿ, ಸುರಹೊನ್ನೆ, ಮೊಲ್ಲೆ, ಬೆಳ್ದಾಳೆಯರಲು (ಕೇದಗಿ) ಜಾಜಿ, ಕೆಂಜಾಜಿ, ಸೇವಂತಿ, ಪಾರಿಜಾತ, ನಂದ್ಯಾವರ್ತ, ಜಾಲ, ಪಾದರಿ, ಬಕುಳ, ಸುಕರಾಜ ಮೊದಲಾದ ಹೂಗಳೂ ಅಲ್ಲಿ ಬೇಕಾದಷ್ಟು ಇದ್ದುವು. ಮರಗು, ಕಸ್ತುರಿಮರಗು, ಮುಡಿವಾಳ ಬೇರುಗಳೂ ಅಲ್ಲಿ ಬೆಳೆದಿರುವುವು. ಈ ತೋಟ ಗಳಲ್ಲಿ ತಿರುಗಾಡುವುದಕ್ಕಾಗಿ ‘ ಪುರವನಿತೆಯರು ತಮ್ಮ ಇನಿಯರ ಕರ ವಿಡಿದು ’ ಐತರುತ್ತಿರುವರು. ಅವರ ವಿಶ್ರಾಂತಿಗಾಗಿಯೂ ಆಟಕ್ಕಾಗಿಯೂ

ಆ ವನಗಳಲ್ಲಿ **ತಳಿರ್ವನೆಗಳೂ, ಪುಷ್ಪಮಂಟಪಗಳೂ, ಪುಳಿನಸ್ಥಳಗಳೂ** ಇರುವುವು. ಅಲ್ಲಿ ನಲ್ಲ-ನಲ್ಲೆಯರು ಹೋಗಿ 'ನಳಿನಾಸ್ತ್ರನ ಆಹವಗೈದು' ಮರಳಿ ಮನೆಗೆ ತೆರಳುತ್ತಿರುವರು.

ಗೋವಿಂದವೈದ್ಯನು ಶ್ರೀರಂಗಪಟ್ಟಣದ ನಿವಾಸಿಯಾಗಿಯೆ ಇರಬಹುದು. ಶ್ರೀರಂಗಪಟ್ಟಣವು ಅಂದು ಕನ್ನಡಿಗರ ರಾಜಧಾನಿಯಾಗಿದ್ದಿತು ; ಆದುದರಿಂದಲೆ ಅದು ಕನ್ನಡಸಂಸ್ಕೃತಿಯ ಕೇಂದ್ರವಾಗಿದ್ದಿತು.

**ಶ್ರೀರಂಗಪಟ್ಟಣದ ಸಹಜಚಿತ್ರ**

**ಕಂ. ನ. ವಿಜಯ** ಕಾವ್ಯದಲ್ಲಿ ಶ್ರೀರಂಗಪಟ್ಟಣದ ವರ್ಣನೆಯು ವಿಶದವಾಗಿ ಬಂದಿದೆ. ಕವಿಯ ಕಾಲದ ಐತಿಹಾಸಿಕ ಪಟ್ಟಣದ ವರ್ಣನೆಯೆ ಆದಾದುದರಿಂದ ಅತಿಶಯೋಕ್ತಿಗೆ ಅದರಲ್ಲಿ ಎಡೆಯೆ ಇಲ್ಲವೆಂದು ಹೇಳಬಹುದು. ನಗರದಲ್ಲಿಯ **'ಮೌಕ್ತಿಕ-ಬೀದಿ' 'ನೀಲಬೀದಿ' 'ಹವಳ ಬೀದಿ'** ಮೊದಲಾದ ಮುಖ್ಯಮುಖ್ಯ ಬೀದಿಗಳಲ್ಲಿ 'ಬೆಳ್ಗೊಡೆಗಳ ಸಡಗರದಂತೆ **ಸಾಲಸೆಜ್ಜೆ**ಗಳು ಕಡು ಚೆಲುವಿಕೆಯ' ಬೀರುತ್ತಿದ್ದುವು. 'ಚಿನ್ನದ ಕಲಶಗಳಿಂದ **ಸಾಲುಪ್ಪರಿಗೆ**ಗಳು' ಒಪ್ಪುತ್ತಿದ್ದುವು. 'ಹರ್ಮ್ಯಾಗ್ರದೊಳಗೆಲ್ಲ **ಟೆಕ್ಕೆಯ**ಗಳು' ಮೆರೆಯುತ್ತಿದ್ದುವು. 'ಮನೆ ಮನೆಗಳೊಳು ಮಂಗಳರತ್ನಮಯವಾದ ವಿನುತ **ತೋರಣ**ಗಳು' ಒಪ್ಪುತ್ತಿದ್ದುವು. 'ಶುಭ್ರನವಸುಧಾರಸಲಿಪ್ತ (ಸುಣ್ಣವನ್ನು ಲೇಪಿಸಿದ) **ಮಾಳಿಗೆ**ಗಳು ಹೊಳೆಯುತ್ತಿದ್ದುವು.

ಬ್ರಾಹ್ಮಣರ ಬೀದಿಯಲ್ಲಿ 'ಆರುಶಾಸ್ತ್ರ ನಾಲ್ಕು ವೇದ ಪುರಾಣದ ಸಾರದ ಅರ್ಥವ ನಿರ್ಣಯಿಸಿ ತೋರಿ ವಾಚಿಸುವ **ಬ್ರಾಹ್ಮಣರು**' ಇರುತ್ತಿದ್ದರು. ಅಲ್ಲಿಯೆ ಕವಿಗಳೂ ಮನೆಮಾಡಿಕೊಂಡು

**ಬ್ರಾಹ್ಮಣರ ಬೀದಿ**

ಇದ್ದರು. ಅವರೆಲ್ಲ 'ಲಕ್ಷ್ಯ-ಲಕ್ಷಣ-ಪದ-ಕ್ರಮದಿಂದ ಕ್ಷಣದಲ್ಲಿ ಈಕ್ಷಿಸಿ ಕಾವ್ಯ-ನಾಟಕವ ಅಣಿಯರಿತು (ರಹಸ್ಯವನ್ನು ತಿಳಿದು) ಉಸಿರುವವರು'. **ಮಂತ್ರಿ**ಗಳ ಗೃಹಗಳೂ ಅಲ್ಲಿಯೆ ಇದ್ದುವು. ಅವರು ತಮ್ಮ ಮಂತ್ರಬುದ್ಧಿಯಿಂದ ಮೇರು-ಹಿಮಾಚಲಗಳೆರಡನ್ನೂ ಕ್ರಮವರಿತು ಒಂದುಗೂಡಿಸುವ ಸಾಮರ್ಥ್ಯವುಳ್ಳವರು. **ಕರಣಿಕ** (ಕಾರಕೂನ) ರ ಕುಲವೂ ಬ್ರಾಹ್ಮಣರ ಬೀದಿಯಲ್ಲಿಯೆ ಇರಬೇಕಲ್ಲವೆ? ಏಕೆಂದರೆ ಆ ಕಾಲದಲ್ಲಿ ಕರಣಿಕರಾಗಿರುವವರೆಲ್ಲ ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವರೆ ಇರುತ್ತಿದ್ದರು. ಅವರು ತಮ್ಮ ಲೆಕ್ಕದ ನೈಪುಣ್ಯದ ಮೂಲಕ ಚಿತ್ರಗುಪ್ತರ ಲೆಕ್ಕವನ್ನು ಕೂಡ ಟಿಕ್ಕರಿಗಳೆ (ಬೀಳುಗಳೆ)-

ಯುವವರು; ಯಾವುದಾದರೂ ಕಾಗದ-ಪತ್ರವನ್ನು ಓದಬೇಕಾದರೆ 'ಉಳಿಯಲಿ (ಚುರುಕಿನಿಂದ)' ವಾಚಿಸುವವರು. 'ದೊರೆಗಳು ಮನದಲಿ ನೆನೆದ ಜಾತ್ಯುತ್ತರದಿರವ ತಿಳಿದು' ನಿಮಿಷದಲ್ಲಿ ಬರೆದು ಓದುವ **ವಿದ್ವಾಂಸರ** ಮನೆಗಳೂ ಅಲ್ಲಿ ಇದ್ದುವು. ಈಗಿನ ಕಾಲದಲ್ಲಿ ಪ್ರಜಾಹಿತದಕ್ಷರೆಂದು ಹೆಸರುವಾಸಿಯನ್ನು ಪಡೆದಿರುವ ದೇಶಭಕ್ತರು ಕೇಳಿ ವಿಸ್ಮಿತರಾಗುವಂತಹ ಜನರದೊಂದು ವರ್ಗವೂ ಆಗ ಅಲ್ಲಿ ವಾಸಿಸುತ್ತಿತ್ತು. ಅವರ ಕಾರ್ಯವೇನೆಂದರೆ **"ಭುವನದ ಬಡವರ ಬಿನ್ನಹವನು ತಂದು ಅವನೀಶ್ವರರಿಗೆ ಪೇಳಿ, ತವಕದೆ ಕಾಣಿಸಿ, (ಅವರ) ಇಷ್ಟಾರ್ಥಗೊಡಿಸುತಿರ್ಪುದು'.** ಆ ನಗರದಲ್ಲಿ **ವೈದ್ಯರ** ಮನೆಗಳೂ ಸಾಕಷ್ಟಿದ್ದುವು. ಆ ವೈದ್ಯರೆಂದರೆ ಅಂತಿಂತಹ 'ಕುಂಟಗಾಲಿಗೆ ಕುಂಠಿಬೆಲ್ಲ'ದ ವೈದ್ಯರಲ್ಲ. **"ಸಕಲ ರುಜೆ (ರೋಗ) ಯ ಕೆಡಿಪ ಔಷಧಿಗಳನು ಇತ್ತು, ಸರ್ವಜನಕ್ಕೆ ಸುಖವ ಪುಟ್ಟಿಸಿ, ಅಕಳಂಕರೆನಿಸಿ ಮೆರೆವ ಘನವೈದ್ಯರು'.** ಆ ಬೀದಿಯು ಬೇರೆ ಬೇರೆ ಕೇರಿಗಳಲ್ಲಿ **ಗಾಯಕ**ರಿದ್ದರು; **ನಟ-ನಾಯಕ**ರಿದ್ದರು; **ಪರಿಹಾಸಕ**ರಿದ್ದರು; 'ಧೀಯುಕ್ತರಹ' **ವಿನೋದಿ**-ಗಳಿದ್ದರು (ವಿನೋದಿಗಳು ಬೇರೆ ಪರಿಹಾಸಕರು ಬೇರೆ!). ಬೀದಿ ಬೀದಿಗಳಲ್ಲಿಯೂ ನಡೆದ ಮಂಗಳೋತ್ಸವಗಳಿಗಾಗಿಯೂ ಶುಭ-ಶೋಭನಗಳಿಗಾಗಿಯೂ 'ಒಲಿದು ಪಾಡುತ ಚರಿಪ ಪುರಂಧ್ರಿಯರಿಂದ ಪೊಳಲು ಅತಿ ಸೊಬಗಿನಲಿ' ಒಪ್ಪುತ್ತಿದ್ದಿತು. ಬ್ರಾಹ್ಮಣರ ಬೀದಿಯಲ್ಲಿ ತಿರುಗಾಡುವ ಜನರ ಘ್ರಾಣೇಂದ್ರಿಯವನ್ನು '**ಅಗ್ನಿಹೋತ್ರ**ದ ಆಜ್ಯಾಹುತಿಗಳ ಕಂಪು. ಪರಿಪರಿಯ **ಕಜ್ಜಾಯ**ಗಳ ಪರಿಮಳದಿಂಪು' ಆಕರ್ಷಿಸಿಕೊಳ್ಳುತ್ತಲಿರುವುವು.

ನಗರದ ಒಂದೆಡೆಯಲ್ಲಿ **ಹರದರ** (ವರ್ತಕರ) ಮನೆಗಳಿರುವುವು. ಇವರು ಮೋಸವನ್ನು ಮಾಡದೆ ಧರ್ಮಮಾರ್ಗದಿಂದ ನಾನಾಬಗೆಯ ವಸ್ತುಗಳನ್ನು 'ಕರೆಕರೆದು ಕ್ರಯಕೆ ಈಯುವರು'.

**ಊರಲ್ಲಿಯ ಬೇರೆ-ಬೇರೆ ಬೀದಿಗಳು.**

ಆ ನಗರದಲ್ಲಿಯ **ಒಕ್ಕಲಿಗರ ಕೇರಿ**ಯಲ್ಲಿರುವವರೆಲ್ಲ ಬರಿಯೆ ಸೋಂಬೇರಿಗಳಾಗಿ ವೇಳೆಗಳೆಯುವವರಲ್ಲ; 'ಅಕ್ಕರೊಳಗೆ ಬಹುಬಗೆಯ ಧಾನ್ಯಗಳನ್ನು ಚೊಕ್ಕಟವಾಗಿಯೆ ಬೆಳೆದು, ಎಕ್ಕತುಳದೆ (ಒಗ್ಗಟ್ಟಿನಿಂದ) ಧರ್ಮಮಾರ್ಗದೆ ರಾಜಿಸುವವರು'. **ಶಿವಭಕ್ತ** (ವೀರಶೈವ)ರದೊಂದು ಕೇರಿಯೂ ಅಲ್ಲಿ ಇದ್ದಿತು. ಇವರು 'ಕ್ಷುದ್ಬಾಧೆಯೊಳು ಐತಹ **ಚರಲಿಂಗ**ನಿವಹವ ಕರೆದೊಯ್ದು ತವಕದೆ ಮೃಷ್ಟಾನ್ನವಿತ್ತು' ತಣಿಸುವವರು.

**ಗಂದಿಗರು, ಬೋಗಾರರು, ತಿಲಗಾತಕ** ( ಗಾಣಿಗ )**ರು, ತಾಮ್ರ-ಮರ್ದಕರು, ಮಲ್ಲರು, ಜಾಲಗಾರರು** ಮೊದಲಾದ ಜಾತಿಯವರೂ ಅಲ್ಲಿ ವಾಸಿಸುತ್ತಿದ್ದರು. **ಚಿತ್ರಿಗರ**ದೊಂದು ಕೇರಿಯಿದ್ದಿತು; ಅದರಂತೆಯೆ 'ನಾನಾಬಗೆಯ ದುಗುಲವ ವಿರಚಿಸುವ **ಸೇಲಿಗರ**' ಕೇರಿಗಳೂ; 'ಸಿರತಾಳಿ, ಜೋಡು, ಪೈರಣಿಗಳ ಹೊಲಿಗೆಯ ಗರುವ **ಚಿಪ್ಪಿಗರ**' ಕೇರಿಗಳೂ ಇದ್ದುವು. **ತಾಳಧಾರಿಗರು, ಮದ್ದಳಿಗರು, ನಾಗಸರ-ಮೌರಿಯ ಆಳಾಪಿಗರು, ನಟುವಿಗರು, ಜೋಗಿಗರು, ಮುಚ್ಚಿಗರು** ಇವರೆಲ್ಲರ ಮನೆಗಳು ಸಾಲು-ಸಾಲಾಗಿ ಒಪ್ಪುತ್ತಿದ್ದುವು. ಅರಮನೆಯ ಪರಿಚಾರಕತನಕ್ಕೆ ಬೇಕಾಗುವ **ದೀವಟಿಗರು, ಕಟ್ಟಿಗೆಯವರು, ರಾವುತರು, ಮಾವುತರು** ಮೊದಲಾದವರ ಮನೆಗಳೂ ಆ ಪಟ್ಟಣದಲ್ಲಿ ತುಂಬಿರುವುವು. 'ಬತ್ತೀಸಾಯುಧಗಳ **ಸುಭಟ**ರ ಬೆಡಗಿನ ನಿಕರವೂ' ಅಲ್ಲಿ ಒಪ್ಪುತ್ತಿರುವುದು. ಯುದ್ಧಗಳಲ್ಲಿ ಮಾರ್ಬಲವನ್ನು ಒಬ್ಬರೆ ಎದುರಿಸಿ 'ಒಂಟಂಗದಲಿ ಮುರಿಯಿರಿದು' ಸೋಲಿಸಿಬಿಡುವ 'ಒಂಟಿರಿಗಾರ ನಾಯಕರ' ಮನೆಗಳೂ ಅಲ್ಲಿ ಇದ್ದುವು.

"**ಕಟ್ವಾಣಿ ಮುತ್ತಿನ ಚೌಕುಳಿ, ಕೊರಳೊಳ-**
ಗಿಟ್ಟ ಪದಕ, ಚಂದ್ರಹಾರ;
ತೊಟ್ಟ ದುಗುಲದ ಸ್ಪೈರಣೆಯೊಳಿಗದವರ
**ಕಟ್ಟಿ**ಪಕದ **ಕೇರಿ**ಯಿಹುವು!"

ಒಂದೆ ಮಾತಿನಲ್ಲಿ ಹೇಳಬೇಕೆಂದರೆ ಆ ನಗರದಲ್ಲಿ **ಶೂರ**ರಿದ್ದರು; **ನೀತಿವಿಹಾರ**ರಿದ್ದರು; **ಸದ್ಗುಣಗಣ**ಸಾರರಿದ್ದರು; **ಸಕಲಕಲಾವಿದ**ರಿದ್ದರು; **ಸರ್ವಜ್ಞ**ರಿದ್ದರು.

**ಶ್ರೀರಂಗಪಟ್ಟಣದ ಅಂಗಡಿಬೀದಿ**

ಶ್ರೀರಂಗಪಟ್ಟಣದ **ಅಂಗಡಿಗೇರಿ**ಯನ್ನೂ ಕವಿ ಇದ್ದುದಿದ್ದಂತೆ ಬಣ್ಣಿಸಿ ಹೇಳಿದ್ದಾನೆ. ಅಂಗಡಿಗೇರಿಯಲ್ಲಿ '**ರವಿ-ಶಶಿಬೀದಿ**'ಗಳ ರಚನೆಯಿರುವುದೊಂದು ಪ್ರಾಚೀನ ನಗರರಚನಾಶಾಸ್ತ್ರದ ನಿಯಮವೇ ಆಗಿದೆ. ಪೇಟೆಯ ಒಂದು ಬದಿಯಲ್ಲಿ '**ಚಿನ್ನವರದರ ಮಳಿಗೆ**'ಗಳು ಇದ್ದುವು. ಅಲ್ಲಿಯ ಚಿನ್ನವರದರು 'ಹರ-ಸಖ (ಕುಬೇರ)' ನು ನವನಿಧಿಗಳನು ಈ ಪುರದೊಳಗೆ ಇರಿಸಿದನೆಂಬಂದದಲಿ ಪಿರಿದೆನಿಸುವ ಹೊನ್ನರಾಶಿಗಳಲಿ' ಪರಿಶೋಭಿಸುತ್ತಿರುವರು. ಇನ್ನೊಂದೆಡೆಯಲ್ಲಿದ್ದ **ಮುತ್ತಿನ ಮಳಿಗೆ**ಗಳಲ್ಲಿ ಬಿಳಿಮುತ್ತು, **ಕೆನ್ನೀ**ರ ಮುತ್ತು, **ಕಟ್ವಾಣಿ**ತೋರದ ಮುತ್ತು ಮೊದಲಾದ **ಜಾತಿ**ಮುತ್ತು-

ಗಳಿರುವುವು. **ಪವಳದ ಪಸರ**ಗಳಲ್ಲಿ ಸಣ್ಣ ಪವಳ, ಕೈಕಟ್ಟಿನ ಪವಳ, ಬಣ್ಣ ಸರದ ಜಾತಿಪವಳ ಇವೆಲ್ಲ 'ಕಣ್ಣಕೊಕ್ಕರಿಸುತ' ಒಪ್ಪುತ್ತಿರುವುವು. ಸಾಲುಗೊಂಡು ಎಸೆಯುತ್ತಿರುವ ಹಲವು **ಪಸರದಂಗಡಿ**ಗಳಲ್ಲಿ ನೀಲದ ಸರ, ಮಾಣಿಕದ ಕುಚ್ಚು, ವಜ್ರದ ಮೇಲುಗೊಂಚಲು, ವೈಡೂರ್ಯ ಇವೆಲ್ಲ ಡಾಳಿಸುತ್ತಿರುವುವು. ಇನ್ನೊಂದೆಡೆಯಲ್ಲಿರುವ **ಕಂಚುಗಾರರ ಪಸರ**ಗಳಲ್ಲಿ 'ಮಿಂಚುವ ಪರಿವಾಣ ಚೆಂಬು-ಗಿಂಡಿಗಳೂ; ಸಾಲಂಚಿನ ಮಜ್ಜನಸಾಲೆ(?), ಪಂಚಾರತಿ, ಗಂಟೆಗಳೂ' ತುಂಬಿರುವುವು. **ಜವುಳಿಯ ಮಳಿಗೆ**ಗಳಲ್ಲಿ 'ಪಟ್ಟೆಯ ಸುರುಳು, ಸೂರಿಯ ಪುಟ, ಹೊಸಹೊನ್ನ ದಟ್ಟಿ, ಬಿಳಿಯ ದುಕೂಲ' ಇವು ದಿಟ್ಟಿಗಚ್ಚರಿಯಾಗಿ ಕಾಣುತ್ತಿರುವುವು; ಇಷ್ಟೆ ಅಲ್ಲದೆ ಆ ಮಳಿಗೆಗಳಲ್ಲಿ 'ಹಳದಿ, ಪೊಪ್ಪಳಿ, ಚಂದ್ರಗಾವಿ, ಬೊಂಬೆಯ ಬಣ್ಣ, ಸುಲಿಪಲ್ಲು, ಹೊನ್ನತಗಡಿನ ಬಿಳುವಟ್ಟೆ' ಮೊದಲಾದ ನಾನಾವರ್ಣದ ಜವುಳಿ ಅಂದವಡೆದಿರುವುದು.

**"ಕರೆದರಾ ಎನುತಾಗ ಸಿರಿದೇವಿ ಆ ಪುರ-**
**ದರಸಿನ ಮಂದಿರದೊಳಗೆ**
**ಸ್ಥಿರವಾಗಿ ನೆಲಸಿಹಳಂಗಡಿಗೇರಿಯ**
**ಪಿರಿದುಭಾಗ್ಯವನೇನನೆಂಬೆ !"**

ಪೇಟೆಗೆ ಬರುವ ಹಳ್ಳಿಪಳ್ಳಿಗರಿಗೆ ನೀರುಹನಿಸುವುದಕ್ಕೆಂದು 'ಶಶಿ-ರವಿ ಬೀದಿಯ ಸಾಲಸೆಜ್ಜೆಗಳ ಬಾಗಿಲಲಿ, ನೀಲಕುಟ್ಟಿಮದ **ಅರವಟ್ಟಿಗೆ**ಗಳು' ಇದ್ದುವು. ಅಲ್ಲಿ ಬಾಲೆಯರು ನೀರೆರೆಯುತ್ತಿರುವರು. ಅವರನ್ನು ಸಮೀಪಿಸಿಯೇ **ಬೆಳ್ಳಿಲೆ**ಗಳನ್ನು ಮಾರುವ ನೀಲಾಳಕಿಯರೂ; 'ಕತ್ತುರಿ, ಸೇವಂತಿಗೆ ದುಂಡುಮಲ್ಲಿಗೆ, ಜಾಜಿ, ಸಂಪಿಗೆ' ಮೊದಲಾದ ಹೂಗಳನ್ನು **ಮಾಲೆಗಟ್ಟಿ ಮಾರುವ ಹೆಂಗುಸರೂ** ಕುಳಿತಿರುವರು. ಇನ್ನೊಂದೆಡೆಯಲ್ಲಿ 'ಪುಣುಗು, ಕಸ್ತೂರಿ, ಕುಂಕುಮ, ಸಿರಿಗಂಧ' ಗಳನ್ನೆಲ್ಲ 'ಮಣಿವಟ್ಟಲೊಳು ಹದಮಾಡಿ ಕ್ಷಣದೊಳು ಕ್ರಯಕೀವ **ಗಟ್ಟಿವಳ್ತಿ**ಯರ ಸಂದಣಿ' ಮೆರೆಯುತ್ತಿರುವುದು. ಈ ಬೀದಿಗೆ ಹತ್ತಿರವಾಗಿಯೆ '**ಸೂಳೆಗೇರಿ**' ಇರುವುದು. ಈ ಸೂಳೆಗೇರಿಯ ಸಾಲಭವನದ ಮಳಿಗೆಗಳೊಳಗೆ ಗಿಳಿಯ ಪಂಜರ, ಪಾರಿವಾಳಗಳ ಪೊಂಗೂಡು, ಕಳಕಂಠ-ಕೇಕಿಯ ದೀಹ ಇವೆಲ್ಲ ರಾಜಿಸುತ್ತಿರುವುವು. ಅನೇಕ ಜನ **ಸೊಗಸುಗಾರರು** ಸಿಂಗರಿಸಿಕೊಂಡು, ತಗರು-ಸಿಪಲೆ-ಕೋಳಿಗಳ ಕಾಳೆಗದ ನೆಪದಿಂದಲೂ, ಪಗಡೆ-ಜೂಜುಗಳಾಟದ ನೆಪದಿಂದಲೂ

ಯಾವಾಗಲೂ ತಿರುಗಾಡುತ್ತಿರುವರು (**ಇಲ್ಲಿ ಸೂಳೆಗೇರಿಯ ವರ್ಣನೆ ತುಂಬ ವಿಸ್ತಾರವಾಗಿದ್ದು, ಉತ್ತಾನವೆನಿಸಬಹುದಾದರೂ ಶೃಂಗಾರದ ವಾಸ್ತವಚಿತ್ರದಿಂದ ಕೂಡಿದೆ**).

**ಅರಮನೆಗೆ ಹೋಗುವ ದಾರಿ; ಅರಸುಮಕ್ಕಳ ಆಟ-ಪಾಟ.**

. ಪಟ್ಟಣವನ್ನೆಲ್ಲ ಬೆರಳಿಟ್ಟು ತೋರಿಸಿದ ಕವಿ ವಾಚಕರನ್ನು ಅರಮನೆಯ ಕಡೆಗೆ ಕರೆದುಕೊಂಡು ಬರುತ್ತಾನೆ. ಹಾದಿಯಲ್ಲೆಲ್ಲ '**ಇತ್ತೆರದಲ್ಲಿಯೂ ಸಾಲುಗೊಂಡು, ಸುತ್ತಣ (ಬೇರೆ ಬೇರೆ ನಾಡುಗಳ) ದೊರೆ-ಮನ್ನೆಯರುಗಳ ಉಪ್ಪರಿಗೆಗಳು**' ಕಂಗಳಿಗೆ ಕೌತುಕವನ್ನು ಈಯುತ್ತಲಿರುವುವು. ಈ ರಾಜಗೇಹಗಳ ಮುತ್ತಿನ ತೋರಣದ ಬಾಗಿಲಿದಿರಲ್ಲಿ 'ಬಿತ್ತರವಹ **ನವಿಲುಯ್ಯಾಲೆ**'ಗಳು ಇದ್ದುವು. ಇಲ್ಲಿಯ ರಾಜಕುಮಾರರನೇಕರು 'ತೇಜಿಗಳನು ಕುಣಿಸುವರು; ಕಲಭ (ಆನೆಮರಿ) ವನು ಮಾಜದೆ ಬೀದಿವರಿಸುವರು'. ಕೆಲವು ಜನ ರಾಜಪುತ್ರರು '**ತಗರ** (ಟಗರಿನ) ತಲೆಗೆ **ಜಂಬೀರ** (ಲಿಂಬೆ) ದ ಪುಳಿಯಿಟ್ಟು ಮಿಗೆ **ನಸೆ**ಯೇರಿಸಿ, ನಗುತ ಜಗಳವ ಕಾದಿಸುತ್ತಿಹರು'. ಮತ್ತೆ ಕೆಲವರು '**ಕುಕ್ಕುಟ**ಗಳ (ಕೋಳಿಗಳ) ಕಾಲ್ಗೆ **ಚೀಲಾಯುಧ**ವಿಕ್ಕಿ, ಸೊಕ್ಕುಮದ್ದಿನ (ನಸೆಯೇರುವ) ಗುಟುಕಿತ್ತು, ಉಕ್ಕಂದ (ಉತ್ಸಾಹ) ದೆ ಕಾದಿಸುತ್ತಿಹರು'. ಬೇರೆಯು ಕೆಲವರು ಸಿಪಲೆ, ಗೌಜಲ ಹಕ್ಕಿಗಳ ಕಾಳೆಗವನ್ನಾಡಿಸುತ್ತಿರುವರು; ಚಾತಿಯ ಹುಂಜಗಳ ಕಾಲುಗಳಿಗೆ **ಗಗ್ಗರ**ವನ್ನು ಹಾಕಿ ಕಾಳೆಗಕ್ಕೆ ಬಿಡುತ್ತಿರುವರು. ಅಲ್ಲದೆ 'ಧೂಳಿಯ ನೆಲದೊಳು **ಕೇಳಿಯ ಚೌಕ** (ಆಟದ ಕಳ)ವ ಮಾಡಿ, ಗೂಳಿಗೂಳಿಗಳಲ್ಲಿ ಕಾಳೆಗವನ್ನಾಡಿಸುವರು. '**ಗರಡಿ**ಯೊಳಗೆ ಸಾಧನಗೈದು, ದೇಹದೊಳಿರುವ ಜಲವ ಮೇಲೆ ಧರಿಸಿ, ಮಿರುಪ ಕುಂಕುಮವಸನದ ಕೈಸಾಣೆಯ' ಹಲವು ಜನ ದೊರೆಗಳ ಕುವರರು ಅಲ್ಲಿ ತಿರುಗಾಡುತ್ತಿದ್ದರು. ಅವರೆಲ್ಲ ಬೇರೆಬೇರೆ ಶಸ್ತ್ರಾಸ್ತ್ರಗಳ ಸಾಧನೆಯನ್ನೂ, ಜೋಕಿನ ಪಟ (ದಾಂಡಪಟ್ಟ)ವನ್ನೂ, ಕತ್ತಿ-ಕಠಾರಿ-ದೊಣ್ಣೆಯ ವರಸೆಯನ್ನೂ ರೀತಿತಿಳಿದು ಮಾಡುವವರು.

**ದೊರೆಗಳ ಕುಮಾರಿತಿಯರು** ಮುತ್ತಿನ 'ದಡ್ಡಿಯ ಪಲ್ಲಕ್ಕಿ (ಮೇನಾ)'ಗಳನ್ನು ಏರಿ, ತಮ್ಮ ಜೊತೆಯಲ್ಲಿಯೆ ಬರುವ **ಕೆಳದಿಯರ** ಗುಂಪುಗಳೊಂದಿಗೆ ಬೀದಿಯಲ್ಲಿ ಎಡೆಯಾಡುತ್ತಿರುವರು.

ಅನೇಕ ಜನ **ಮನ್ನೆಯರು**, ‘ದೊರೆಗೆ ಕಾಣಿಕೆಯೀವ ವಸ್ತು-ವಾಹನಗಳ ಪಿರಿದು ಸಂದಣಿಯ ಸಾಲಿಸಲಿ’ ಅರಮನೆಗೆ ಹೋಗುವುದಕ್ಕಾಗಿ ತಂಡ-ತಂಡವಾಗಿ ಬೀದಿಗಳಲ್ಲಿ ಹೋಗಿಬರುತ್ತಿರುವರು.

**ಅರಮನೆ ಮತ್ತು ಅಲ್ಲಿಯ ಬೇರೆಬೇರೆ ಭಾಗಗಳು.**

ಕಂಠೀರವ ನರಸರಾಜನ ಅರಮನೆಗೆ ನೆಲೆಯುಪ್ಪರಿಗೆಗಳು ಎಷ್ಟೆಷ್ಟೋ ಇದ್ದುವು. ಅವುಗಳಲ್ಲಿಯೂ ಚೌದೆಸೆಯ ಉಪ್ಪರಿಗೆಗಳು ‘ಜಯಸಿರಿ, ಭಾಗ್ಯ-ಸಿರಿ, ಶಾರದಲಕ್ಷ್ಮಿ, ಧೈರ್ಯಲಕ್ಷ್ಮಿಯರ ಮುಖಾಬ್ಜದಂತೆ’ ಮೆರೆಯುತ್ತಿದ್ದುವು. ಈ ‘ಧವಳದುಪ್ಪರಿಗೆಗಳ ಅಂತರಾಂತರದ ಭಿತ್ತಿಯಲಿ... ಮೋಹರಸವ ಸೂಸುತ, ಚೆಲ್ವಾಂತ **ಪುತ್ತಳಿಗಳು**’ ಒಪ್ಪುತ್ತಿದ್ದುವು. ಆ ಪುತ್ತಳಿಗಳೆಂದರೆ ಏನೋ ಕೆಲಸಕ್ಕೆ ಬಾರದ ಗೊಂಬೆಗಳಲ್ಲ; **‘ಭಾರತ, ರಾಮಾಯಣ, ಭಾಗವತ’** ಕಥಾಸಂದರ್ಭಗಳನ್ನು ಪ್ರದರ್ಶಿಸುವಂತಹವೂ, ಶೃಂಗಾರರಸಪೂರಿತವಾದ ಕಾವ್ಯ-ನಾಟಕದಲ್ಲಿಯ ಕಥಾ ಸೂಚಕವಾದುವೂ ಇದ್ದುವು. ಅಲ್ಲದೆ ಅರಸಂಚೆ, ಸೋಗೆನವಿಲು, ಬಣ್ಣಗೋಗಿಲೆ, ಗಿಳಿ, ಚಕ್ರವಾಕ ಮೊದಲಾದ ಪಕ್ಷಿಗಳ ಪ್ರತಿಮೆಗಳೂ ಅಲ್ಲಿ **‘ಸ್ಮರಧೀರನ ಬಲದಂತೆ’** ಕಂಗೊಳಿಸುತ್ತಿದ್ದುವು. ಆನೆ, ವರಾಹ, ಕಾಳ್ಕೋಣ, ಪೆರ್ಬುಲಿ, ಸಿಂಹ, ಹರಿಣ, ಭೇರುಂಡ ಮೊದಲಾದ ನಾನಾ ಬಗೆಯ ಮೃಗಗಳ ಪ್ರತಿಮೆಗಳು ಹರ್ಮ್ಯಗಳಲ್ಲಿ ಪರಿಶೋಭಿಸುತ್ತಿದ್ದುವು.

ಹೊರಭಾಗವನ್ನು ಬಣ್ಣಿಸಿ ಕಣ್ಣಿಗೆ ಕಟ್ಟಿದ ಕವಿ, ವಾಚಕರನ್ನು ಅರಮನೆಯೊಳಕ್ಕೆ ಕರೆದುಕೊಂಡು ಹೋಗಿ, ಅದರ ಒಂದೊಂದೆ ಭಾಗವನ್ನು ತೋರಿಸುತ್ತಾನೆ: ಹೋದೊಡನೆಯೆ ಅವರು **‘ಹಿರಿಯ ಹಜಾರ’**ವನ್ನು ನೋಡುವರು. ಅಲ್ಲಿಯ ಕಂಬಗಳೆಲ್ಲ ಹೊಂದಗಡುಗಳಲ್ಲಿ ಹುದುಗಿ ನಿಂತಂತಹವು. **‘ಪಟ್ಟೋಳಿಯ** (ರೆಸಿಮೆಬಟ್ಟೆಯ) **ಸರಗೊಂಡೆಯದ ಲೋವೆಯಿಂದ’** ಅಂದವಡೆದ ಹಜಾರವದು. ಇದನ್ನು ನೋಡಿ ಮುಂದೆ ಹೋದರೆ **‘ಚಿತ್ರಶಾಲೆ’** ಇರುವುದು. ಅದು ‘ಸುರಪನ ಆಸ್ಥಾನಮಂಟಪದ ಶೃಂಗಾರದ ಪರಿವಿಡಿಯ’ ಸೋಲಿಸಿಬಿಡುವಂತಹದು. ಅಲ್ಲಿಂದ ಮುಂದೆ ಹೋದರೆ **‘ಲಕ್ಷ್ಮೀವಿಲಾಸ’** ವಿರುವುದು. ಮುಂದೆ ಒಂದುಕಡೆಗೆ **ದುರ್ಗಾಮಂಟಪ**, ಇನ್ನೊಂದು ಕಡೆಗೆ **ಶಾರದಾಮಂಟಪ.** ಈ ಶಾರದಾಮಂಟಪದಲ್ಲಿ ಗಿರಿಜಾ-ಕಲ್ಯಾಣದ ಕತೆಯನ್ನು ಒಳಗೊಂಡ ‘ಚಾರುತರದ ಚೆಲ್ವ ಚಿತ್ತರಗಳು’ ಇರುವುವು. **ನಾಟಕಶಾಲೆಯಲ್ಲಿ** ಅರಗಿಳಿ, ನವಿಲು, ಕೋಗಿಲೆ, ಕೊಂಚೆ,

ಕೊಳರ್ವಕ್ಕಿ ಮೊದಲಾದುವುಗಳ ಪ್ರಣಯಜೀವನವನ್ನೂ ಸುರನಾರಿಯರ ವಿಲಾಸಗಳನ್ನೂ ರೂಪಿಸಿದ ಪುತ್ತಳಿಗಳಿರುವುವು. ಅದಕ್ಕೆ ಸಮೀಪದಲ್ಲಿಯೆ '**ಇಂದಿರಾ ಮಂದಿರ**'ವಿರುವುದು. ಮುಂದಕ್ಕೆ ಹೋದರೆ ನಡುವೆ '**ಬಂಗಾರ ಚೌಕಿ**' ಸಿಕ್ಕುವುದು. '**ಮದನವಿಲಾಸ**'ದ ಸೊಬಗನ್ನಂತೂ ಕವಿ ತುಂಬ ಹೇಳಿರುವನು. ಅಲ್ಲಿ '**ಚೌರಾಸೀತಿ** (ಎಂಬತ್ನಾಲ್ಕು) **ಬಂಧ**'ದ ವಿವಿಧರತಿಯ ತೋರಿ ಮೆರೆವ—ಎಲ್ಲವುಗಳನ್ನೂ ವಸ್ತ್ರಗಳಿಂದ ಮುಚ್ಚಿದ—ಪ್ರತಿಮೆಗಳಿರುವುವು. ಅದಕ್ಕೆ ಪಕ್ಕದಲ್ಲಿಯೆ '**ಸೌಂದರ್ಯ-ನಿಳಯ**'. ಮತ್ತೊಂದೆಡೆಯಲ್ಲಿ '**ವಿಜಯಭವನ**' ವಿರುವುದು. ಅರಮನೆಯಲ್ಲಿ ರಾಣಿಯರಿಗಾಗಿ ನಿರ್ಮಿತವಾದ '**ನವರತ್ನದತೊಟ್ಟಿ**' ಗಳಿರುವುವು. '**ನಾಟಕಶಾಲೆಯ** ಅಬಲೆಯರ (ದೊರೆಯ ಬಂಗಾರದವರ)' ಮಣಿಮಯ ಭುವನಗಳೂ ಅಲ್ಲಿ ಇದ್ದುವು ಇವರಲ್ಲಿಯ ಅನೇಕರು ಜ್ಯೋತಿಷ, ಕಾವ್ಯ, ನಾಟಕಶಾಸ್ತ್ರ, ಸಂಗೀತರೀತಿಗಳಲ್ಲಿ ಕೋವಿದೆಯರಾಗಿ ಇರುವರು. ಅರಮನೆಯ ಇಷ್ಟೆಲ್ಲ ಭಾಗಗಳನ್ನು ನೋಡಿಯಾದ ಮೇಲೆ, ಬೇಕಿದ್ದರೆ ಅಪ್ಪಣೆಪಡೆದು **ಭೋಜನಶಾಲೆ, ಒಳಬೊಕ್ಕಸ, ಪೂರ್ಣಭಂಡಾರ, ಪೊನ್ನನಿಳಯ, ಉಗ್ರಾಣ, ಪಾಕಗಳ ಗೃಹ, ಆಯುಧಶಾಲೆ** ಇವುಗಳನ್ನೂ ಸುತ್ತಾಡಿ ನೋಡಿ ಬರಬಹುದು. ಹೂದೋಟದಲ್ಲಿ ತಿರುಗಾಡಿ ಬರಬೇಕೆನಿಸಿದರೆ ರಾಣೀವಾಸದವರಾರೂ ಇಲ್ಲದಾಗ '**ಅಂತಃಪುರದ ಉದ್ಯಾನವನ**'ಕ್ಕೂ ಹೋಗಬಹುದು. ಅಲ್ಲಿ ಸಳಸಳನೆ ಹರಿಯುತ್ತಿರುವ '**ಕಾಲ್ವೆ**' ಯಲ್ಲಿ ಕೈಕಾಲುಗಳನ್ನೂ ತೊಳೆದುಕೊಳ್ಳಬಹುದು.

ಕಂಠೀರವ ನರಸರಾಜನು ನಿತ್ಯವೂ '**ರಾಮಕಥೆ**ಯಲಿ ರವಿಕುಲದ ಅವನಿಪರುಗಳ ಪ್ರತಾಪ' ಕೇಳುವನು. 'ಭಾರತದಲ್ಲಿ ಸೋಮವಂಶದ ರಾಯರುಗಳ ಸುಧರ್ಮೋದ್ಧಾಮವನು' ಕೇಳಿ ನಲಿಯುವನು. 'ಭಾಗವತ ಪುರಾಣ ಪ್ರಸಂಗವ....ಕೇಳಿ, ಹರಿ-ಹರ ಭಕ್ತಿಯೊಳಿರುವನು'. ಈ ದೊರೆಯು ಶ್ರೀರಂಗಪಟ್ಟಣದ ಶ್ರೀರಂಗನಾಥ, **ನರಸಿಂಹ** ದೇವರುಗಳ ದೇವಾಲಯದಲ್ಲಿ ಕಾಲಕಾಲಕ್ಕೆ ತಕ್ಕ ಪೂಜೆಗಳೂ ಸೇವೆಗಳೂ ನಡೆಯುವಂತೆ ಏರ್ಪಾಡನ್ನು ಮಾಡಿದ್ದನು.* ಆದುದರಿಂದಲೆ ಅಲ್ಲಿ **ಪಕ್ಷೋತ್ಸವ-ಮಾಸೋತ್ಸವ**

**ನರಸರಾಜನ ಆಧಿದೈವಿಕ ಜೀವನ**

* ಗೋವಿಂದವೈದ್ಯ ಈ ದೇವಾಲಯಗಳನ್ನೂ ಅಲ್ಲಿ ನಡೆಯುವ ಪೂಜಾಪದ್ಧತಿಯನ್ನೂ ತುಂಬ ವಿವರಣೆಗಳೊಂದಿಗೆ ಬಣ್ಣಿಸಿರುವನು (ಸಂಧಿ ೬; ಪದ್ಯ ೬೩ ರಿಂದ ೧೧೦ ರ ವರೆಗೆ).

ಗಳಲ್ಲಿ ಪಲ್ಲಕ್ಕಿಸೇವೆ ನಡೆಯುವುದು. **ಕರಿರಾಜತಿರುನಾಳು**, ಸಂಕ್ರಮಣದ **ತಿರುನಾಳು, ರಥಸಪ್ತಮಿಯ ತಿರುನಾಳು, ಕೋಡೆತಿರುನಾಳು, ವಸಂತ ತಿರುನಾಳು** ಇವೆಲ್ಲ ಉತ್ಸವಗಳೂ ಅಚ್ಚುಕಟ್ಟಾಗಿ ನಡೆಯುತ್ತಿದ್ದುವು. ಈ ವೀರವೈಷ್ಣವ ದೇವಾಲಯಗಳಂತೆಯೆ ಆ ರಾಜಧಾನಿಯಲ್ಲಿ **ದೊಡ ಹಂಪಯ್ಯನಮಠ, ಮೂಲೆಯ ಮಠ, ವಿರಕ್ತಮಠ, ದಾಸೋಹದ ಮಠ** ಮೊದಲಾದ ವೀರಶೈವರ ಧರ್ಮಸಂಸ್ಥೆಗಳೂ ವ್ಯವಸ್ಥಿತವಾಗಿ ನಡೆಯುತ್ತಿದ್ದುವು. ರಾಜಧಾನಿಯ ಜನರಿಗೆಲ್ಲ ಗೊತ್ತಾಗುವಂತೆ 'ಗೋಪುರದೊಳಗೆ **ಗಡಿಯಾರ-ಜಾಗಟೆ**' ಸಮಯಕ್ಕೆ ಸರಿಯಾಗಿ ನುಡಿಯುತ್ತಿರುವುದು.

## ೭. ರಾಜಕಾರ್ಯ ಪ್ರಪಂಚ

**ದೊರೆಯ ಒಡ್ಡೋಲಗ**

ಆ ಕಾಲದಲ್ಲಿ ಅರಸರ **ಒಡ್ಡೋಲಗ**ಗಳು ಯಾವಾಗ ಕೂಡುತ್ತಲಿದ್ದುವು?... ಓಲಗಶಾಲೆ ಹೇಗೆ ಇರುತ್ತಿದ್ದಿತು?... ಓಲಗಕ್ಕೆ ಯಾರು ಯಾರು ಬರುತ್ತಿದ್ದರು?... ಎಂಬುದನ್ನೆಲ್ಲ ವಿಶದವಾಗಿ ತಿಳಿದುಕೊಳ್ಳಬೇಕಾದರೆ 'ಗೋವಿಂದವೈದ್ಯ' ಕವಿಯ ಕಾವ್ಯದ ೮ನೆಯ ಸಂಧಿಯನ್ನು ಓದಿನೋಡಬೇಕು. '**ರವಿ ಪಶ್ಚಿಮಲಲನೆಯ ರತಿಕೇಳಿಗೊಲಿದು ನಲವಿಂದ ತೆರಳಿದ**'. '**ಪೂರ್ಣಚಂದ್ರನು ಮೂಡುಗಡೆಯೊಳು ಒಪ್ಪಿದ್ದ**'. ಆಗ ದೊರೆಯ ಓಲಗ ನೆರೆಯಲಿಕ್ಕಿದ್ದಿತು. ಓಲಗಸಾಲೆಯಲ್ಲಿ '**ನವನಾರೀ ಕುಂಜರ**', '**ಪಂಚನಾರೀ ತುರಂಗ**'ದ ಹೊನ್ನಕಂಭ ಮೆರೆಯುತ್ತಿದ್ದುವು. * ಅಲ್ಲದೆ 'ಹರಿಯ ನಾಟಕ ಮನಸಿಜನ ವಿಲಾಸದ ಪರಿವಿಡಿಗಳ ಪುತ್ತಳಿ' ಗಳೂ ಅಲ್ಲಿ ಚೌದೆಸೆಯ ಭಿತ್ತಿಗಳಲ್ಲಿ ಇರುವುವು. ಓಲಗಸಾಲೆಯಲ್ಲಿ ಯಾವ ಕಡೆಗೆ ನೋಡಿದರೂ **ಮಿಸುನಿಯ ಪಟ್ಟೆ** (ಜರಿಯ ಬಟ್ಟೆ)ಗಳು; **ದೇವಾಂಗವಸನ** (ಬಿಳಿಯ ಬಟ್ಟೆ)ಗಳಿಂದ ಬಿಗಿದ **ಮೇಲ್ಕಟ್ಟು** (ಛತ್ತು); ಮುತ್ತು-ರತ್ನಗಳ ಗೊಂಚಲು; ಜಾಜಿ-ಸಂಪಿಗೆಗಳ ಪೂಮಾಲೆ. ಓಲಗಸಾಲೆಯ ಮೇಲ್‌ಭಾಗದ ವರ್ಣನೆಯಿದಾಯಿತು. ನೆಲಗಟ್ಟು ಪನ್ನಿರ **ಚಳೆಯ, ಸಾರಣೆ, ರಂಗವಲ್ಲಿ,**

---

*** ಕನ್ನಡ ನಾಡಿನ ಪ್ರಾಚೀನ ರಾಜಸಭಾಮಂಟಪಗಳಲ್ಲೆಲ್ಲ 'ನವನಾರೀಕುಂಜರ' 'ಪಂಚನಾರೀ ತುರಂಗ'ಗಳುಳ್ಳ ಕಂಬಗಳು ಇದ್ದೆ ಇರುತ್ತಿದ್ದುವು. ದ. ಕ. ಜಿಲ್ಲೆಯ ಮೂಡುಬಿದಿರೆಯಲ್ಲಿರುವ ಐತಿಹಾಸಿಕ ಕಟ್ಟಡವೊಂದರಲ್ಲಿ, ಈ ಬಗೆಯ ಕಂಬಗಳಿದ್ದುದನ್ನು ಈಗಲೂ ನೋಡಬಹುದಾಗಿದೆ.**

**ಕಾರಣೆ**ಗಳಿಂದ ಕೂಡಿರುವುದು. ಬಗಬಗೆಯ ಸುಗಂಧದ್ರವ್ಯಗಳ ವಾಸನೆಯಿಂದ ಸಭಾಸ್ಥಾನ ತುಂಬಿದ್ದಿತು.

ದೊರೆಯು ಕುಳಿತುಕೊಳ್ಳುವುದಕ್ಕಾಗಿ '**ಮಿಸುನಿಮಂಚ**'ದ ಮೇಲೆ '**ಹಂಸತೂಳದ ತಲ್ಪವನು ಹಚ್ಚಡಿಸಿ....ಬಟ್ಟುವೊರಗು** (ತಕ್ಕೆ-ಲೋಡು)'ಗಳನ್ನು ಇರಿಸಲಾಗಿರುವುದು. ಆಗ ಮುತ್ತಿನ ಪಲ್ಲಕ್ಕಿಯನು ಏರಿ ದೊರೆ ಓಲಗಸಾಲೆಗೆ ಬಂದ. ಮಂತ್ರಿ–ಮನ್ನೆಯ-ಸುಭಟರುಗಳ ಸಂಕುಲ ಆತನನ್ನು ಬಳಸಿ ಬರುತ್ತಿದ್ದಿತು. ದೊರೆಯ ತಲೆಯ ಮೇಲೆ **ಬಿರುದಿನ ಛತ್ರ** ಒಪ್ಪುತ್ತಿತ್ತು. 'ಬಾಲಾರ್ಕನು ಬಹುರೂಪಾದಂದದೊಳು' **ಆಲವಟ್ಟ** (ಬೀಸಣಿಕೆ)ಗಳು ಅಲುಗಾಡುತ್ತಿದ್ದುವು. ಆಗ 'ಕೊಂಬು, ಕೊಳಲು, ನಾಗಸರ, ಭೇರಿ, ತಂಬಟ, ಬೊಂಬುಳಿ, ಬುರುಗು, ಡಿಂಡಿಮ ಮೊದಲಾದ ವಾದ್ಯಗಳ ಮೊರೆತವು ಆಕಾಶವನ್ನು ತುಂಬಿದ್ದಿತು. ಪಾಠಕರು '**ಅರಿರಾಜ ಗಿರಿವಜ್ರದಂಡ! ಸ್ನೇಹಿತನೃಪ ಸರಸಿಜವನಮಾರ್ತಂಡ! ನರಸರಾಜೇಂದ್ರಚಂದ್ರಮ ಜಯಜಯತು!**' ಎಂದು ಪೊಗಳುತ್ತಿರುವಾಗ ದೊರೆಯು **ಸಿಂಹಪೀಠ**ದ ಮೇಲೆ ಕುಳಿತುಕೊಂಡ. ಆಗ ಓಲಗಸಾಲೆಯಲ್ಲೆಲ್ಲ '**ಬೊಂಬಾಳ ದೀವಟಿಗೆ**ಗಳ್' ಸುರುಚಿರ ಪ್ರಭೆಯನು ಸೂಸಿದುವು. ದೊರೆಗೆ 'ಎಳವೆಂಗಳು' ಚಾಮರವ ಡಾಳಿಸತೊಡಗಿದರು.

**ಗಾಯಕರು, ಕವಿಗಳು, ವೇದವಿದರು, ಶಾಸ್ತ್ರಜ್ಞರು, ಮಂತ್ರೋದಯಾಧ್ಯರು, ಭಾರತಿಗಳು** (ಭಾರತವನ್ನೋದುವವರು),

ಸಭೆಯಲ್ಲಿದ್ದ ವಿವಿಧಜನರು

**ತಾರ್ಕಿಕರು, ವಾಚಕರು, ವಿನೋದಿಗಳು, ಕರಣಿಕರು, ಆಪ್ತಮಂತ್ರಿಗಳು, ರಾಯಸ ಬರೆದೋದುತಿಹ ಬಲ್ಲವರು, ದಳಪತಿಗಳು, ಮನ್ನೆಯರು, ಮಂಡಲಿಕರು, ತುಳಿಲಾಳುರಾಯರು** (ಶರಣಾಗತ ರಾಜರು), **ರಾವುತರು** ಇವರೆಲ್ಲ ಓಲಗಸಾಲೆಯಲ್ಲಿ ಔಚಿತ್ಯವನ್ನರಿತು ತಮ್ಮ ತಮ್ಮ ಸ್ಥಾನಗಳಲ್ಲಿ ಮಂಡಿಸಿರುವರು. ಚಾಮರ, ಕುಂಚ, ಕಾಳಾಂಜಿ, ಪಾವಡೆ, ಕನ್ನಡಿ ಮೊದಲಾದುವುಗಳನ್ನು ಹಿಡಿದುಕೊಂಡ '**ಊಳಿಗವರ**' ಬಳಗವೂ ಅಲ್ಲಿ ಸಾಲುಗೊಂಡು ನಿಂತಿದ್ದಿತು.

**"ತೆಲುಗು ಮನ್ನೆಯ ಸಾಲಿದೆ; ತಿರುಕೊಂಕಣ**
**ಸಲೆ ಕೊಂಗ ತಿಗುಳ ಕೊಡಗರು!**

ಗಲಭೆಯು ಮಾಣುಮಾಣೆಂಬ ಅವಸರದವ-
ರುಲುಹೊಪ್ಪಿತಾಸ್ಥಾನದೊಳಗೆ !"

ದೊರೆ ಬಂದು ಕುಳಿತೊಡನೆಯೆ ಹೆಂಗುಸರ '**ಕೋಲಾಟ**' ಮೊದಲು ನಡೆಯಿತು. ಬಳಿಕ 'ಬಿರುದಿನ ಪಾತ್ರದ ಸಾರಿಯ ಮೇಳದ ತರುಣಿಯರ' '**ನರ್ತನ**'ವಾಯಿತು. ಆ ಮೇಲೆ **ಗಾಯಕರು** 'ತುಂಬುರವಿಡಿದು ಗಾನಾಮೃತವ ಕಿವಿಗಿಂಬಾಗಿ ಸವಿದೋರಿಸುತ' ಹಾಡಿದರು. ತರುವಾಯ '**ವೈಣಿಕ ಬಯಕಾರ**ರು ಕೊರಳಬೆರಳನೊಂದುಗೂಡಿ ದೊರೆರಾಯ ಕಂಠೀರವನ **ಅಂಕಮಾಲೆ**ಯನು ಪಾಡಿದರು'. ಅನೇಕ ಜನ ವಿದ್ವಾಂಸರು ಬಂದು 'ಭರತ-ಪುರಾಣ-ನಾಟಕ-ನೀತಿಶಾಸ್ತ್ರ-ತರ್ಕ-ಶಬ್ದಗಳ' ನಿರ್ಣಯಿಸಿ ತೋರಿಸಿದರು. **ಭಾರತಿಗಳು** ಭಾರತ-ರಾಮಾಯಣ ಪುಣ್ಯಕಥೆಯ ವಿಸ್ತಾರವ ಗಾನರಸದಲಿ ಸಾರತರದೆ ನಲಿದೋದಿ....ರಾಜಿಸಿದರು'. *

**ಸಂಸ್ಕೃತಿ ಪರಿಪೋಷಕ ಕಾರ್ಯಕ್ರಮಗಳು.**

'**ದೇಸಿಯ ರಾಜವಟ್ಟದ** ಸವಿನುಡಿಗಳನು ನೃಪಕ್ಷಿತೀಶ್ವರನಿಗೆ ಬಿನ್ನೈಸುತ' ದೊರೆಯ ಎಡಬಲಗಳಲ್ಲಿ 'ಮಂತ್ರಿಗಳು ಇಟ್ಟಣಿಸಿಹರು.'. ಅದರಂತೆಯೆ ದಳವಾಯಿ, ರಾವುತ, ಮಾವುತ, ಒಂಟಿಗ (ಒಂಟೆಯ ಮೇಲೇರುವವ)ರ ಬಳಗವೂ ದೊರೆಯ ಆಜ್ಞೆಗಾಗಿ ಕಾಯುತ್ತ ಕುಳಿತಿರುವುದು. ಆಗ ಸಭೆಯಲ್ಲಿ 'ಪರಿಮಳಿಸುವ ದಿವ್ಯ **ಸಾಮ್ರಾಣಿಧೂಪವ**' ಹಾಕಿದರು. ದಿಕ್ಕುದಿಕ್ಕಿನಿಂದ ಬಂದ ರಾಯಭಾರಿಗಳು ಅಲ್ಲಿಗೆ ಬಂದು ಓಲಗವನ್ನು ನೋಡಿ, ವೈಭವಕ್ಕೆ ತಲೆಯನ್ನು ತೂಗುತ್ತಿದ್ದರು. ಓಲಗದಲ್ಲಿ ನಡೆಯಬೇಕಾದ ರಾಜಕಾರ್ಯವೆಲ್ಲ ನಡೆದುಹೋಯಿತು. ದೊರೆಯು 'ಓಲಗಪರಿವ ಸಮಯದಲಿ ವೀಳೆಯವುಡುಗೊರೆಗಳನು ಸಭೆಗೆ ಸೂಸಿದನು'. ಬಳಿಕ ಒಳಗೆ '**ರಾಣಿಯೋಲಗಶಾಲೆಗೆ**' ಐತಂದನು. ಅಲ್ಲಿಂದ ತಾರೆಗಳ ಸಮೂಹದೊಂದಿಗೆ ಬರುವ ರಾಕಾಚಂದ್ರನಂತೆ 'ತರುಣಿರನ್ನೆಯರ ಮೊತ್ತದಲಿ' ನಾಟಕಶಾಲೆಗೆ ಬಂದನು.

---

* ಆ ಕಾಲದಲ್ಲಿ ಗಮಕಿಗಳನ್ನೆ ಭಾರತಿಗಳೆಂದು ಹೇಳುತ್ತಿದ್ದರೆಂದು ತೋರುವುದು. ಇದಕ್ಕೆ ಕುಮಾರವ್ಯಾಸನ ಭಾರತದ ಲೋಕಪ್ರಿಯತೆಯೆ ಕಾರಣವಾಗಿರಬಹುದು.

# ೮. ವಿವಿಧ ಕಲಾಜೀವನ

ನಮ್ಮ ಪ್ರಾಚೀನ ಸಾಮಾಜಿಕ ಜೀವನದಲ್ಲಿ ಕಲೆಗಳಿಗೆ ಇರುವ ಸ್ಥಾನವು ದೊಡ್ಡದು. ಅಂದಿನ ರಾಜಕೀಯ ಸಂಸ್ಥೆಗಳೂ ಸಿರಿವಂತರ ವರ್ಗವೂ, ಕಲೆಗಳ ಸಂವರ್ಧನೆಗೂ ಸಂರಕ್ಷಣೆಗೂ ತುಂಬ ಲಕ್ಷ್ಯವನ್ನು ಕೊಡುತ್ತಿದ್ದುವು. **ಗೀತ, ನರ್ತನ, ನಾಟಕ, ಕಾವ್ಯ, ಗಮಕ**ಕಲೆಗಳೆ ಅಂದಿನವರ ಭಾವವಿಕಸನಕ್ಕೆ ಕಾರಣವಾಗಿದ್ದುವು. ಕಂಠೀರವ ನರಸರಾಜನ ಕಾಲದಲ್ಲಿ ಗಂಡುಸರೆಲ್ಲ ಸಾಹಸಜೀವನದಲ್ಲಿ ಜೀವಿಸಬೇಕಾದುದರಿಂದ, ಕಲಾಪ್ರಪಂಚದ ಸಂರಕ್ಷಣೆಯ ಭಾರವನ್ನೆಲ್ಲ ಸ್ತ್ರೀಯರ ಮೇಲೆ ವಹಿಸಿಬಿಟ್ಟಿದ್ದರೆಂದು ತೋರುವುದು. ಕಂಠೀರವ ನರಸರಾಜನು ನಾಟಕಶಾಲೆಗೆ ಬಂದು ಆಸನದ ಮೇಲೆ ಕುಳಿತ ಬಳಿಕ, ಅಲ್ಲಿ ನಡೆದ ಕಲಾಪ್ರದರ್ಶನದ ಕಾರ್ಯಕಲಾಪದಲ್ಲಿ ಬರಿಯೆ ಹೆಂಗುಸರೆ ಭಾಗವಹಿಸಿದುದನ್ನು ನೋಡಿದರೆ, ಈ ನನ್ನ ಊಹೆಯು ನಿಜವೆಂದು ತೋರದಿರದು :

**ಅರಮನೆಯ ನಾಟಕಶಾಲೆ**

ತೂರ್ಯತ್ರಯದ ಮಂಗಳಘೋಷವು ಕಿವಿಗಳನ್ನು ಆಕರ್ಷಿಸುತ್ತಿರುವಾಗಲೆ 'ಭಾಸುರ ಬಿರುದಿನ **ನಾಟ್ಯವಧು**ಗಳು ಸಂತೋಷದೆ ನಡೆತಂದರು'. ಇವರು ತೊಳಗುವ **ನವರತ್ನಗಾಸೆ**ಯಿಂದ ಪರಿಶೋಭಿಸುತ್ತಿದ್ದರು; ಸರ್ವಾಂಗಕ್ಕೆ **ಮಣಿಭೂಷಣ** ಅಳವಟ್ಟವರು; ಥಳಥಳಿಸುವ ಮುದ್ದು-ಮೊಗದ ಚೆನ್ನೆಯರು. ಇವರಿಗೆ ನಾಟ್ಯಾಭಿನಯಗಳನ್ನು ಕಲಿಸಿದ **ಭರತಾಚಾರ್ಯ**ನೂ ನಾಟ್ಯವಧುಗಳ ಗುಂಪಿನಲ್ಲಿದ್ದನು; ಆತನ '**ಉಡಿಯ ಸುತ್ತಿದ ವಲ್ಲಿಪಾಟನ, ಕರದಲಿ ಪಿಡಿದು ರಂಜಿಪ ರನ್ನಸೆಳೆಯ ಬೆಡಗನ್ನು**' ಬಣ್ಣಿಸಲಿಕ್ಕಾಗದಂತಹದು. ನಾಟ್ಯವಧುಗಳೆಲ್ಲ '**ಕಾಂಡಪಟ**ದ ಮರೆಯೊಳು (ಪರದೆಯ ಹಿಂದೆ)' ಭರತಶಾಸ್ತ್ರಾಧಿದೇವಿಯರಂತೆ ರಂಜಿಸತೊಡಗಿದರು. **ಆಗ** ತಾಳ, ಮದ್ದಳೆ, ಮುಖವೀಣೆ, ಆವುಜ, ಗೀತದಾಳಾಪ, ನಾಟ್ಯವಧುಗಳ ಕಾಲಗೆಜ್ಜೆಯ ರವ, ಗತಿ ಇವೆಲ್ಲ ಕೂಡಿ, ಕಿವಿಗೊಂದು ಹೊಸಸವಿಯನ್ನು ಬೀರಲು ತೊಡಗಿದುವು. ಮೊದಲು **ಸೂತ್ರಧಾರ**ನು ಬಂದು '**ತತ್ತಕಾರವ ವಿರಚಿಸಿ ಜವನಿಕೆ (ಪರದೆ) ದೆಗೆಯೆ**' ಭರತಶಾಸ್ತ್ರಾಗಮದಂತೆ ಪ್ರೌಢೆಯರು ಪುಷ್ಪಗಳನ್ನು ಸೂಸಿದರು. ಬಳಿಕ ಮಂಗಲಾಚರಣಕ್ಕೆ ಮೊದಲಾಯಿತು. ಇನಿದಾದ ಧ್ವನಿಯಲ್ಲಿ :

“ ನರಸಿಂಹಸ್ತುತಿ ಗೀತಪ್ರಬಂಧವ
ಪಿರಿದು ಸುಳಾದಿ* ತಾಳದಲಿ
ಕರದಭಿನಯಗೂಡಿ ಕಡುಕುಶಲದೆ ನಾಟ್ಯ-
ದಿರವ ಮೆರೆದರಂಗನೆಯರು.”

ಅಲ್ಲದೆ ಅವರು ‘ **ಕರಭೇದ** ’ ‘ **ದೃಷ್ಟಿಭೇದ** ’ ‘ **ಶಿರಭೇದ** ’ ‘ **ಸ್ಥಾನಕ ಭೇದ** ’ ‘ **ಚಾರಿಯ ಭೇದ** ’ ಇವೆಲ್ಲವುಗಳ ಮೂಲಕ ಭಾವವನ್ನು ಪ್ರದರ್ಶಿಸಿದರು. ಆ ನರ್ತಕಿಯರಿಗೆ ನಾಟ್ಯಭೇದಗಳಾದ ‘ **ಅಂಗಪ್ರತ್ಯಂಗೋ ಪಾಂಗಬಹುಚಾಳಿ, ವರದೇಶಿ, ಕೋಲಚಾರಿ, ಅಂಗಹಾರ, ಮಂಡಲ, ಕರಕ್ಷೇತ್ರ** ’ ಎಂಬುವೆಲ್ಲ ಚೆನ್ನಾಗಿ ಗೊತ್ತಿದ್ದುವು. ‘ **ರಂಭಾನಾರಿಯ ಪಾತ್ರದ ಪರಿಣತಿಯ. . . . ಊರ್ವಶಿಯ ಮುಂಬರಿದೆಸೆವ ಕಟ್ಟಣೆಗಳ ಗತಿಯ** ’ ಅವರು ಆಡಿ ತೋರಿಸಿದರು. ಅದರಂತೆಯೆ ‘ **ಪಿರಿದುಪ್ರಬಂಧ, ಜಕ್ಕಿಣಿ_ರಾಜಕೀರನ ಮೆರೆವ ಕಟ್ಟಳೆಯಾಟಗಳ** ’ ಪ್ರದರ್ಶನ ಮಾಡಿದರು. ಆಗ ಅವರ ಪಾತ್ರಕ್ಕೆ ಮೆಚ್ಚಿ ಪಾರ್ವತಿ, ಶಚಿ, ಶಾರದೆ ಮೊದಲಾದವರು ಹೂಮಳೆಗರೆದರೇನೋ ಎಂಬಂತೆ, ಅಲ್ಲಿ ಕೃತ್ರಿಮವಾಗಿ ರಚಿಸಿದ **ಸೂತ್ರಾಭ್ರ** ( ಅಭ್ರ-ಮೋಡ) ಗಳಿಂದ ಪರಿಮಳಪುಷ್ಪ ಸೂಸಿದುವು.’ ನಾಟ್ಯವನ್ನು ನೋಡಿ ನಲಿದ ನರಸ-ರಾಜನು ‘ ಭರತಜ್ಞ ಮೇಳಗಾರರಿಗೆ ’ ನಾಟ್ಯವಧುಗಳಿಗೆ ‘ ಸುರುಚಿರವಸನ, ಕರ್ಪುರದ ಪರಿಮಳ ಮೆರೆವ ವೀಳೆಯಗಳನು ಇತ್ತು ಮನ್ನಿಸಿದ ’.

ಬಳಿಕ ಒಬ್ಬ ನಾರಿಯು ಬಂದು ‘ **ಭಾಗವತ**ವಿಲಾಸದ ಪುಣ್ಯಕಥೆಗಳ ಭಾಸುರ ಗಾನರಸದೊಳು ’ ಓದಿದಳು. ಮತ್ತೊಬ್ಬಳು ಬಂದು ‘ **ಭಾರತ-ಕಥೆ**ಯ ಬಲುಬಿತ್ತರದಲಿ ನಲವಿಂದ ಬತ್ತೀಸರಾಗದೊಳು ’ ಓದಿದಳು. ಇನ್ನೊಬ್ಬ ಕಾಮಿನಿಯು ನಗುನಗುತ್ತ ಬಂದು ‘ **ರಾಮಾಯಣ** ಪುಣ್ಯ-ಕಥೆಯ ಪ್ರೇಮದೊಳು ’ ಓದಿದಳು. ಬೇರೊಬ್ಬ ನೀರೆ ಬಂದು ‘**ಚಿಂತಾಮಣಿ** ಮೊದಲಾದ ಬಗೆ ಬಗೆ ತರ್ಕಶಾಸ್ತ್ರಗಳ ಅಗಣಿತವಾಗಿ ’ ಬಣ್ಣಿಸಿದಳು.

---

* ‘ ಸುಳಾದಿ ’ ಎಂಬ ಹೆಸರಿನ ಸಾಹಿತ್ಯಜಾತಿಯೊಂದು ಹರಿದಾಸ ವಾಙ್ಮಯದಲ್ಲಿ ಇದೆ. ಇಲ್ಲಿ ‘ ಸುಳಾದಿ ’ ಎಂಬುದು ತಾಳವೆಂದು ಈ ಕವಿ ಹೇಳಿರುವನು. ದಾಸರ ಸುಳಾದಿಗಳನ್ನು ನೋಡಿದರೆ ಅವುಗಳಲ್ಲಿಯ ಒಂದೊಂದು ಪದ್ಯಗಳು ಒಂದೊಂದು ತಾಳಗತಿಯಲ್ಲಿ ನಡೆಯುತ್ತಿರುವುದುಂಟು. ಸಂಗೀತಗಾರರು ‘ ರಾಗಮಾಲಿಕೆ ’ ಗಳನ್ನು ಹಾಡುತ್ತಿರುವಂತೆ ‘ ಸುಳಾದಿ ’ ಗಳಂತಹ ತಾಳಮಾಲಿಕೆಗಳನ್ನೂ ಅಂದು ಹಾಡುವ ರೂಢಿಯಿದ್ದಿರಬೇಕು.

ಒಬ್ಬ ನೀರೆ ಬಂದು **'ವಾಣಿಯಂದದೆ ಕರದೊಳು ವೀಣೆಯ ಪಿಡಿದು ಕೊರಳು-ಬೆರಳನೊಂದುಗೂಡಿ ಹರುಷದೆ ಪಾಡಿ'** ಕಿವಿಗಳಲ್ಲಿ ಸಂಗೀತದ ಸುಧೆಯನ್ನು ಎರೆದಳು. **ಬಾಲಶಾರದೆಯರೇನೋ** ಎಂಬಂತಿರುವ ಹುಡುಗಿಯರಿಬ್ಬರು **ತುಂಬುರ** (ತಂಬೂರಿ) ವನ್ನು ಹಿಡಿದು, ತಾಳಕ್ಕೆ ಸರಿಯಾಗಿ, ಕಂಠೀರವ ನರಸರಾಜನ **ಅಂಕಮಾಲೆಯನ್ನು**

> **"ತುರುಕರಾಷ್ಟ್ರಲ ವಾರ್ಧಿಬಾಡಬ! ದ್ರಾವಿಡ-**
> **ಧರಣೀಶತಿಮಿರ ಮಾರ್ತಂಡ!**
> **ನೆರೆ ಆಂಧ್ರಮನ್ನೆಯ ದಳವುಳಕಾರ!...."**

ಎಂದು ಮೊದಲಾಗಿ,— ಕೇಳಿದವರ ಮೈಮನಗಳು ಅಭಿಮಾನದಿಂದ ಜುಮ್ಮೆನುವಂತೆ—ಹಾಡಿದರು. ಆಗ ದೊರೆಯು ಎಲ್ಲವನ್ನೂ ಕೇಳಿ ನಗುತ್ತ ನಾನಾವಿದ್ಯದ ಅಬಲೆಯರಿಗೆ ಬೇಕುಬೇಕಾದ ಉಡುಗೊರೆಗಳನ್ನು ಕೊಟ್ಟು, ಅಲ್ಲಿಯ ಕಾರ್ಯಕಲಾಪವನ್ನೆಲ್ಲ ನಿಲ್ಲಿಸಿ, ಭೋಜನಶಾಲೆಯ ಕಡೆಗೆ ಹೊರಟು ನಡೆದನು.

## ೯. ಊಟ-ಉಡಿಗೆ-ತೊಡಿಗೆಗಳು

ಕಂಠೀರವ ನರಸರಾಜನ ಕಾಲದ ಜನಸಾಮಾನ್ಯರು ಉಣ್ಣುವ ಊಟದ ಪದಾರ್ಥಗಳೂ ರೀತಿಯೂ ಹೇಗಿರುತ್ತಿದ್ದುವೆಂಬುದನ್ನು ಗೋವಿಂದವೈದ್ಯ ಹೇಳಿರದಿದ್ದರೂ, ಸುಸಂಸ್ಕೃತರಾದ ಸಿರಿವಂತರು ಹೇಗೆ ಹೇಗೆ ಏನೇನು ಊಟಮಾಡುತ್ತಿದ್ದರೆಂಬುದನ್ನು ದೊರೆಯ ಊಟದ ಪ್ರಾತಿನಿಧ್ಯದಿಂದ ನಮಗೆ ಚೆನ್ನಾಗಿ ವಿವರಿಸಿ ಹೇಳಿರುವನು. ಆ ಕಾಲದ ತಿಂಡಿ-ತಿನಿಸುಗಳ ಹೆಸರನ್ನು ನೋಡಿದರೆ ಎಷ್ಟೋ ಪದಾರ್ಥಗಳು, ನಮ್ಮ ಉತ್ತರಕರ್ಣಾಟಕದವರಿಗಂತೂ ತೀರ ಅಪರಿಚಿತವಾಗಿ ತೋರುವುವು. ಅಲ್ಲದೆ ಉತ್ತರಕರ್ಣಾಟಕದಲ್ಲಿ ರೂಢವಾಗಿರುವ ಕೆಲವು ತಿಂಡಿ-ತಿನಿಸುಗಳಿಗಿರುವ ಕನ್ನಡ ಪರಂಪರೆಯ ಹೆಸರುಗಳೂ ಗೊತ್ತಾಗುವುವು. ಹೆಚ್ಚು ಮಾತುಗಳನ್ನಾದರೂ ಬೆಳೆಯಿಸಬೇಕೇತಕ್ಕೆ? ನಾವೀಗ ಕಂಠೀರವ ನರಸರಾಜನ ಊಟವನ್ನು ನೋಡುವುದಕ್ಕೆ ಅವನೊಂದಿಗೆ ಅರಮನೆಯ ಭೋಜನಶಾಲೆಗೇ ಹೋಗಿಬಿಡುವ!

**ಅರಮನೆಯ ಜನರ ಊಟದ ರೀತಿ**

ಭೋಜನಶಾಲೆಗೆ ದೊರೆ ಬರಲು ಅಲ್ಲಿಯ ಊಳಿಗದ ನಾರಿಯರು, ಆತನ ‘ **ಚರಣಪಲ್ಲವಗಳ ತೊಳೆದು, ದುಕೂಲದ ಸೆರಗಿನೊಳು ಒರಸಿದರು**’. ಆಮೇಲೆ ‘ ಕೈಲಾಗಿತ್ತು ’ ದೊರೆಯನ್ನು ‘ ರತ್ನಪೀಠದೊಳು ’ ಕುಳ್ಳಿರಿಸಿದರು. ನಾವು ನೋಡುತ್ತಿರುವ ನೋಟವಿದು ರಾತ್ರಿಯ ಊಟದ್ದಾದುದರಿಂದ ‘ ಖವಖವಿಸುವ ಸಾಲು ದಿವ್ಯಜ್ಯೋತಿಗಳು ’ ಆ ಮನೆಯನ್ನೆಲ್ಲ ತುಂಬಿಕೊಂಡಿದ್ದುವು. ಯುವತಿಯರು ಬಾದು ಹರಿವಾಣ-ಬಟ್ಟಲುಗಳನ್ನು ಅಳವಡಿಸಿದರು. ದಳಪತಿ ಸಹಿತ ಸಮಸ್ತ ಬಂಧುಗಳೂ ಜೊತೆಗೆ ಊಟಕ್ಕೆ ಕುಳಿತಿದ್ದರು. ಮೊದಲು ‘ ಪರಿಪರಿಯ **ಉಪ್ಪಿನಕಾಯಿ, ಹಪ್ಪಳ**. ಸವಿವೆರಸಿದ (ರುಚಿಯಾದ) ಶುಭ್ರ **ಬಾಳಕ** ( ಸಂಡಿಗೆ ) ವ ಬಡಿಸಿದರು—ಬಡಿಸುವವರೆಲ್ಲ ಹರಯದ ಹೆಂಗಳು. ಬಳಿಕ **ತಾಳದ** (ಎಣ್ಣೆಯಲ್ಲಿ ಹುರಿದುಮಾಡಿದ ಪಲ್ಲೆಯ ), **ಸೀಕರಣೆ, ಕಸರಿ** ( ಕೋಸಂಬರಿ ), **ಪಚ್ಚಡಿ**ಗಳನ್ನೂ **ಶಾಲಿಯ ದಿವ್ಯಾನ್ನ** (ಸಣ್ಣಕ್ಕಿಯನ್ನ), **ಸದ್ಯೋಘೃತ** ( ಬೆಣ್ಣೆಕಾಯಿಸಿದ ತುಪ್ಪ ) ಗಳನ್ನೂ ಬಡಿಸಿದರು. ಆಮೇಲೆ ‘ ಮಿಸುನಿಯ ಬಣ್ಣದ ತೊಗರಿಯ ಬೇಳೆಯ ಹಸನಾದ **ಸೂಪ** (ತೊವ್ವೆ)’ ವನ್ನೂ **ಶಾಕ** ( ಸೊಪ್ಪಿನ ಮೇಲೋಗರ ) ಗಳನ್ನೂ ಹಾಕಿದರು. ಅನ್ನದೂಟವಾದ ಬಳಿಕ ‘ ಸಣ್ಣ **ಸೇವಗೆ, ಹಾಲುಂಡೆ** ( ಫೇಡೆ ), **ಜೇನ್ಗೊಡ** ( ಘೀವರು? ), ಶುಭ್ರವಣ್ಣದ **ಉದ್ದಿನ ಕಡುಬು, ಹೂರಣಗಡುಬು**’ ಗಳನ್ನವರು ಎಡೆಮಾಡಿದರು. ‘ **ಕೀಲಸಾಗರ** ’ ‘ **ಸಂಜೀವಿನಿ** ’ ಎಂಬ ಹೆಸರುಗಳುಳ್ಳ ‘ ಸಾಲಸವಿಯ **ರೊಟ್ಟಿ**ಗಳ’ ತಂದು ನೀಡಿದರು. **ಉಂಡಲಿಗೆ, ಕರಿಗಡುಬು, ಕಟ್ಟು ( ? ), ಮಂಡಿಗೆ, ಬಿಸಿಯ ದೋಸೆ, ಸಣ್ಣಕ್ಕಿಯ ಪಾಯಸ, ಸೊಜ್ಜಿ**ಗೆವೆರೆದ ಸಕ್ಕರೆಯ **ಪಾಯಸ, ಗೌಲೆಯ ಪಾಯಸ** ಇವೆಲ್ಲವನ್ನೂ ಪರಿವಿಡಿಯಿಂದ ಎಡೆಮಾಡಿದರು ( ಇದನ್ನೆಲ್ಲ ಒಂದೆ ದಿನ ಹೇಗೆ ತಿನ್ನುತ್ತಿರಬಹುದೆಂದು ಸಂದೇಹಗೊಳ್ಳುವ ಕಾರಣವಿಲ್ಲ. ದೊರೆಗಳೂಟವದು ! ).

ಕುಡಿಯಲಿಕ್ಕೆ ಕೊಟ್ಟ ಹಾಲಿನಲ್ಲಿಯೂ ‘ **ಚಿಲುಪಾಲು, ತಂಬಾಲು, ಕೆನೆವೆರಸಿದ ಪಾಲು, ಬಟ್ಟವಾಲು**’ ಗಳೆಂಬ ಪ್ರಕಾರಗಳಿದ್ದುವು. ಮೊಸರು ಗಟ್ಟಿಯಾದ ‘ ಕಟ್ಟುಮೊಸರು ’ ಇದ್ದಿತು. ಮಜ್ಜಿಗೆ ನೀರಾಗಿರದೆ ‘ **ಗಟ್ಟಿ ಮಜ್ಜಿಗೆ**’ ಯಾಗಿದ್ದಿತು. ದೊರೆಯು ಎಲ್ಲರೊಂದಿಗೆ ಊಟವನ್ನು ಮಾಡಿ, **ಕೈಯ**ತೊಳೆದು, ಕರ್ಪೂರದ ‘ **ಸಮಾಜ ವೀಳ್ಯವನು**’ ಇತ್ತು, ಎಲ್ಲರನ್ನೂ ಬೀಳ್ಕೊಟ್ಟು ತನ್ನ ‘ ಸೆಜ್ಜೆಯ ( ಶಯ್ಯಾ = ಸೆಜ್ಜೆ ) ರಾಜಮಂದಿರಕೆ ಐತಂದ ’.

ಈಗಿನ ನಮ್ಮ ಉಡುಗೆ-ತೊಡಿಗೆಗಳ ಬೆಡಗಿಗೆ ೩೦೦ ವರ್ಷಗಳಿಗೆ ಹಿಂದಿನವರ ಉಡುಗೆ-ತೊಡಿಗೆಗಳನ್ನು ಹೋಲಿಸಿ ನೋಡಿದರೆ ಎಷ್ಟೊಂದು ಅಂತರ? ಉದ್ಯೋಗಭೇದದಂತೆ ಅವರವರ ಉಡುಗೆ-ತೊಡಿಗೆಗಳಲ್ಲಿಯೂ ವ್ಯತ್ಯಾಸಕಂಡುಬರುತ್ತಿದ್ದಿತೆಂದು ತೋರುವುದು. ರಾಜಕಾರ್ಯದಿಂದ ದೂರವಾಗಿರುವ ಇಂದಿನ ಸಮಾಜದಲ್ಲಿ, ಅವರವರ ಉದ್ಯೋಗವು ಒಮ್ಮೆಲೆ ಎದ್ದುಕಾಣುವಂತಹ ಉಡುಗೆ-ತೊಡಿಗೆಗಳ ವ್ಯವಸ್ಥೆಯು ತಪ್ಪಿಹೋದಂತಾಗಿದೆ. ಇಂದಿನ **ಖಾದೀ**ಯುಗದಲ್ಲಿಯಂತೂ ತಿರುಕನಿಂದ ಅರಸರ ವರೆಗೆ ಎಲ್ಲರೂ ಒಂದೆ ಬಗೆಯವರಾಗಿ ಕಾಣುವರು. ಗೋವಿಂದ ವೈದ್ಯನ ಕಾಲದ ಕರ್ಣಾಟಕದಲ್ಲಿ **ಮಾಂಡಲಿಕರು ತಾಲಿ, ಚೌಕುಳಿ, ಹೊನ್ನಸರ, ಮುತ್ತಿನ ಜೂಳಿಯು, ಕಡಗ, ಕಂಕಣ** ಮೊದಲಾದ ತೊಡಿಗೆಗಳನ್ನಿಟ್ಟುಕೊಳ್ಳುತ್ತಿದ್ದರಲ್ಲದೆ, ಮೈಯಲ್ಲಿ '**ಪೈರಣೆ**' ಗಳನ್ನು ತೊಡುತ್ತಿದ್ದರು ; ಭುಜದ ಮೇಲೆ '**ಮೇಲುದುಪ್ಪಟ**' ಏರುತ್ತಿತ್ತು. ತಲೆಗೆ '**ಮುಂಡಾಸು**' ಗಳನ್ನು ಸುತ್ತುತ್ತಿದ್ದರು. **ನಾಯಕರು** '**ಮುಂಗೈಯ್ಯಮುರಿ, ಮುರಡಿಯ ಸರಪಳಿ, ಹೊನ್ನುಂಗರ, ತೊಳಬಾಪುರಿ**' ಗಳಿಂದ ಸಿಂಗರಿಸಿಕೊಂಡಿರುತ್ತಿದ್ದರು. **ರಾವುತರು** 'ಕಾಯದೊಳಳವಟ್ಟ (ಮೈಗೆ ಹತ್ತಿಕೊಂಡಿರುವ) **ಹೊನ್ನಪಗಲೆ**' ದಿವ್ಯಾಯುತದ ಆಭರಣಗಳು, '**ಬಿರುದಿನ ಚಿಂದೆ**' ಗಳಿಂದ ಕೂಡಿರುವರು. **ಸುಭಟ**ರೆನಿಸಿಕೊಳ್ಳುವವರೆಲ್ಲ **ಪಟ್ಟೆಯ ದಟ್ಟಿ, ಕುಂಕುಮಗಾಸೆ**ಗಳನ್ನು ಉಟ್ಟಿರುವರು. **ಒಂಟೆಯ ಸವಾರರು** 'ಉತ್ತರಿಗೆ, ಹೊನ್ನಸರ, ಗಂಟೆಸರಪಳಿ, ಮುತ್ತಿನ ಕಡುಕು' ಗಳಿಂದ ಕೂಡಿ ಇರುತ್ತಿದ್ದರು. '**ಮೈಗಾವಲೂಳಿಗದವರು**' ಚಿನ್ನದ ಹರಡೆ, ಬಿರುದಿನ ಬೆಳ್ಳಿಯ ಕಟ್ಟಿನ **ನೇಜೆಯ** (ಬರ್ಚಿ) ಗಳನ್ನು ಕೈಯಲ್ಲಿ ಹಿಡಿದುಕೊಂಡು ಇರುತ್ತಿದ್ದರು.

**ಅರಸರ ಅರಮನೆಯವರ ಉಡುಗೆ-ತೊಡಿಗೆ.**

ಹೆಂಗುಸರು ಆಗಲೂ ತುಂಬ ಅಭರಣಪ್ರಿಯರಾಗಿದ್ದರೆಂದು ತೋರುವುದು. ಆಗಿನ ಅವರ ಆಭರಣಗಳೆಂದರೆ 'ಅಂಗುಟಕೆ ವೀರಮುದ್ರೆ', ಹೊನ್ನ **ಕಾಲುಂಗರ, ಪಿಲ್ಲಿ, ಮೆಂಟಿಕೆ, ಕಿರುಪಿಲ್ಲಿ. ಚರಣಪೆಂಡೆಯ, ಪಾಯವಟ್ಟೆ, ಹೊನ್ನಗಂಟೆಸರ**, ರನ್ನ ಬಲೆಯ **ಉಡಿದಾರ** (ರಶನಾ), **ಕಟಿಸೂತ್ರ, ಕಾಂಚೀದಾಮ, ಪುಸ್ತಿ, ಮುಕ್ತಾಳಿ, ರತ್ನಪದಕ, ರತ್ನದ ಬೊಟ್ಟು** (ಮೂಗಿಗೆ), **ಹರಳೋಲೆ, ತ್ರಿಸರ, ಚಿಂತಾಕು,**

**ಹೆಂಗುಸರ ಉಡುಗೆ-ತೊಡಿಗೆ**

**ಮೂಗುತಿ, ಕಡಗ, ಕಂಕಣ, ಮುದ್ರೆಯುಂಗುರ, ಚೌಸರ, ನೂಪುರ, ಕೊಪ್ಪು, ವೆಂಟೆಯ ಚೌಕುಳಿ, ಸರತಾತಿ, ಹೊಂಬಳೆ, ಜಡೆಬಂಗಾರ** ಮೊದಲಾದ ಕೊರಳು, ಕಿವಿ, ಮೂಗು, ಸೊಂಟ, ಕಾಲು, ತಲೆಗಳ ಚೆಲುವನ್ನು ಹೆಚ್ಚಿಸಿ ತೋರಿಸುವಂತಹವು. ಹೆಂಗುಸರು 'ಮಿಸುಪ **ಸಂಪಗೆಗಾವಿ, ಸಂಧ್ಯಾವಳಿ, ಶುಭ್ರವಸನ** ಮೊದಲಾದ ಬಣ್ಣಬಣ್ಣದ ಸೀರೆಗಳನ್ನುಡುತ್ತಿದ್ದರು. ಸರಿಗೆಯುಂಚಿನ **ರವಿಕೆ**ಗಳನ್ನು ತೊಡುತ್ತಿದ್ದರು (೯ನೆಯ ಸಂಧಿಯಲ್ಲಿಯ 'ಮದನ-ಮೋಹಿನಿ' ಯ ಅಲಂಕಾರದ ವರ್ಣನೆ ನೋಡಿರಿ).

ತೆಲುಗು, ತುರುಕ, ತಿಗುಳ, ಮಲೆಯಾಳ, ಕೊಡಗು ದೇಶದ ಸ್ತ್ರೀಯರ ಉಡಿಗೆ ತೊಡಿಗೆಗಳ ವೈಶಿಷ್ಟ್ಯವನ್ನು ಗೋವಿಂದವೈದ್ಯ ಚೆನ್ನಾಗಿ ಹೇಳಿರುವನು. ಹೇಗೆಂದರೆ :

**ತೆಲುಗುನಾರಿಯರು** 'ಅಲಘುನಿತಂಬದ, ಚರಣಪಲ್ಲವಗಳ, ಕೆಳೆಗೊಂಡ ವೇಣಿವಲ್ಲರಿಯ, ನೆಲೆಮೊಲೆಗಳ ಬಿಣ್ಪಿನ, ಬೆಡಗಿನ ಚೆಲ್ವೆಯರು.

**ತುರುಕನಾರಿಯರು** 'ಉರತುಂಬಿ ಮೆರೆವ ಕಂಚುಕ, ಕಾಲ ಕುಪ್ಪಸ, ಮಿರುಪ ದುಪ್ಪಟದ ನಿರಿಗಳ, ಸುರುಚಿರ ಶೃಂಗಾರದಾಭರಣದ' ಚೆಲ್ವೆಯರು.

**ತಿಗುಳನಾರಿಯರು** 'ಜಘನವನಲೆವ ನಿರಿಗಳ, ಹೊಂಗೆಜ್ಜೆಯ, ಬಗಸೆಗಂಗಳ, ತೋರವೊಲೆಯ, ಸೊಗಸುವ ವಾರೆದುರುಬಿನ' ಸುಂದರಿಯರು.

**ಮಲೆಯಾಳದ ಶಶಿಮುಖಿಯರು**, 'ಮಿಸುನಿಯ ಜೀವಪುತ್ತಳಿಗಳಂದದೆ ರಂಜಿಸುವ ದಿವ್ಯಾಂಗ, ಸುಂದರದ ಹೊಸದುಪ್ಪಟದ ಗಾಸೆಯ' ಚದುರೆಯರು.

**ಕೊಡಗಿತಿಯರು** 'ಕಿವಿಯೊಳೊಪ್ಪುವ ತೊಂಬೆಗಡುಕಿನ, ಕಡುಚೆಲ್ವ ಪೊಂವಾರಗಿರಿಯ, ಬಡನಡುವಿನ, ಬಟ್ಟಕುಚದ' ಸುಂದರಿಯರು.

ಕುದುರೆಗಳಿಗೆ ನವರತ್ನದ **ಕಾಲುಂಗಗ್ಗರ, ಪೊಂಗೆಜ್ಜೆ**ಗಳನ್ನೂ **ಮುತ್ತಿನ ಕುಚ್ಚು** (ತುರಾಯಿ) ಗಳನ್ನೂ 'ಸೆಡಕಿನ ಝುಲ್ಲಿ, ತೆರನ **ಪಕ್ಕರಿಕೆ** (ಜೀನು)' ಗಳನ್ನೂ ಹಾಕುತ್ತಿದ್ದರು. ಬಂಗಾರಬಣ್ಣದ
**ಆನೆ–ಕುದುರೆಗಳ ಶೃಂಗಾರ.** ಕಡಿವಾಣಗಳೂ **ಮೊಗಗನ್ನಡಿ**ಗಳೂ ಇರುತ್ತಿದ್ದುವು. ಕೊರಳೊಳಗೆ **ಮುತ್ತಿನ ಸರ ಮಾಣಿಕದ ಜೂಳಿಯ**ುಗಳಿರುತ್ತಿದ್ದುವು. **ಪೊಂಬಾವಡೆ**ಗಳಿಂದ ಅವು ಸಿಂಗರಗೊಂಡಿರುತ್ತಿದ್ದುವಲ್ಲದೆ, ಅವುಗಳಿಗೆ 'ಕಟ್ಟಾಣಿ ಮುತ್ತಿನ **ಮೊಗರಂಬ**ಗಳೂ' 'ಮಿಸುನಿಯ ಗುಬ್ಬಿಗಳ ಕಟ್ಟಿದ **ಹೊಕ್ಕುಳ ಗಂಟೆ**' ಗಳೂ ಇರುತ್ತಿದ್ದುವು.

ಆನೆಗಳ ಬೆನ್ನ ಮೇಲೆ **ಪೊನ್ನರೆಂಚಿಗೆ**ಗಳನ್ನು ಅಳವಡಿಸಿರುವರು. ಎರಡೂ ಕಿವಿಗಳಿಗೂ ಝುಲ್ಲಿ (ಗೊಂಡೆಯ)ಗಳನ್ನು ಕಟ್ಟಿರುತ್ತಿದ್ದರು. ಕೆಲವು ಆನೆಗಳ ಕಿವಿಗಳಲ್ಲಿ ಮುತ್ತಿನ ಗೊಂಚಲುಗಳೂ ಇರುತ್ತಿದ್ದುವು. ಎದೆಗೆ 'ಹೊರಜಿ (ದಪ್ಪಗಿನ ಹಗ್ಗ)'ಗಳನ್ನು ಕಟ್ಟಿರುತ್ತಿದ್ದರು. ಹಣೆಯ ಮೇಲೆ 'ಮಿಸುನಿಗನ್ನಡಿ'ಗಳಿರುತ್ತಿದ್ದುವು. '**ಕೊರಳ ಹೊರಜಿ**, ಕುಂಭಸ್ಥಳ **ಕೋಹಾಳ, ಸರಗಂಟೆ, ಪಕ್ಕಗಂಟೆ, ಬಿರುದಿನ ಪಟ, ಪಲ್ಲವಸತ್ತಿಗೆ**' ಇವೆಲ್ಲ ಆನೆಗಳ ಅಲಂಕಾರಗಳಾಗಿ ಇದ್ದುವು.

## ೧೦. ಕೊನೆಗೆ ಮೊದಲು

ಸರಿ! ಗೋವಿಂದವೈದ್ಯನ ಚಾರಣಕವಿತ್ವವನ್ನೂ, ೩೦೦ ವರ್ಷಗಳಿಗೆ ಮೊದಲಿನ ಕರ್ಣಾಟಕದ ಜನಜೀವನವನ್ನೂ, ಗೋವಿಂದವೈದ್ಯ ಕವಿಯ ತುಂಬುನೆರವಿನಿಂದ ಇಲ್ಲಿಯ ವರೆಗೆ ಹೇಳಿದುದಾಯಿತು. ಆಗ ದೇವಾಲಯ ಗಳಲ್ಲಿ ನಡೆಯುತ್ತಿದ್ದ ಸೇವೆ-ನಿತ್ಯಕಟ್ಟಲೆಗಳನ್ನೂ, ಹಬ್ಬಹರಿದಿನಗಳ ವಿಶಿಷ್ಟ ಉತ್ಸವಗಳನ್ನೂ ಈ ಪ್ರಬಂಧದಲ್ಲಿ—ಅವಕಾಶಾಭಾವದಿಂದ—ಸೇರಿಸಲಿಕ್ಕಾಗಿಲ್ಲ. ಅದೂ ನಮ್ಮ ಸಂಸ್ಕೃತಿಯದೊಂದು ಮುಂದಡಿಯ ಗುರುತಾದರೂ, ಸಾಂಪ್ರದಾಯಿಕ ದೇವಾಲಯಗಳಲ್ಲಿ ಈಗಲೂ ಅವೆಲ್ಲ ಸೇವೆ-ನಿತ್ಯಕಟ್ಟಲೆ-ಉತ್ಸವಾದಿಗಳು ನಡೆಯುತ್ತಿರುವುದರಿಂದ, ಅವುಗಳನ್ನು ಪ್ರತ್ಯಕ್ಷವಾಗಿ ಈಗಲೂ ನೋಡಬಹುದಾಗಿದೆ. ನಮ್ಮ ಜನರು ರಾಜ್ಯಸಂಸ್ಥೆಗಳನ್ನು ಕಳೆದುಕೊಂಡರಾದರೂ, ಧರ್ಮಸಂಸ್ಥೆಗಳನ್ನು ಇದುವರೆಗೆ ಎಂದಿನಂತೆಯೆ ಕಾಯ್ದುಕೊಂಡು ಬಂದಿರುವರು. ಆದುದರಿಂದಲೆ ಈ ಪ್ರಬಂಧದಲ್ಲಿ ಜನತೆಯ ಧಾರ್ಮಿಕಜೀವನವನ್ನು ನಾನು ಹೆಚ್ಚಾಗಿ ತೋರಿಸಿರದೆ, ಕೇವಲ ಲೌಕಿಕ-ಜೀವನದ ಚಿತ್ರಗಳನ್ನೆ ತೋರಿಸಬೇಕೆಂದು ಹವಣಿಸಿರುವೆನು. ಆ ಹವಣಿಕೆ ಎಷ್ಟರ ಮಟ್ಟಿಗೆ ಪ್ರಯೋಜನಕಾರಿಯಾಗಬಹುದೆಂಬುದನ್ನು ಬಲ್ಲವರು ನಿರ್ಣಯಿಸಬೇಕು.

**"ದೊರೆರಾಯ ಕಂಠೀರವ ನರಸೇಂದ್ರನ**
**ಪರಮಮಂಗಳ ಪುಣ್ಯಚರಿತೆ**
**ವರಸೋಮಾರ್ಕರುಳ್ಳನ್ನ ಸುಸ್ಥಿರವಾಗಿ**
**ಧರೆಯೊಳು ಪರಿಶೋಭಿಸಿರಲಿ!**

**ಶಾಂತಿಃಪುಷ್ಟಿಸ್ತುಷ್ಟಿಶ್ಚಾಸ್ತು!**

ಈ ಗ್ರಂಥದಲ್ಲಿ ಬಂದಿರುವ

# ಉದ್ಯೋಗ-ಜಾತಿವಾಚಕ ಪದಗಳ ಅಕಾರಾದಿ ಸೂಚಿ

---

# ಮುಖ್ಯಮುಖ್ಯ ವ್ಯಕ್ತಿಗಳ ನಾಮಪದ ಸೂಚಿ